ಮುದ್ದಣಕವಿಯ

# ಶ್ರೀ ರಾಮಾಶ್ವಮೇಧಂ

(ಅರ್ಥಕೋಶದೊಡನೆ)



ಮೈಸೂರು

ಕಾವ್ಯಾಲಯ :: ಪ್ರಕಾಶಕರು

ಕನ್ನಡ ಕಾವ್ಯಮಾಲೆ

ಮುದ್ದಣ ಕವಿಯ

# ಶ್ರೀ ರಾಮಾಶ್ವಮೇಧಂ






ಮೈಸೂರು :
ಕಾವ್ಯಾಲಯ :: ಪ್ರಕಾಶಕರು

# ವಿಷಯಸೂಚಿಕೆ



ನಂದಳಿಕೆ ಲಕ್ಷ್ಮೀನಾರಣಪ್ಪ (೧೮೭೦–೧೯೦೧)

(ಮುದ್ದಣ)

ಕೃಪೆ: ಸೆಂಟ್ರಲ್ ಕಾಲೇಜ್ ಕರ್ನಾಟಕ ಸಂಘ

# ಶ್ರೀರಾಮಾಶ್ವಮೇಧಂ



## ಪ್ರಥಮಾಶ್ವಾಸಂ

## ಕಥಾಮುಖಂ

ಓವೋ! ಕಾಲಪುರುಷಂಗೆ ಗುಣಮಣಮಿಲ್ಲಂ ಗಡ! ನಿಸ್ತೇಜಂ ಗಡ! ಜಡಂ ಗಡ! ಒಡಲೊಳ್ ಗುಡುಗುಟ್ಟುಗುಂ ಗಡ! ಏನರಮನೆವಾಗಿಲಂ ಮುಗಿಲ್ದೆರೆಯಿಂ ಬಾಸಣಿಸಿರ್ಪರ್? ಆರ್ಗಂ ಪುಗಲಾಣತಿಯಿಲ್ಲದಿರ್ಕುಂ; ಮಡದಿ ಬಾನ್ನೀಱೆಯೊರ್ವಳ್ ಚಂಚಲದೃಷ್ಟಿಯಿನತ್ತಮಿತ್ತಂ ನೋೞ್ಪಳ್; ಮೂಲಿಗೆಮರ್ದಂ ಕೊಂಡುಯ್ವೊಡಕ್ಕುಂ. ಸಿಡಿಲಾಳ್ ತಡೆಯದೆಡೆಯ ನಡುವೆಟ್ಟುಗಳ್ಗೆ ಕಟ್ಟುಬ್ಬರದಿಂ ಬಂದೆಱಗುಗುಂ; ಕುತ್ತಮೇಂ? ಸುಗ್ಗಿಯೊಳುಂಡುದಂ ಕಾರೊಳ್ ಕಾಱುವನಕ್ಕುಂ; ಕಾಲಂ ಕಷ್ಟಂ! ಕಷ್ಟಂ!!

ಎಲೆಲೆ ಸೋಗೆ ನವಿಲೆ! ಏಂ ನಲಿವೈ! ನಿನಗಮಾತಂಗಮನಿತ್ತು ಪಗೆಯೇಂ? ಕಟ್ಟಾಸುರದ ಬೇಸಗೆಯೊಳೋಸರಿಸದೆ ಗಾಸಿಗೈದನೆನುತೆಯೆ? ಚಿಃ! ಚಿಃ! ಪೆಱವರ ಕಿಡುದೆಸೆಯೊಳ್ ಕಡುಸಂತಸಕ್ಕೆಡೆಗುಡದಿರ್. ಪೋ ೧೦
ಪೋ! ಸೊರ್ಕನುಱಿದು ನಿನ್ನಿರ್ಕೆಗೆ. ಏನೆನ್ನ ಸುಡಿಯಂ ಕಡೆಗಣ್ಚಿ ಮತ್ತಂ ಮತ್ತಂ ಮುತ್ತ ಪೊತ್ತಿನಂತೆ ಮೈವೆರ್ಚುವೈ? ಇದರ್ಕೆಯೆ ನಿನಗಿಂತು ವಿಜಾತಿಯೊಳಮಧೋಗತಿಯೊದವಿತ್ತು.

ಬಾಯ್ವಿಡದಿರೆಲೆ ಚಾದಗೆಯೆ! ತಿರೆಯೊಳ್ ಪೆಱರ ಸಿರ್ಕಿನೊಳ್ ಮುಱುಕಮುಳ್ಳರೊಳ್ ನಿನ್ನನ್ನರೊಳರೇ? ನಿರ್ನೆರಮುೞಲದಿರ್. ಆವೆಯಾದೊಡಮೇವರ್? ಕರ್ಮಪುರುಷಂಗೆ ಸೊರ್ಕುಂ ಸಿರ್ಕುಮೆಂದಿರ್ಕಣ್ಣಲ್ತೆ! ಅತ್ತ ಪೋಗಲ್ವೇೞ್ಕುಮೆಂಬೆಯೇಂ? "ಗಗನಮುಖಂ ದುಃಪ್ರವೇಶ್ಯಂ" ಎಂದು ಡಂಗುರಮಿರ್ಕುಂ; ಅದಱಿನೀಗಳ್ ಪೋಪುದು ಪದನಲ್ತು. ತನ್ನಾಣೆ! ಕತಿಪಯ ದಿನಂಗಳೊಳೆ ಎಱೆಯಂಗೆ ಕ್ಷೇಮಮಕ್ಕುಂ ದಿಟಮೆಂದು ಗ್ರಹಗತಿಯನಾರೈದ ಜೋಯಿಸರೆಂದರ್. ಅದಱಿಂದೆದೆ*ಗಿಡದೆ ನಿನ್ನೆಡೆಗೆ ಪೋಗು. ಪಯಣಂ ೨೦
ಸೊಗಮಕ್ಕೆ.

ಒಗ್ಗಿಸಲೆ ಕೋಗಿಲೆ! ಏನೀಮಾಮರದ ಸೆಳೆಗೊಂಬಿನೊಳ್ ಮೂಗು ವಟ್ಟಿರ್ಪಯ್? ಕಣ್ಮರಲ್ ಕೆಂಪಾದುವೇಕೆ? ಏತರ್ಕೆ ಬೆಱಗುವಡುವಯ್? ಅರೆನುಡಿಯೊಳೆಂಬುದೇಂ? ತಳಿರಿಲ್ಲಮೆಂಬೆಯ? ಅಲ್ತು; ಕಾಲಪುರುಷಂ ಜಡಭರಿತನೆಂಬೆಯ? ಅಂತದನಾರೊರೆದರ್? ಇಂತಿದನಱಿತುಂ ಸೋಂಬ ನಾಗಿರ್ಪುದೊಳ್ಳಿತೆ? ಆರಯ್ವುದಾರಯ್ವುದೀಪರಿಯುಂ. ನಡೆನಡೆ.

ಇತ್ತಲಿದೆಕೊಳ್ ತಾಮ್ರತುಂಡನೇನನೋ ಗೊಣಗುತಿರ್ಪಂ, ಕೇಳ್ವೆಂ. ಪಂಡಿತವಕ್ಕೀ! ನಿನಗೀಪೆಸರನಾರಿಟ್ಟರ್? ಬಸಂತನೇಂ? ನೀಂ ಪಂಡಿತಂ ದಿಟಮಾದೊಡೆ ನೀಗರ್ಪತ್ತ್ರಕ್ಕೆ ಮರ್ದನುಸಿರ್. ಏಂ ಮಾಂಬಱಂ, ನೇಱಿಲ್? ಮಾರ್ನುಡಿಯದೇತರ್ಕೆ ವಿಮುಖನಾದ್ಯೆ? ಸೊರ್ಕಿನುರ್ಕಿಂ ಬೀಗಿರ್ಪಯ್. ೧೦ ಇರ್ಕೆ: ಕೂರಿದರೊಳ್ ಕೂರದೆ ತಕ್ಕರೊಳ್ ತಗದೆ ನುಡಿಸಿದರೊಳ್ ನುಡಿಯದಿರ್ಪೀಕತದಿಂ ನಿನಗೆ ವನವಾಸಂ ಪ್ರಾಪ್ತಮಕ್ಕೆ! ಲೋಗರ ಕೈಗೆ ಸಿಲ್ಕಲೊಡಮೊಡನೆಯೆ ನಿನಗೆ ಬಂಧನಮಕ್ಕೆ! ಅಂತು ಪಂಜರನೊಳಾನುಂ ಪಂಜರನೊಳಾನುಂ ಸಾವಕ್ಕೆ! ಇದೆನ್ನ ಸಾಪಂ. ನಿನಗಮೀಪೊಳ್ಳುಬೀರಮ ನಿತ್ತ ಬಸಂತಂಗಂ ಧಿಕ್ಕಾರಂ!

ಈಗಡೆ ಉಟಿಗಂ ಸಗುಣನುಡಿಗುಂ. ಒಂದು, ಎರಟ್ಮೂಱು. ಭದ್ರಂ, ಶುಭಂ, ಮಂಗಳಂ. ಹೀ ಹೀ! ನೋವು ಮಾಯ್ವುದು; ಸಂದೆಯಮಣಮಿಲ್ಲಂ.

ವಾರಗೇಱಿಯೊಳೇಱುಂಜೌವನದ ನೀಱೆಯರ ಮೇಲುದಱ ಸೆಱಂಗನೋ ಸರಿಸಿ ಸಾರೆ ನಿಲ್ತು ತೋರಮೊಲೆಗಳಂ ಸೇರ್ದುರ್ಪ ಪಿಡಿದೌಂಕಿ ಪಾಱುಬೊಜ ಗನಂತೆ ಮೀಱಿ ನಿಟ್ಟೋಟಂಗೊಂಡು ತೊಟ್ಟನೆ ಕಟ್ಟಿದಿರೊಳಿಟ್ಟಣಿಸಿ ಗಟ್ಟಿ ೨೦ ಮಗುಳ್ಚುವ ಗಟ್ಟಿವಳ್ತಿಯರ ಪಟ್ಟುಡೆಯೊಳ್ ಕಟ್ಟುವಡೆದುಂ, ಕೈಯೆಡೆಯೊಳ್ ಮೆಯ್ಯುಡಿದುಂ, ಕಂದಿನೊಳ್ ಕಂದಿಯುಂ, ಅಸವೆಯೊಳಸಕಳಿದುಂ, ಸುಯ್ಯೊಳ್ ಸುಗಿದುಂ, ಸಿರಿಕಂಡದ ಕೋಡ್ಕೆಸಱೊಳ್ ಕಾಲ್ಕುಸಿದುಂ, ಪಾಱುಗೆಯ್ತ್ತಕ್ಕೆ ಬಂದಿವಟ್ಟುಮಂತುಮಿಂತುಂ ಮುಂತೆ ಸರಿದು ಮಾಲೆ ಗಾರ್ತಿಯರ ಮೇಲ್ಗೈಗಳೊಳ್ ಸಾಲ್ಗೊಂಡು ನೇಲ್ವ ಮಾಲೆದೊಡಂಬೆಯುಂ ತೂಗಿ, ಲತಾಂಗಮಂ ತಾಗಿ, ಬೀಗಿ, ದಕ್ಷಿಣಾನಿಲನಂತಿರೆ ಪಶ್ಚಿಮಾನಿಲಂ ಪೈದೋಱಲೊಡಂ—ಮೊಲ್ಲೆ ಮುಗುಳ್ತುದು; ವನಮಲ್ಲಿಗೆ ಗಂಟೊಡೆದುದು; ನಾಗವಲ್ಲಿ ಬೆಳ್ಸಟಿವಿಟ್ಟುದು; ಗಱಿವೂ ಗಱಿಗಟ್ಟಿದತ್ತು. ಆಗಳ್—

ಪಡುಗಡೆಯೊಳಿದೇಂ ಪೊಗೆ! ಕಡಲೊಡಲ ವಡಬಂ ಬಿಡದೆ ತೀಡುವ ಬಿಱುಗಾಳಿಯ ತೀಟದಿಂ ದಳ್ಳಿಸಲೊಡಮೆಡೆಗೊಂಡ ಬೆಟ್ಟುಗಳ್ ಕರಂ ೩೦ ಸೀಕರಿವೋಗೆ ಪುಟ್ಟಿತಕ್ಕುಂ. ಓ! ತಪ್ಪಿದೆಂ. ಅಲ್ತು, ಪೊಗೆಯಲ್ತು; ಎನಗಂ

ಪುೞರ್ಱ; ನೀರೊಳ್ ಕಿೞರ್ಱ ಜುೞರ್ಱಗುಮೇ? ಮತ್ತಮೇಂ? ಅಂದು ಸೆರಗಂ ಪಾರ್ದು ಕಡಲಂ ಮಱೆಗೊಂಡ ಕರ್ವೆಟ್ಟುಗಳೀಗಳ್ ಪೂರ್ವವೈರಮಂ ಬಗೆದು ಬದಿ*ಗಲನಾಡಿಂಗೆ ದಾಟಿಡಲ್ಕೆ ದಂಡೆತ್ತಿ ಪೋಪುವಕ್ಕುಂ, ಎನೆ ಕರ್ಮುಗಿಲಾಗಸಮಂ ಮುಸುಂಕೆ ಕಾಲನೆಂಬ ಕಾಳರಕ್ಕಸಂ ಪೊದೆದಿ ನೀಲ ಪಟದೊಂದು ಪಾಂಗಿನೊಳೊಪ್ಪಿದುದು; ಗೆಂಟುಗೆಂಟಿನೊಳ್ ಪೊಳೆವ ಬಳ್ಳಿ ಮಿಂಚು ಬೀಸುವ ಕೈಗೇಣ ಮೈಸಿರಿಯಂತೆ ಕಣ್ಗೆಡ್ಡಮಾದುದು.

ಸಗ್ಗಿಗರಾಣ್ಮನ ಘನಕರಿಘಟೆಗಳ್ ಬೇಸಗೆಯ ಬಿಸರಕ್ಕೆ ಬಸವಳಿದು, ಬಾಯಾಱಿ, ಮುನ್ನೀರ ನೀರಂ ಕಂಡು, ಪಿಂಡುಗೊಂಡು ಬಂದು ನಿಂದು, ಮನಂ ದಣಿವನ್ನಮೋಲಾಡಿ, ಪೊಡೆ ಕೋಡುವನ್ನಂ ಬರೆ ಪೀರ್ದು, ಸೊರ್ಕಿ ಪೋಪೆಡೆಯೊಳ್ ಮೈವಿಟ್ಟು, ಗೀಟಿಟ್ಟು, ಪಟ್ಟುವೆೞ್ಚಿ ನಿಮಿರ್ದ ನಿಡುವಲ್ ಜೆಳಗ, ತುಂಬಿಕೆಯೊಳಿಂಬುಗೊಂಡ ತುಂಬುನೀರಂ ಫೂತ್ಕರಿಸಿದಪುವೆಂಬಂತಿರೆ ಎಡೆವಿಡದೆ ಬಲ್ಸರಿ ಸುರಿಯೆ ಮೞೆಗಾಲಂ ಜೆಲ್ವಾಯ್ತು.	೧೦

ಇಂತು ಮುಂಗಾರ್ ತಲೆದೋಱೆ ತಿರೆವೆಣ್ಗೆ ಮುಗಿಲ್ಸೊಂದಿಯೊಳ್ ಬಳ್ಳಿವರಿವ ನೇಹದಿಂ ಬೆಳ್ಳಂಗೆಡೆವ ಸೊಗದಾಲಿನೀರೆನೆ ಪೊಚ್ಚಂಪೆೞ್ಚಿ ಪರಿದುದು; ಬಗೆಮಿಗೆ ಸೋಲ್ವುದುವೊಂದುಗೂಡಲ್ಕೆಂದು ಬಂದು ನೋಪ್ಪೆಡೆಯೊಳ್ ಪಸದನಂಗೊಂಡಂತಿರೆ ಬಳ್ಳಿವೊದರ್ಮಡಲ್ತು ಸೊಂಪೇಱಿದುದು; ಮೇಣ್ ಪೊಸಸುಸಿಲೊಳ್ ಸಸಿಡೆಬ್ಬ ನಿಮಿರ್ಸವಿರೆನೆ ಪಸಲೆಯೆಸೆದುದು.

ಇದೆ! ಗುಡುಗುಡಿಪ ಮೊಟಗಂ ಕಡುಕಾಯ್ಪೇಱಿದ ಸಿಂಗದ ದನಿಗೆತ್ತು ಬಿಗುತೋರ್ಱಡಿ ಕರ್ಮಡುವಿನ ತಡಂಗುಂಡಿಯೊಳಡಂಗುವುವೆನೆ ಆಱೂಟಕೆಂದು ಯೂಥನಾಥಂ ಮುಂದಿರೆ, ಕಳಭಂ ಬಟಿವರೆ, ಪಿಡಿಯೆಡೆಯೊಳಿರೆ ಒಡಗೂಡಿ ನಡೆದು ನೀರ್ದಾಣಮಂ ಪುಗುವಾನೆವಿಂಡಿನಿಂದೆಯುಂ; ಪಚ್ಚನೆ ಬೆಳೆದ ಪಸಲೆಯ ಪಸುರ್ವುಲ್ಲಂ ಪಸಿವಡಂಗೆ ಮೇದು, ಕೊರ್ಬಿ, ಕೆಲೆದು, ಕಣ್ಮಲೆದು, ಮುಂಗಾಲಿಂ ನೆಲನಂ ಬೆರಂಟುತುೞ್ಚಿ, ಪೆರ್ಮರನಂ ಕಂಡು ಪಾಯ್ದು, ಕೋಡಿಱಿದು ಬಟಲ್ದು, ಎರ್ಮೆಯೆಡೆಗೊಳೆ, ತಾನುಂ ಪಟ್ಟು, ಮೆಲ್ಕೊತ್ತು ತಿರ್ಪ ಜವಹುರದ ಜಕ್ಕಂದೊಟಲಿಯುಂ ಗೆಲೆವರ್ಪ ಕಾಡ್ಕೋಣವಳಗದಿಂದೆಯುಂ; ಬೀಸುವಿಱುಸಲಂ ಸೂಸುವ ಸೋನೆಯುಂ ಸೈರಿಸದೆ ಪಕ್ಕೆಯೊಳಿಪಟ್ಟು, ಕಣಸಂ ಲಲ್ಲೆಗೈದು, ಪರಿವ ಕಾಬ್ಬಿರದ ಕಳಕಳಮನಾಲಿಸುತಿರೆ—ಬಱಿಸಿಡಿಲ ಬಿಱುಸರಮಂಕೇಳ್ದು ಕೊಡಕೆ ಸಿಮಿರೆ ಸವಿಕೊರ್ಕ್ಕರಿಸೆ ತಳರ್ನೋಟದಿಂ ನೋಟ್ಪಹರಿಣಸಂದೋಹದಿಂದೆಯುಂ; ಜಿಡಿಗೆ ಕಡುಸುಗಿದು ತಾಂ ಪೊಱ ಮಡದೆ ಕುಟುಂಕಂ ತರಲ್ಕೆ ಕೆಳೆಯನನಟ್ಟಿ ಕುಳಿರ್ವೆಲರ ಕೋಡಿಂಗೆ ನಡುಗುವ	೩೦

ಕಿಱುವಱಿಯುನೆಱಂಕೆಯೊಳ್ ಪುದುಗಿ ಗೂಡಿನ ಮೊಗವಾಡದೊಳಿರೆಯಿರೆ—ಬಳ್ಳಿವರಿವ ಮಿಂಚಂ ಕಂಡು ತಳ್ಳಂಕಂಗೊಂಡು ಕೇಱು ಮೈಗರೆದು ಜೋಡಿಗನ ಬರವನೆ ಪಾರ್ವ ಪೆಣ್ವಕ್ಕಿಗಳ ತಂಡದಿಂದೆಯುಂ; ವನಾಂತರಂ ಮನೋಹರಮಾದುದು.

ಈತೆಱದೆ ಕಾಡುಂ ನಾಡುಂ ಮನೋಜ್ಞಮಾಗೆ ಸಂಪ್ರಾಪ್ತಮಾದ ವರ್ಷಾಕಾಲದೊಳೊಂದು ದೆವಸಂ ಬೈಗುಂಬೊತ್ತಿನೊಳೆಂದಿನಂತಿರೋಲಗಂ ಪರಿಯೆ ಕಬ್ಬಿಗರ ಬಲ್ಲಹಂ ಮುದ್ದಣನರಮನೆಯಿಂ ಪೊಱಪಟ್ಟು ನೆರೆವೀದಿ ವಿಡಿದು ಪೊರೆವೀಡಿಂಗೈತರ್ಪುದುಮಾತನ ಮಡದಿ ಮನೋರಮೆ ದೂರದೆ ಕಂಡೆಟ್ಟಿ ಇದಿರ್ವಂದು ಕಾಲ್ಗೆ ನೀರಂ ನೀಡಿ ಮತ್ತಂ ಕೈವಿಡಿದೊಳಚೌಕಿಗೆ

೧೦ ಗುಯ್ದು ಮಣೆಯಿತ್ತು ಕುಳ್ಳಿರಿಸಿ ಒಡನೆಯೆ ತನಿವಣ್ಣಂ ತಿಸಲಿತ್ತು ಕೆನೆವಾಲಂ ಕುಡಿವೊಡಿತ್ತು ಉಪಚರಿಸುತಿರ್ದಳ್. ಈವುಪಚಾರದಿನಾತನ ಪಸಿವುಂ ಬಟಲ್ಕೆಯುಂ ಮುಡಿಯೆ ಕೆಳದಿ ಸಱದಂಬುಲಮಂ ಸವಿಯಲ್ಕೆಂಡು ಮಡಿದೀಯುತುಮಿರೆ ಇಂತು ಸುಖಸಲ್ಲಾಪಂಗೊಳುತಿರ್ದರ್. ಅದೆಂತೆನೆ:—

ಮನೋರಮೆ—(ಮೆಲ್ನುಡಿಯಿಂ) ನೋಟ್ಪುದೀಪಗಲ್ಗಳೆಂತೊ ಪಿರಿಯವು. ಪಗಲುಮಿರುಳುಂ ಸುರಿವ ಬಲ್ಸೋನೆಯ ಜಿನುಂಗಿನತ್ತಣಿನೆನ್ನ ಬಗೆಯುಂ ಬೇಸತ್ತುದು. ಅಂತದಱಿನೇನಾನುಮೊಂದು ನಲ್ಗತೆಯಂ ಪೇಟ!

ಮುದ್ದಣಂ—ಪ್ರಾಣೇಶ್ವರೀ! ತಡೆಯೇಂ! ಇನಿತೊಂದು ಬಯಕೆ ತಲೆದೋಱೆ ಆವ ಗಹನಂ? ಆದೊಡಮಾವ ನಲ್ಗತೆಯಂ ಪೇಟ್ವೆಂ? ಏಂ ಭೋಜಪ್ರಬಂಧಂ? ವಿಕ್ರಮ ವಿಜಯಂ? ಮಹಾವೀರಚರಿತಂ?

೨೦ ಮನೋರಮೆ—ಇಸ್ಸಿ! ಇವರೊಳೆನಗಟ್ಕಱಿಲ್ಲಂ; ಉಟಿದೊಡಮಟಿದೊಡಂ ಬಟ್ಟೆದೋಱಿಪ ರಸಭರಿತಂ ಚರಿತಮೈಸೆ.

ಮುದ್ದಣಂ—ನಿನಗಾವ ರಸದೊಳಿಷ್ಟಂ? ಶೃಂಗಾರರಸದೊಳೇ? ವೀರರಸದೊಳೇ? ಹಾಸ್ಯರಸದೊಳೇ?

ಮನೋರಮೆ—ಆವ ರಸದೊಳೆಂದೊಡೇಂ? ನವರಸದೊಳಂ.

ಮುದ್ದಣಂ—ಅಂತಿರೆ ಮತ್ತಮಾಕತೆ ಯಾವುದು?

ಮನೋರಮೆ—ರಾಮಾಯಣದೊಳೇನಾನುಮೊಂದು.

ಮುದ್ದಣಂ—ಅಂತೆಯೆ ಅಕ್ಕೆ. ಸೀತಾಸ್ವಯಂವರಮಂ ಪೇಟ್ವೆಂ.

ಮನೋರಮೆ—ಆಂ ಮುನ್ನಮೆ ಕೇಳ್ದಿರ್ಪೆನಲ್ತೆ!

ಮುದ್ದಣಂ—ಏಂ ಸೀತಾಪಹರಣಕಥನದೊಳ್ ಬಯಕೆಯೆ?

೩೦ ಮನೋರಮೆ—ಉಃ! ಆನೊಲ್ಲೆಂ.

ಮುದ್ದಣಂ—ಮೇಣಾವ ಸಲ್ಗತೆಯಂ ಪೇೞ್ವೆನೋ.

ಮನೋರಮೆ—ಇಂತೇಕುಸಿರ್ವಯ್, ನಾಡೊಳೆನಿತ್ತೊ ರಾಮಾಯಣಂಗಳೊಳವು. ನೀಂ ಕೇಳ್ದುದಱೊಳೊಂದಂ ನಲ್ಮೆದೋಱೆ ಕಂಡುಪೇೞ್ವುದು.

ಮುದ್ದಣಂ—ನೀನೆ ಒಂದನಾಯ್ದು ಕೊಳ್ವುದು.

ಮನೋರಮೆ—ಶ್ರೀರಾಮಂ ಅಶ್ವಮೇಧಮಂ ಕೈಕೊಂಡನೆಂಬರಲ್ತೆ; ಆಕತೆಯೆ ಅಕ್ಕುಂ.

ಮುದ್ದಣಂ—ಈಗಳಱಿತೆಂ; ಶೇಷರಾಮಾಯಣಮಂ ಪೇೞ್ವುದೆಂಬೆಯ?

ಮನೋರಮೆ—ಅಪ್ಪುದಪ್ಪುದು. ಆದೊಡೆ ಮುನ್ನ ಮಾರಾರ್ಗಿದನೊರೆದರ್?

ಮುದ್ದಣಂ—ಮುನ್ನಂ ಶೇಷಂ ವಾತ್ಸ್ಯಾಯನಂಗೆ ಪೇೞ್ದನದನೆಯೆ ನಿನಗೆ ಬಿತ್ತರಿಪೆಂ. ಆದೊಡೆ ಬಲ್ಗತೆ ಕಣಾ! ಒಂದೆರಡ್ದೆವಸಕ್ಕೆ ಮುಡಿಯದು. ೧೦

ಮನೋರಮೆ—ಇರ್ಕೆ. ಓರೊಂದು ದೆವಸಮಿನಿಸಿನಿಸಂ ಪೇೞ್ದೊಡೇಂ?

ಮುದ್ದಣಂ—ಅಕ್ಕುಂ. ಆವ ಥಾಟಿಯೊಳ್ ಪೇೞ್ವೆಂ; ಪದ್ಯದೊಳ್ ಪೇೞ್ವೆನೊ? ಗದ್ಯದೊಳ್ ಪೇೞ್ವೆನೊ?

ಮನೋರಮೆ—ಪದ್ಯಂ ವಧ್ಯಂ; ಗದ್ಯಂ ಹೃದ್ಯಂ. ಹೃದ್ಯಮಪ್ಪ ಗದ್ಯದೊಳೆ ಪೇೞ್ವುದು.

ಮುದ್ದಣಂ—(ನಸುನಗೆಯಿಂ) ಅದಂತಿರ್ಕೆ. ಇಂತಪ್ಪ ಸಲ್ಗತೆಯಂ ಬಿತ್ತರಿಸಿದೊಡೆ ಅರಮನೆಯೊಳ್ ರನ್ನಗಡಗಮಂ ಪೊನ್ನಕಂಠಿಕೆಯಂ ಮೆಚ್ಚನೀವರ್. ನೀನೀವುದೇಂ?

ಮನೋರಮೆ—ಪೆಱತೇಂ? ಎನ್ನನೆ ನಾನೀವೆಂ.

ಮುದ್ದಣಂ—ಬಲ್ಗಡುಸುಗಾರ್ತಿಯೈಸೆ! ಅಱಿಯಾ ಮುನ್ನಮೆ ನಿನ್ನ ತಾಯ್ತುಂದೆವಿರೆನಗಿತ್ತರೆಂಬುದಂ? ೨೦

ಮನೋರಮೆ—ಇದೇತಱ ನುಡಿ! ಪೋಕೆ. ಆಂ ಪರಾಧೀನೆ ಗಡ! ಪುರಾಣಮನೋದಿದಿಂ ಬಟಿಯಮಲ್ತೆ ದಕ್ಷಿಣೆಯನೀವುದು. ಅರಮನೆಯುವರುಂ ಕಬ್ಬಮಂ ಕಂಡಲ್ತೆ ಕಚ್ಚಟಿಯನಿತ್ತರ್. ಆನುಂ ಕತೆಯಂ ಕೇಳ್ದು ಸೊಗಸಾಗೆ ಬಲ್ಲಂತೆ ಸಮ್ಮಾನಿಸುವೆಂ.

ಮುದ್ದಣಂ—ಬಳ್ಳಿತೊಳ್ಳಿತು! ಕತೆಯನಾಲಿಸಿ ಬಟಿಕ್ಕಮೀಯೆಸೆಂದೊಡೆ ಬಿಡೆಂ ನೋೞ್ಪೆಂ.

ಮನೋರಮೆ—ಆನುಂ ನೋೞ್ಪೆಂ ಕತೆಯ ಪುರುಳೆಂತಿರ್ಕುಮೆಂದು.

ಮುದ್ದಣಂ—ಆದೊಡಾಲಿಸು. ಸ್ವಸ್ತಿ ಶ್ರೀಮತ್ಸುರಾಸುರೇಂದ್ರ ನರೇಂದ್ರ ಮುನೀಂದ್ರ ಫಣೀಂದ್ರಮಣಿಮಕುಟತಟಘಟಿತ— ೩೦

ಮನೋರಮೆ—ಓಓ! ತಡೆ! ತಡೆ! ವಸುಧೆಗೊಡೆಯನಪ್ಪ ರಾಮಚಂದ್ರನ ಕತೆಯಂ ಪೇಱನೆ ಬಸದಿಗೊಡೆಯರಪ್ಪ ಸುರೇಂದ್ರರ ಚರಿತೆಯುಂ ಪೇೞ್ವುದೇಂ? ಸಾಲ್ಗುಂ ಸಾಲ್ಗುಂ. ಇಂತೆದೆ*ಗೊಳ್ವ ಕತೆಗೆಂತುಡುಗೊಱೆಯಂ ಗೆಯ್ವೆನೋ!

ಮುದ್ದಣಂ—ನಲ್ನುಡಿಯಿದು ರಮಣಿ! ಕಚಂಗಳಾಣೆ. ಅಲ್ತು ಬಸದಿಯಿಂದ್ರರ ಕತೆಯಲ್ತು; ರಾಮಚಂದ್ರನ ಕತೆಯನೆ ಪೊಗೞ್ದು ಪೇೞ್ವುದಿದು ಸಕ್ಕದದೊಂದು ಚೆಲ್ವು.

ಮನೋರಮೆ—ಲೇಸು, ಲೇಸು! ನೀರಿೞಿಯುದ ಗಂಟಲೊಳ್ ಕಡುಬಂ ತುಱುಕಿದಂತಾಯ್ತು; ಕನ್ನಡದ ಸೊಗಸನಱಿಯಲಾರ್ತನಿಲ್ಲೆನಗೆ ಸಕ್ಕದದ

೧೦ ಸೊಗಸಂ ಪೇೞ್ವುದು ಗಡ!

ಮುದ್ದಣಂ—ಅಪ್ಪೊಡಿನ್ನೆಂತೊ ಒರೆವೆಂ?

ಮನೋರಮೆ—ತಿರುಳ್ಗನ್ನಡದ ಬೆಳ್ನುಡಿಯೊಳೆ ಪುರುಳೊಂದೆ ಪೇೞ್ವುದು. "ಕನ್ನಡಂ ಕತ್ತುರಿ"ಯಲ್ತೆ.

ಮುದ್ದಣಂ—ಅಪ್ಪುದಪ್ಪುದು. ಆದೊಡಂ ಸಕ್ಕದವೊಂದೆ ರನ್ನವಣಿಯಂ ಪೊನ್ನಿಂ ಬಿಗಿದಂತೆಸೆಗುಂ; ಅದಱಿಂ ಕರ್ಮಣಿಸರದೊಳ್ ಚೆಂಬವಳವಂ ಕೋದಂತಿರೆ, ರಸನೊಸರೆ, ಲಕ್ಕಣಂ ಮಿಕ್ಕಿರೆ, ಎಡೆಯೆಡೆಯೊಳ್ ಸಕ್ಕದದ ನಲ್ನುಡಿ ಮೆಱೆಯೆ, ತಿರುಳ್ಗನ್ನಡದೊಳೆ ಕತೆಯುನುಸಿರ್ವೆಂ.

ಎಂಬಲ್ಲಿಗೆ ಮುದ್ದಣಂ ಪೇೞ್ದ ಶ್ರೀರಾಮಾಶ್ವಮೇಧದೊಳ್
ಕಥಾಮುಖಮೆಂಬ ಪ್ರಥಮಾಶ್ವಾಸಂ ಸಂಪೂರ್ಣಂ.

## ದ್ವಿತೀಯಾಶ್ವಾಸಂ

# ಅಗಸ್ತ್ಯಾಗಮನಂ

ಕೇಳೆಲೆ ಬಾಲೆ! ಬಾಲೇಂದುಫಾಲೆ! ಈ ಪೊಡವಿಯೊಳ್ ಚೈತನ್ಯರಾಯುಂ ಮಾಯಾದೇವಿಯುಂ ಮದುವೆನಿಂದ ಪದದೊಳ್ ಪೇರುಕ್ಕೆವದಟ್ಟಿಗೆಂದು ಬೊಮ್ಮನೆತ್ತಿದ ಬಾಂದಱೆಯ ಪೊಂಗಾವೆನೆ, ಎಳೆವೆಣ್ಣ ಪೊರ್ಕುೞಲಗೊಂಡೆಯಂತಿರೆ ಪೊಂಬೆಟ್ಟಂ ಪೊಂಬಸಿರಂಗಿಂಬುವಸದಿಯುಮಲರ್ವೊಡೆಯಂಗೆ ನಡೆದಾಣಮುಮರೆವೆಣ್ಮೆಯ್ಯಂಗೆ ನೆರೆವನೆಯುಂ ದೆಸೆಯಾಣ್ಮರ್ಗೆ ಪೊಸವೀಡುಂ ಬೋಱೆಯರ್ಗೆ ಮೇಳದೆಡೆಯುಮೆನಿಸಿ ಕಣ್ಗೊಳಿಕುಂ. ಇಂತು ಕರಮೆದ*ರ್ಗೊಳ್ವ ಸೊನ್ನೆವೆಟ್ಟಂಗೆ ತೆಂಕಲ್ಗೆ ಭೂರಮೆಯ ಸೀಮಂತರತ್ನಂಬೋಲ್ ರಂಜಿಪ ಅಯೋಧ್ಯಾನಗರದೊಳ್ ನೇಸಱ ಬೞಿಯ ಪಲಂಬರರಸರರಸುಗೆಯ್ಯುತಿರ್ದರ್. ಇವರೊಳ್ ತುತ್ತತುದಿಗಬ್ಧಿಗಬ್ಜಂ, ಪೊಡವಿಗೆ ಮಂಗಳಂ, ಬಾಂಗೆ ಭಾನು ಪುಟ್ಟಿದಂತಿರೆ ದಶರಥಂ ಪುಟ್ಟಿ, ಪೞಿ ಪೊರ್ದದ ಬೞಿಯಱಿಂ ಕಳೆಗುಂ ೧೦ ದದ ತೋಳ್ನೆರಂ ತನ್ನೊಳಾಗೆ ಪೞಿನುಡಿಯುಂ ಬೞಿಸಂದು ಪಲವುಂ ಪಗಲ್ ತಿರೆಯುಂ ಪೊರೆಯುತೆ ಬೞಿಯುಂ ಯಶಶ್ಯೇಷನಪ್ಪಿಸಂ ಆತಂಗೆ ನೆರವಾಂತ ನಾಲ್ಕುಮುಪಾಯದಂತೆ ನಾಲ್ಕುಂ ಪುರುಷಾರ್ಥದಂತೆ ಮೆಯ್ಗೊಂಡು ಪುಟ್ಟಿದ ನಾಲ್ವರ್ ಕುವರರೊಳ್ ಪಿರಿಯಂ ರಾಮಂಗೆ ಪಟ್ಟಾಭಿಷೇಕಮಾಯ್ತು.

ತಾಳ್ಮೆಯೊಳ್ ತಿರೆಯಂತಿರೆ, ಜಾಣ್ಮೆಯೊಳ್ ಗುರುವಿಂಗೊರೆ, ಭೋಗದೊಳ್ ಸುರೇಂದ್ರಂ, ತ್ಯಾಗದೊಳ್ ನರೇಂದ್ರಂ, ಬೀರದೊಳ್ ಭೈರವಂ, ಸಾರದೊಳಗಾರವಂ, ಬೆಂಗದಿರನ ಕಾಯ್ಪು, ತಣ್ಗದಿರನ ತಣ್ಪು, ಸಿಂಗದ ಚಲಂ, ಮಾತಂಗದ ಬಲಂ, ಸಿಡಿಲ ಪೊಡರ್ಪು, ಕಡಲ ಗುಣ್ಪು, ಪಡಿಗೊಳೆ ದಶರಥಕುಮಾರಂ ರಾಜ್ಯಮನಾಳುತಿರ್ದಂ.

ಆತನಾಳ್ವ ನಾಡು ಕೈಲಾಸಮಲ್ಲದೊಡಂ ಸರ್ವಮಂಗಳಾಶ್ರಯಂ; ೨೦ ವೈಕುಂಠಮಲ್ಲದೊಡಂ ಲಕ್ಷ್ಮೀಮನೋಹರಂ; ಸತ್ಯಲೋಕಮಲ್ಲದೊಡಂ ಸರಸ್ವತೀವಿಲಾಸಾಸ್ಪದಂ; ನಾಡಿಗರೊಳೆಲ್ಲರುಂ ಭೋಗಿಗಳ್ ಕುಟಿಲಗಾಮಿಗಳಲ್ತು; ಜೈವಾತೃಕರ್ ದೋಷಾಕರರಲ್ತು; ಪುರಸ್ಕೃತರಭಿಪನ್ನರಲ್ತು. ಅಂತುಮಲ್ಲದೆಯುಂ ಅೞಿಗಬ್ಬಂ ಬೆಳ್ಳಕ್ಕಱಿಗರೊಳ್, ಪೞಿಗಜ್ಜಂ ಪಟ್ಟಸಾಲಿಗರೊಳ್, ಇೞಿನೇಹಂ ತಾಣದೀವಿಗೆಯೊಳ್, ಕೀೞ್ಗ್ರಮೆ ಕಮ್ಮಱರೊಳ್,

ದುರ್ಮತಿ ವತ್ಸರದೊಳ್, ಸುತ್ತೇಂ, ಅತಿಪಾತಂ ಮಧುಪಾನ ವ್ಯಸನದೊಳ್, ಮಧುಪಾನವ್ಯಸನಮಾಱಿಡಿಯೊಳ್, ಆಱಿಡಿ ಪಾದರಿಯೊಳ್, ಪಾದರಿ ಬಸದೊಳಲ್ಲದಿಲ್ಲಂ. ಮನೋಹರೆ! ಮನೋರಮೆ! ಇಚ್ಚಾರ್ಛಸಿರ ನಾಲಗೆಯಿರ್ದುಮೀ ರಾಮರಾಜ್ಯವಂ ಸೇಸಂ ಬಣ್ಣಿಸಲಾರ್ತನಿಲ್ಲಂ ; ಇಂತಿರೆ ಗಾಂಪಂ ಕಾಲುರಿಚ ನೆನಗೊಳವೆ !

ನೋಡ! ನಾಡ ಬೞಿವಿಡಿದು ಪುಣ್ಯವಾಹಿನಿಯೆನೆ ಒೞ್ಕುವ ಸರಯೂ ನದಿಯುಂ ತಾಂ ಕಿನ್ನಲಯೊಳಿರ್ದುಂ ಲೋಗರ್ಗೆ ಮೇಲಂ ಬಯಸುವಳಲಾ ! ಗಂಭೀರೆಯಾಗಿರ್ದೊಡಂ ನಿರ್ಮಲೆಯಾಗಿರ್ಪಿನಮಂತರಂಗಂ ಪೆಱರ್ಗೆ ಕಾಣಲ್ಕಕ್ಕುಂ ; ನಲ್ವೆಂಡಿರಂತಿರೆ ಮಂದಗಾಮಿನಿ ಗಡ ! ತಪ್ಪೇಂ, ನಿಕ್ಕುವಂ
೧೦ ಪೆಣ್ಣೆ ಇವಳ್. ಸರಸಕಮಲಮೆ ಮೊಗಂ ; ಮೀನೆ ಕಣ್ ; ಪಾವಸೆ ಬಿಡುಮುಡಿ ; ಪೊಡೆವಕ್ಕಿ ಬಲ್ಮೊಲೆ ; ಸುೞಿ ಪೊರ್ಕುೞ್ ; ಮಳಲೊಟ್ಟಿಲ್ ಪೊಱವಾಱ್ ; ಕಾಲ್ ಕಾಲ್. ಏಂ ತಡೆತಡೆದು ಪೋಪಳ್ ? ಕಳಕಳ ನಾದಂಗೆಯ್ವಳ್ ? ಓ ! ತಾಯ್ವನೆಯಿನಾಣ್ಮನೆಡೆಗೆ ಪೋಪಳಕ್ಕುಂ.

ನೋೞ್ಪುದು ನೋೞ್ಪುದಿತ್ತಲ್ ಪೊೞ್ದದೊತ್ತಿನೊಳ್ ಪೆರ್ಚಿಬೆಳೆದ ತೋಂಟಂಗಳೆಡೆಯುಂ. ಪರೋಪಕಾರಾರ್ಥಂ ಫಲಂಗಳಂ ಪೊತ್ತು ಫಲಭಾರದಿಂ ಬಾಗಿ ಕೈಕೊಳ್ವುದೆಂದೆಮಗೀಯಲ್ ನೀಡುಂ ನೀಡಿ ನಿಲ್ತಂತಿರ್ಪುವು ಮರಂಗಳ್. ಎಳವಾೞೆಗಳೆಮ್ಮಂ ಕೈವೆಡೆಯಿಂ ಬೀಸಿ ಕರೆದಪುವು. ಇಂತೇಂ ರಸವಾೞೆಯು ಪೆರ್ಗೊನೆಗೆ ಕೀೞ್ಮೊಗಮಾಯ್ತು? ದುಮ್ಮಾನಂಗಡ! ಪೆತ್ತಬ್ಬೆಗೆ ತಮ್ಮತ್ತಣಿಸೞಿವಾಯ್ತೆಂದು ನಾಣ್ಚಿ ತಲೆವಾಗಿರ್ಪುವಕ್ಕುಂ.

೨೦ ಇದೆಕೊಳ್ ! ಕಾಲ್ಗೆ ನೀರೆಂದು ಪೊಂಗಳಸದೊಳ್ ಪನಿನೀರಂ ತುಂಬಿ ಪಱುಮೆತ್ತಿಪಿಡಿದು ಇನ್ನೆಬರಂ ನೀರೆಱೆದು ಪೊರೆದ ಮೇಘರಾಜನ ಬರವನೆ ಪಾರ್ವ ಚೆಂದೆಂಗುಗಳ ಪಂತಿಗಳ್. ಪಚ್ಚೆಯ ಚೆಂಬವಳದ ಲಂಬಣದಿಂ ಸಿಂಗರಿಸಿ ಸೋಗೆವೀಲಿಯುಂ ಬಿಗಿದು ಬಸಂತಂ ನಟ್ಟ ಕಾವನ ಗೆಲ್ಲಗಂಬಮೆನೆ ಕಾಯ್ಗೊನೆಪಣ್ಗೊನೆಯಿಂ ಕಣ್ಗೆಡ್ಡಮಾಗಿರ್ಪುಂ ಕೌಂಗುದೋಂಟಂ. ಕಿತ್ತೀಳೆ ಪೇರೀಳೆ ದಾಳಿಂಬಂ ಬಕ್ಕೆವಲಸು ಪನೆಮರಂಗಳ್ ಎಡೆಯೆಡೆಯೊಳ್ ಮನೋಹರಮಾಗಿರ್ಪುಂ.

ಪೂದೋಂಟದ ನೋಟಮೆಮಗೆ ಮನೋಜ್ಞಂ. ಬಂದುಗೆಯೊಳ್ ಚೆಂಬಣ್ಣಂ ; ಗಱಿವೂವಿನೊಳ್ ಪೊಂಬಣ್ಣಂ ; ಮಲ್ಲಿಗೆಯೊಳ್ ಬೆಳ್ಪು ; ನೀಲಗಂಧಿಯೊಳ್ ಕರ್ಪು ; ಇಂತೋರೊಂದು ಪೂಗಳೊಳೋರೊಂದು
೩೦ ಬಗೆಯ ಬಣ್ಣಮಂ ನೇರ್ಪಡಿಸಿದ ಗಾಂಪನಾವಂ?

ಇದೆ! ಬಂಡುಣಲೆಂದು ತಂಡತಂಡದಿಂ ಮಂಡಳಿಸಿ ಮುಯ್ಯ್ಯೇರಡಿಗಳ್ ಬಂದೆಱಗುಗುಂ. ಉದಿರ್ದ ಪೂವುಡಿ ಬನರಾಣಿಯ ಮೊಗವಾಡದ ಪಳಿಕಿನ ಪೊಸತಿಲೊಳ್ ಬರೆದ ರಂಗವಲ್ಲಿಯೆನೆ ರಂಜಿಕುಂ.

ಓ! ಓ! ಬನಗಾಳಿ! ಇದೇನೀತೆಱದೂಟಿಗಂ! ಇದಿರ್ಗೊಂಡು ಕರೆದುಯ್ಯಲ್ಕೇಂ ಬಂದೈ? ಆಮೆ ಬರ್ಪೆವಲ್ತೆ; ಸಾಲ್ಗುಂ ಸಾಲ್ಗುಮೀ ಯುಪಚಾರಂ; ಬಂದರೆಂದು ಪೇೞರಸಂಗೆ.

ಇದೆಕೊಳಿದೆಕೊಳ್! ಪೊಂಗದಿರಿನೆನೆ ಪೊಂಗದಿರಿಂ ಕಣ್ಗೊಳಿಪ ಕೆಯ್ವೊಲ ನತ್ತಣಿಂ ಪಕ್ಕಿಸೋವ ಕಕ್ಕಸಜವ್ವನೆಯರ ಮೆಲ್ಲುಲಿ ಕೇಳೆವರ್ಪುದು; ಕೈವಳೆಯ ಕಿಱುದನಿ ಮೆಲ್ಲುಲಿಗೆ ಪಾಸಟಿ; ಕಣ್ಬೊಗರ್ ನಗೆಮೊಗದ ಬೆಳಗಿಂಗೆ ನೆರಂ. ಕಬರೀಭರಕೆ ಕೊರಲ್ಕೊಂಕೆ, ಬಟ್ಟಬಲ್ಮೊಲೆಯ ತಿಣ್ಪಿಂಗೆ ೧೦ ನಡು ಬಳ್ಕೆ, ಗುರುನಿತಂಬದ ಬಿಣ್ಪಿಂಗೆ ಕಾಲ್ತೊಡಂಗಟ್ಟೆ ಎತ್ತಂ ಪರಿದು ಸೋವರ್.

ನಡೆ! ಪೋಪಂ. ಓ! ಇದೆ ಇದೆ! ಕಾಣಿಸಿಕೊಳ್ವುದಱವಟಿಗೆ. ಅಱಮೆ ಪೆಣ್ಬರಿಜನಾಂತು ನೀರಂ ಸುರಿವುದೆನೆ ಕಿಱುಜವ್ವನದ ಬಾಲೆಯರ್ ನೀರ ನೆಱೆವರ್. ಕಡೆಗಣ್ಬೊಗರ ಕುಡುನೋಟದಿಂ ನೋಡಿ ಪೆಱೆಮೊಗದ ನಗೆಜೊನ್ನಮಂ ಕೂಡಿ, ಸುಯ್ಯೆಲರ ನಱುಗಂಪನೂಡಿ, ತಣ್ಣೀರಂ ಬಿದುಗಲ್ಗಂಡಲೊಳೊಸರ್ವ ಪನಿನೀರೆನೆ ನೀರಡಿಸಿದರ್ಗೆಱೆದಪರ್. ನಡುವಗಲ ಬಿಸಿಲ ಜಳಕೆ ಬಾಡಿರ್ಪಿನಂ ಬಟ್ಟೆಗರುಂ ನೆಟ್ಟನೆ ಕಟ್ಟೆಯ ಕಟ್ಟೆದಿರ ಪೊಸ ಜಗಲಿಯೊಳಿರ್ದ ತಣ್ಣೆಲರ್ಗೆ ಮೆಯ್ಯೊಡ್ಡಿ ಕಂಪೊಱೆದ ನೀರನೀಂಟಿ ತನುಮನಂಗಳ ಬೞಲ್ಕೆಯನಿಂತು ನೀಗುವರ್. ೨೦

ಈಗಳಿತ್ತಲ್ ಕೇರಿಗಳಂ ನೋೞ್ಪುದು.

ಮನೋರಮೆ—ರಮಣ! ಇದೇಂ ನೋೞ್ಪುದು ನೋೞ್ಪುದೆಂದು ಪೇೞೆಯುಂ ಬೆಳೆಯುನಾವುದಂ ಬಣ್ಣಿಸಲ್ ಪೋಪಯ್! ಮೇಣಾಂ ತೋಱಿದಪು ದೆತ್ತಣಿನಿದುಂ?

ಮುದ್ದಣಂ—ಎನ್ನರಸಿ! ಪೆಱತಾವುದುಮಲ್ತು; ಅಯೋಧ್ಯಾನಗರದ ಬಣ್ಣನೆಯೈಸೆ!

ಮನೋರಮೆ—ಆಗಳೆ ಪೇೞ್ದೆಯಲ್ತೆ ತನ್ನಿಂ ಮುಡಿಯುದೆಂದು.

ಮುದ್ದಣಂ—ಅಪ್ಪುದಪ್ಪುದು! ತಪ್ಪೇಂ?

ಮನೋರಮೆ—ಅಂತಾದೊಡೇಂ ಕನಸೊ? ನೆನಸೊ?

ಮುದ್ದಣಂ—ಇದೇತಱ ನುಡಿ ರಮಣಿ! ೩೦

ಮನೋರಮೆ—ಅಲ್ಲದೊಡೀಗಳೆ ಎಸಗೊರ್ವರ್ ನೆಲನಂ ಮತ್ತೊರ್ವರ್ ಪೊಲನಂ ತೋಱಿ ಬಣ್ಣಿಪುದೇಂ?

ಮುದ್ದಣಂ—ಅಲ್ತಲ್ತು; ಈ ಬಣ್ಣನೆಯನಾಂ ಪೇೞ್ದುದುಮಲ್ತು ನೀಂ ಕೇಳ್ದುದುಮಲ್ತು.

ಮನೋರಮೆ—ಎನ್ನೊಡೆಯ! ಸಂದೆಯಮಿನ್ನುಂ ಪೋದುದಿಲ್ಲಂ.

ಮುದ್ದಣಂ—ಆದೊಡಾಲಿಸು! ಶ್ರೀರಾಮಚಂದ್ರಮನಂತರಸುಗೆಯ್ಯುತ್ತಿರಲೊಡವೊರ್ವರ್ ದರ್ಶನಾರ್ಥಮಗಸ್ತ್ಯಂ ನಿಜಶಿಷ್ಯಂಬೆರಸಯೋಧ್ಯೆಗೈತರ್ಪ ಪದನೊಳ್ ಬಣ್ಣಿಸಿ ಪೇೞ್ದ ನುಡಿಗಳಿವು. ಅದನೆ ಕಂಡುಗಮಂ ಬಳ್ಳದೊಳಳೆದೆನ್ನೈಸೆ!

೧೦ ಮನೋರಮೆ—ಓಹೋ! ಈಗಳಱಿತೆಂ. ಮುಂತೇಂ ಮುಂತೇಂ?

ಮುದ್ದಣಂ—ಪ್ರಿಯೆ! ಈಪರಿಯೊಳೋರೊಂದೆಡೆಯಂ ಶಿಷ್ಯಂಗೆ ತೋಱುತುಂ ಕುಂಭೋದ್ಭವಂ ಶ್ರೀರಾಮನೋಲಗಕೆ ಬರುತುಮಿರ್ದಂ.

ಎಂಬಲ್ಲಿಗೆ ಶ್ರೀರಾಮಾಶ್ವಮೇಧದೊಳ್
ಅಗಸ್ತ್ಯಾಗಮನಮೆಂಬ ದ್ವಿತೀಯಾಶ್ವಾಸಂ ಸಂಪೂರ್ಣಂ.

---

## ತೃತೀಯಾಶ್ವಾಸಂ

# ಯಜ್ಞೋಪದೇಶಂ

ಲೋಗರಱಿವಿನ ಕೊಱತೆಯುಂ ನೀಡುಮೆಣಿಸದೆ ತಗದ ಕಜ್ಜಮನೊಡರ್ಚುತೆ ಕಟ್ಟಕಡೆಯೊಳ್ ಬಱಿಮಱುಕದಿಂ ಮನದೆ ಕುದಿವರ್ ಪಲಂಬರೊಳರ್. ತಿಟ್ಟವಿಟ್ಟ ಪಾಪೆಯೆನೆ ಮೂಗುವಟ್ಟಿರ್ಪರ್. ಈತಂಗಳ್ಗುಪಚಾರಂ ಪ್ರೇತೋ
೨೦ ಪಚಾರಂ; ಕೂಟಂ ಕಾಲಕೂಟಂ; ನುಡಿ ಬಡಿ; ನೋಟಂ ಕಾಟಂ. ಇಂತಿದೊಂದವತೆ. ಮುನಿಯೇನೆಂಗುಂ ನೋೞ್ಪಂ. ರಮಣಿ! ತಪ್ಪಿದೆಂ ತಪ್ಪಿದೆಂ; ಆವುದನೊ ಪೇೞಲ್ತೊಡಂಗಿದೆನೇನುಮನೋ ಉಸಿರ್ದೆಂ, ಕೇಳ್ವುದು ಕೇಳ್ವುದು.

ಇಂತೀವಾಕ್ಯೆಯೊಳ್ ಮೈತ್ರಾವರುಣಿ ಶಿಷ್ಯಂಗೂಡಿ ಬರುತುಮಿರ್ಪುದಂ ಕಟ್ಟಿದಿರೊಳ್ಕಂಡು ಪಡಿಯಱಿಂ ಚೆಚ್ಚರಮೆೞ್ದು ಬಂದೋಲಗದ ಚಾವಡಿಗೆನಿಸುಂ ದೂರದೊಳ್ ನಿಲ್ತು ತಲೆವಾಗುತೆ ನೀಡುಂಗೈಗಳೊಳಿಂತು

ಬಿನ್ನಯಿಸಿದಂ :—ಜೀಯ! ಪೊಱವಾಗಿಲೊಳ್ ಮುನಿಯೊರ್ವಂ ಬಟುವೆರಸು ಬಂದಿರ್ಕುಂ; ಆನುಮುವಸುಮಡಿಯಾಣತಿಯಂ ಪಾರ್ವೆವು.

ಒಡನೆಯೆ "ತಡೆಯೇಂ! ಪುಗಿಸಲ್ವೇಡಾ?" ಎನುತೆ ಸಾವಂತಮನ್ನೆಯರಂ ಬಱಿಯಟ್ಟಿ ಅಣುಗದಮ್ಮನಂ ಲಕ್ಷ್ಮಣನಂ, ತಕ್ಕಂತಿರೆ ಕರೆದು ತರ್ಪುದೆಂದು ಕಳಿಪಿದಂ.

ಆಗಳ್ ಸೌಮಿತ್ರಿ ಮುಂತಪ್ಪರ್ ಬಂದು ಮುನಿಗೆಱಗಿ ಕೈಯಿತ್ತು ಕರೆದುಯ್ವುದುಂ; ಬರ್ಪುದಂ ಕಂಡು ಗದ್ದುಗೆಯಿನಿೞಿದು ನಾಲಡಿಯೊಳ್ ಮುನಿಯನಿದಿರ್ಗೊಂಡು ಪೊಡೆಮಟ್ಟು ಭದ್ರಾಸನದೊಳ್ಕುಳ್ಳಿರಿಸಿ ಅರ್ಘ್ಯಪಾದ್ಯಂಗಳಿಂ ಪೂಜಿಸಿ ಮಧುಪರ್ಕಮಂ ಸಮರ್ಪಿಸಿ ಕುಶಲಮಂ ಬೆಸಗೊಂಡು ಪಚರಿಸುತಿರ್ದಂ. ೧೦

ಅಂತವರಿರ್ವರುಂ ಸುಖಸಲ್ಲಾಪಂಗೊಳುತಿರಲ್ಕೆ ಅಗಸ್ತ್ಯಂ ರಾಮಚಂದ್ರಮನ ಮುಖಮನಿನಿಸುದೂರಂ ನಿಟ್ಟಿಸಿ ಬಱಿಯಂ, "ರಾಯ! ಎಮ್ಮೀ ಮಾನಸರ ಮನೋವಿಕಾರಮುಮನಿಂಗಿತಮುಮಂ ನುಡಿಯಿಂ ನಡೆಯಿಂ ಗೆಯ್ಮೆಯಿಂ ಮೊಗದ ಮಾರ್ಪಾಟದಿಂ ಅಱಿಯಲಕ್ಕುಮೆಂದು ಬಲ್ಲರ ಬಗೆ. ಈಗಳೀಮೊಗಸಿರಿಗೆ ಕಂದುಂ ಮೆಲ್ಲುಡಿಗೆ ಕುಂದುಂ ನಸುಂ ತಲೆದೋಱಿದಂತಿರೆ ತೋರ್ಕುಂ. ಅಂ ತಪ್ಪೆಸಲ್ತೆ! ಅದಱಿನೆಂತೋ ಬಗೆಯೊಳೇನಾನುಮೊಂದು ಬೇವಸಮಿರ್ಕುಮೆಂದಱಿವೆಂ. ಅಂತು ನರರ್ಗೆ ಮೊದಲೊಳಿಂತು ಚಿಂತೆಯೊದವಿದೊಡಂ ಮಾಂಜಿಸಲ್ಕೆಂದು ಪೊಸನುಡಿಯ ಬಿನ್ನಣಮಂ ಪುಸಿನಗೆಯ ಸನ್ನಣಮಂ ತೋರ್ಪಡಿಸುತುಮದಂ ಮಱೆಗೈವುದುಂಟು. ಲೆಪ್ಪದ ಬೊಂಬೆಯನೆಱಕಂಬೊಯ್ದೊಪ್ಪಂಬೂಸಿದ ಪುತ್ತಳಿಯುಂ ಬೇಱಾಗಿ ತೋಱುಗುಮಲ್ತೆ. ೨೦ ಇಂತಿದಱಿನುಂ ಜಾಣರ್ಗವಕಾಶಂ. ಮತ್ತಮುಳ್ಳಲರ್ದ ಕೆಸರ್ಮಲ್ಲಿಗೆಯ ತಾಯ್ವೇರ್ ತಳದಿಂ ಮುಱಿಯೆ ಮೇಲ್ಗೆ ಸೊಗಯಿಕುಮೆ?" ಎಂದಂ.

ಅದರ್ಕಾ ರಾಘವಂ—"ಮುನಿಕುಲಲಲಾಮ! ಅಂತುಟಪ್ಪುದು ನುಡಿಸಾಜಂ. ಸಂಸಾರಬಂಧನದಿಂ ಬಿಗಿವಡೆದೀಬಗೆಯೇಗಳುಂ ಚಿಂತಾಪರಂಪರೆಯಿಂ ಪೊದೆದಿರ್ಕುಂ; ಒರ್ವರ್ಗೆ ಅಮರ್ಚುಗುಂ ಮತ್ತಮೊರ್ವರ್ಗೆ ಸಡಿಲ್ಚುಗುಮೈಸೆ" ಎನುತೆ ಪಡಿನುಡಿದಂ.

ಆಗಳ್ ಲೋಪಾಮುದ್ರಾಪತಿ—"ಆಃ! ರಾಘವ! ಸೊಲ್ಲಿದು ನಿನಗಲ್ತು ಲೋಗರ್ಗೆ. ಸಾಕ್ಷಾನ್ನಾರಾಯಣಂ ತಿರೆಯ ತಿಣ್ಪಂ ತವಿಸಲ್ಕೆಂದು ಪುಟ್ಟಿದಂಗೆ ಚಿಂತೆ ಗಡ! ಗಾಳಿ ಬೆಮರ್ತಂದು ನೇಸಱ್ ಕಂಗಳನಾದಂದು ಅಮರ್ದು ಸಂಜಾಡಂದು ನಿನಗೆ ಬಾಗುಳ್. ಆನೊಂದಂ ಕೇಳ್ದೊಡೆ ೩೦

ನೀನೊಂದಂ ಪೇಳ್ದೈ. ಆರನೊ ಉದ್ಧರಿಸಲ್ಕೆಂದಕ್ಕುಮೀಯೆಣಿಕೆ, ಮುಖದ ಭಂಗಿ. ಅಂತದಱೊಳಂ ಲೋಕಸಮ್ಮತದಿಂ ಪೇಳ್ದೊಡಂ ನೀನೊಂದೆ ಬೆಳ್ಗೊಡೆಯೊಳಾಳ್ವ ರಾಯಂ; ಸಾಮಂತರಾಜರ್ ವಶವರ್ತಿಗಳಾಗಳುಂ ಕಾಣ್ಕೆಯನೀಗುಂ ಸಾಸಿರ್ವರ್; ಪೊನ್ನೊಡೆಯನ ಭಂಡಾರದತ್ತಣಿಂ ಮಿಗಿಲ್ಕೆಸಿರಿ; ಪೊಡವಿ ಬಯಕೆವಟ್ಟಲ್; ಮಾರಿಯ ಕೋಱೆವಲ್ಲಂ ಮುಱಿವ, ಭೈರವನ ಸಿಡುಜಡೆಯಂ ಪಿಡಿವ, ಕಾಳರಕ್ಕಸಿಯ ಕೂರ್ವಾಳಂ ಸೆಳೆವ ಪಡೆವಳರೊಳರ್; ಗುರುಕವಿಗಳಿಂ ಬಳಕೆವೆತ್ತ ಸಚಿವರುಂಟು; ಒಱಿಯೋಜಂ ವಸಿಷ್ಠಂ; ಸಿಂಗನ ಸಿಂಗಮಂ ಮೊಲನೆಱಂಕೆಯಂ ಮಣಲ ನೆಯ್ಯಂ ತಂದೀವ ಸೋದರರ್ ಬೞಿಯೊಳಿರ್ಪರ್; ನಂಟರೆಲ್ಲರುಂ ನೇಹಿಗರ್, ನಾಡಿಗರ್
೧೦ ನುಡಿಯೊಳ್ ನಡೆವರ್; ಐವಾಯ್ಪುಲಿಯೆನೆ ನಗರರಕ್ಷಕನಿರ್ಕುಂ; ಎಂತುಂ ಕಟ್ಟಾಣತಿ ಜವದಂಡೆ. ಅಂತುಮಲ್ಲದೆಯುಂ, ಲೋಕಕಂಟಕರೆನಿಸಿ ಭೂಭಾರಕ್ಕೆಂದು ಪುಟ್ಟಿದ ರಾವಣಕುಂಭಕರ್ಣಾದಿ ದುಷ್ಟ ರಾಕ್ಷಸರಂ ಸಮೂಲಂ ತತ್ತಱದಂಱುದುದಱಿಂ ಮೂಜಗಮುಂ ಸೊಗಂಬಾೞ್ವುದು. ಮೇಣೇತಱ ಚಿಂತೆ; ಕೈವಲ್ಯಸುಂದರೀವದನಾರವಿಂದಮಕರಂದಪಾನಲೋಲುಪ್ತಿಗಿದು ಪೊೞ್ತಲ್ತೆ" ಎಂದುಸಿರ್ದಂ.

ಒಡಿಕ್ಕಂ ರಾಘವಂ—"ಸ್ವಾಮಿ! ನರರ ಬಿಜ್ಜೋದರರ ಸುರರ ಮುನಿವರರ ಮನದೞಲುರಿ ಪಿರಿದಾಗೆ ಆಯುಂ ಬೞಿದಾಗೆ ಶ್ರೀಯುಂ ಕೈವಿಡೆ ತಂತಮ್ಮ ದುಷ್ಕೃತಂಗಳ ಫಲಂಗಳತ್ತಣಿನಾರಕ್ಕಸರ್ ಪೊಂದಿದರಲ್ಲ! ಮೊನೆಯೊಳಾತಂಗಳಂ ಗೆಲ್ವ ಕೊಲ್ವ ಬಲ್ಮೆ ತನಗೆತ್ತಣ್ಣು? ಆದೊಡಮಂತಿರ್ದ ರಾವಣ
೨೦ ಕುಂಭಕರ್ಣರೆಂದೊಡಾರವರ್? ಪುಟ್ಟೇತರ್ಕೆ? ಎಂತು? ಇಂತಿದಂ ಕೂರ್ಮೆಯಿಂ ಪೇೞಲಕ್ಕುಂ" ಎನೆ;

ಜಿತವಾತಾಪಿ ತಾಂ ಮಂದಹಾಸದಿಂ—"ರಘುಕುಲಪಯೋಧಿರಾಕಾಸುಧಾಕರ! ಈ ಕುಲಕೀಸದ್ಗುಣಕೀಸೌಜನ್ಯಕೀನುಡಿ ತಗುಗುಂ. ಪೊಂಬಚ್ಚಮುಂ ಪಣ್ಣಿ ಬಣ್ಣಮುಂ ಕೇಳ್ದಯ್? ಪೋ ಎನಗಱಿವು, ನಿನಗೆ ಬಿಸದಂ, ಕೇಳಾ ಅಟಿರಕ್ಕಸರ ಪುಟ್ಟಂ" ಎನುತುಂ ಪೇೞಲಾರಂಭಿಸಿದಂ:—

ಮುನ್ನಮೊರ್ಮೆ ಸನಕಸನಂದನಾದಿದೇವರ್ ವಿಷ್ಣುವಂ ಪೂಜಿಸಲ್ಕೆಂದು ವೈಕುಂಠಕ್ಕೈತಂದು ಓಲಗಮಂ ಪುಗುತರ್ಪಂದು ಬಾಗಿಲೊಳ್ ಜಯ ವಿಜಯರೆನಿಪ ಪಡಿಯಱರ್ ತಡೆದರ್. ಮೂಗುದುದಿಯೊಳಲ್ತೆ ಮುನಿಸು ಮುನಿಗಳ್ಗೆ! ಒಡನೆಯೆ ಕೋಪದಿಂ ಪೊಡವಿಯೊಳ್ ರಕ್ಕಸರಾಗಿ ಪುಟ್ಟಿ
೩೦ ಮೆಂದು ಕಾವಲರಂ ಬಯ್ದು ಪೋಪುದುಂ, ಮನದೆ ತಲ್ಲಣಂಗೊಂಡು ನಾಥ

ನೆಡೆಗೆ ಪರಿತಂದು ಗೈದ ಗೈಮೆಯುಂ ಬಯ್ದ ಬಯ್ಗುಳಂ ಬಿನ್ನವಿಸಿದರ್. ನಾರಾಯಣನಿಂತಿದಂ ಪರಿಭಾವಿಸಿ ದ್ವಾರಪಾಲಕರ್ಗೆ—ನಿಗ್ರಹಾನುಗ್ರಹ ಸಮರ್ಥರ್ ವಲಂ ಮುನಿಗಳ್, ತೊದಳಾಗದವರ ನುಡಿ. ಆದೊಡಂ ನಿಮ್ಮ ನಿನಿತೊಂದಂ ಕೇಳ್ವೆಂ. ಎನ್ನ ನೇಹಿಗರೆನಿಸುತೇೞುಂ ಮೆಯ್ವಿನಿಳೆಯೊಳ್ಪುಟ್ಟಿ ಬೞಿಯುಮೆನ್ನಂ ಬೞಿಸಾರ್ವುದೊಂದು ; ಪಗೆದು ಮೂಱುಂ ಮೆಯ್ಯುಂ ಸವೆದು ಮೇಣೆನ್ನಂ ಕಾಣ್ಬುದು ಪೆಱತೊಂದು ; ಇವಱೊಳಾವುದು ಮನಕ್ಕೇಱುವುದದಂ ಪೇೞಿಮೆನೆ ; ಮಣಿದು ಜಯವಿಜಯರ್—ಜೀಯ ! ಏೞುಂ ಜನ್ಮದೊಳನಿವಿರಿದುಂ ಕಾಲಮಗಲ್ವುದಾಗದು ; ಪಗೆಗಳೆನಿಸಿಯುಮೆಂತಾನುಂ ಮೂಱುಂ ಜನ್ಮಮಂ ಕೞಿದು ಮತ್ತಂ ನಿನ್ನಂ ಸಾರ್ವುದೆ ಲೇಸು, ಎನುತೆ ಬೇಡಿಕೊಂಡರ್. ಅದರ್ಕೆ ಸಿರಿಯರಸಂ—ತಥಾಸ್ತು, ಎಂದು ಕಳಿಪಿದಂ. ೧೦
ಕೇಳ್ವೈ ! ಆರುಷಿಶಾಪದ ದೂಸಱಿಂ ಆ ಜಯವಿಜಯರ್ ಮಱುವುಟ್ಟಂ ದೈತ್ಯರೆನಿಸುತೆ ಹಿರಣ್ಯಾಕ್ಷ ಹಿರಣ್ಯಕಶಿಪುವೆಸರಿಂ ಜನಿಸಿ ಹರಿಯೊಳ್ ವೈರದಿ ನೞಿದರ್. ಈಗಳವರ್ಗೆರಡನೆಯ ಜನ್ಮಂ. ಎಂತೆನೆ:—ಬ್ರಹ್ಮಂಗೆ ಪೌಲಸ್ತ್ಯನೆನಿಪ ಮಾನಸಪುತ್ರನೊರ್ವನುಂಟು ; ಈತನಿಂ ವಿಶ್ರವಸ್ಸು ಪುಟ್ಟಿದಂ ; ಈತಂಗೆ ಮಂದಾಕಿನೀ ಕೈಕಸೆಯರೆನುತಿರ್ವರ್ ಪೆಂಡಿರೊಳರ್. ಪಿರಿಯಳ್ಗೆ ಧನದಂ ಕಿಱಿಯಳ್ಗೆ ರಾವಣ ಕುಂಭಕರ್ಣ ವಿಭೀಷಣ ಶೂರ್ಪನಖೆಯರುದ್ಭವಿಸಿದರ್. ಇಂತು ಬ್ರಹ್ಮನಿನೀಬಳಗಮಿೞಿದತ್ತೆನುತೆ ಮೇಲಿಂ ಮೇಲುಸಿರ್ದಂ."

ಬಾಲೆ ! ಕೊಡನ ಕುವರನಿಂತು ಪೇೞ್ವುದುಂ ರಾಮಂಗೆ ದುಗುಡಮಿರ್ಮಡಿಯಾದುದು ; ಮೊಗಂ ಕಳೆಗೆಟ್ಟುದು ; ಮೆಯ್ ಕಾವುಗೊಂಡುದು ; ಕಿವಿಗೆ ಕಿವುಡುಂ ಕಣ್ಗೆ ಕುರುಡುಮೆರಡುಂ ಪರಡಿಕೊಂಡುದು. ಈ ತೆಱನೊಳ್ ೨೦
ಮೂರ್ಛೆಗೆ ಸಂದ ರಾಯನೆಂತಾನುಂ ಬೇಗದಿಂ ಸೋದರರ ಶೈತ್ಯೋಪಚಾರದತ್ತಣಿಂ ತೆಪ್ಪತ್ತನಾಗೆ, ಮುನಿಪಂ ನಿರ್ವಿಣ್ಣನಾಗಿ ನೋೞ್ಪುದುಂ, ಬೆಮರ್ತ ಮೈಯಿಂ ಮತ್ತಂ ಮತ್ತಂ ಬಿಸುಸುಯ್ದು ರಾಘವಂ ಮುನಿಗೆಂದಂ :—

"ಆಃ ! ನಿಕ್ಕುವಂ. ಪೊಲ್ಲದ ಕಜ್ಜಮಂ ಪಣ್ಣಿದೆನ್ನೈಸೆ ! ಲೋಕದೊಳೆನ್ನಂ ಕೂಟನೆನರೆ ? ಱಿಕ್ಕಟವಾದುದೀಬೞಿಯೇೞ್ಗೆ. ಪೆಣ್ವದಿಂ ಪಾತಕದಿನಿತೊಂದು ತಿಣ್ಣಮಂ ಪೊಱುವೊಡಂದೇಂ ಬಿದಿಮಾಡಿದನೇ ! ಅಕ್ಕಟಾ ! ಬ್ರಹ್ಮದ್ರೋಹಿಯಾದೆನಲಾ ! ಪೋ ! ಪಾಡ್ಗೆಯ್ಮೆಯುೞಲಿಂತುಟು. ಇಂದೀಗಳ್ ಪೞಿಗೆ ಕಾರಣಂ, ಪೊಂದಿದಾಗಳ್ ನರಕಕಾರಣಂ. ಏವೆಂ ! ಮುಂತೇಂ ಬಟ್ಟೆ ! ಆವ ಜನ್ಮಮಾವ ಹೋಮಮಾವ ಜಪಮಾವ ತಪಮೀದೋಷರಾಶಿಯ ನೇೞಲಾಟಿಪೆನಗೆ ಕಯ್ಯೇಗುಂ ಮುನಿ ಪೇೞಾ !" ೩೦

ಇಂತು ಮರ್ತ್ಯರಂತಿರುಮ್ಮಳದಿನುಬ್ಬಸಂಬಡುವ ರಾಜಪರಮೇಶ್ವರಂಗೆ ಬೆಳ್ಳಗೆಯೊಳ್ ಬಿಂಜದೋಜನೋಜೆಯಿಂ—"ಲೇಸು ಲೇಸೆಲೆ ಸೀತಾರಮಣ! ಈ ಕವಡುನಟನೆಯನಾರ್ಗೆ ತೋಱುಪೈ! ಬ್ರಹ್ಮಹತ್ಯಂ ಗಡ! ದೋಷಂ ಗಡ! ಮೊದಲೊಳೊರ್ಮಡಿಯಿರ್ದುದನೀಗಳಿರ್ಮಡಿಗೈದಂತಿರಾಡುವೈ! ಇಂತಿದಂ ಕಾಣುತೆ ನೋಯಲಾಮುಂ ಭ್ರಾಂತರಲ್ತು. ಏಂ ಕೇಳ್ದಱಿಯೆವೆ ದಾನವರುಪಟಳಕೆ ಬಣ್ಣಂಗುಂದಿ ಬಾರ್ತೆಗೆಟ್ಟು ದೂಱಿದ ಬರ್ದಿಲರ್ಗೆ ನಾರಾಯಣಂ—ಸೈರಿಪುದು ಸೈರಿಪುದು ಪಂತಿದೇರಂಗೆ ರಾಮವೆಸರಿಂ ಪುಟ್ಟುವನ್ನ ಮೆಂದು ಸೈತಿಟ್ಟು ಮರಲ್ಚಿದ ತೆಱಸಂ? ಆ ಆದಿನಾರಾಯಣ ನಿಂತು ಮೈವೆತ್ತು ಪುಟ್ಟಿ ನೆವದಿಂ ಜಾನಕಿಯುಂ ಪೋಗೊಳಸಿ ದಾನವ

೧೦ ರೊಳ್ ಪಗೆಗಟ್ಟಿ, ಕೋತಿವಡೆಯುಂ ನೆರಪಿ, ಕಡಲಂ ಕಟ್ಟಿ, ಕಾದಿ ಬಂಡಣ ದೊಳಸಿಬರಂ ಸೈಮಿನಿಗಟ್ಟಿದುದು ಜನಮೆ ಎಂಗುಂ; ದೆಸೆಮುಟ್ಟಿ ಪರ್ಬಿದುದು ಜಸಂ. ಇಂತಿರೆ ಏನುಮಂ ಮಱುನುಡಿಯಲಾರ್ತೆನಿಲ್ಲಂ" ಎಸುತೆ ಪಡಿನುಡಿದಂ.

ಅದರ್ಕೆ ಶ್ರೀರಾಘವಂ—"ಮಾಂಜದುಸಿರ್ವೊಡಿದು ಬಲ್ಲರ್ಗೆ ನುಡಿ. ಎಗ್ಗರೆ ನರೆ ಲೋಗರಾಡರೆ ಮಡದಿಗೆಂದು ಬ್ರಹ್ಮಘಾತಂಗೈದನೆಂದು? ಇಂತಿದಂ ಬಗೆಯಲ್ವೇಡಾ!" ಎಂಬುದುಂ

ಮುನಿಪಂ—"ಎಗ್ಗರೆಂಗೆ! ಲೋಗರಾಡುಗೆ! ಒಱದೂಱಂ ತಡೆಯಲಾವಂ ಸಾಲ್ವಂ! ಹರಂಗಮಂತಿರೆ ಪೞಗುಂ. ಪೋಕೆ! ಅಂತವಱೊಳಂ ಪಾತಕಂ ಜ್ಞಾತಮಜ್ಞಾತಮೆಂದಿರ್ವಗೆಯಿರ್ಕುಂ. ಜ್ಞಾತಮಾದೊಡೆ ದೋಷಂ ಅಜ್ಞಾತಮಾದೊಡೇಂ ಕಿಱಿದಱಿಸೇನಾನುಮೊಂದು ಪ್ರಾಯಶ್ಚಿತ್ತ"ಮೆನೆ

೨೦ ಮತ್ತಂ ರಘುಪುಂಗವಂ—"ಇಂತಿದು ತಗದು. ಕಿಚ್ಚನಱಿತೊಡಮಱಿಯದೊಡಂ ಕಿಟ್ಟ ಸುಡದೆ! ಇದಱಿನೆನ್ನಿನಱಿಯದುದಾದಟಿಗೆಯ್ಮೆಗಂತೊಂದು ಪರಿಹಾರಮುಂ ತೋಱುತೆನ್ನನುಮಂ ಲೋಗರುಮನುದ್ಧರಿಸಲ್ವೇೞ್ಕು"ಮೆಂದು ಕಾಲ್ಗೆಱಗಿದಂ.

ಇಂತೆಱಗಿದ ರಘುಪುಂಗವನಂ ಮುನಿಪುಂಗವಂ ಕೂರ್ಮೆಯಿನೆತ್ತಿ ತಳ್ಕೈಸಿ—"ಇನಿತೊಂದುಬ್ಬೆಗಮೆಡೆಗೊಂಡಿರೆ ತೊಡಂಕೇಂ? ಬೆದಕಲುಂಟೆ! ಕೈಕೊಳ್ವುದಶ್ವಮೇಧಮುಂ. ನಿನ್ನಯೆ ಪಿರಿಯರಿಂತು ಬೇಳ್ದು ಬೆಳ್ಪಸದಿಂ ದೆಸೆಸೆಂಡಿರ್ಗೆ ಪಸದನಂಗೈದುಂ ಬದಿ*ಲವೆಣ್ಗಳಂ ತೊಟ್ಟುಗೊಂಡರ್. ಇಂತೀಸಪ್ತತಂತುವಿಂ ಪಂಚಪಾತಕಂಗಳುಮೊರ್ಮೊದಲೊಳೆ ಪಡಲಿಡುಗುಂ; ಕ್ಷ್ಮಾಮಡಾಮರಂಗಳುಂ ಬೇರುಡಿದು ಪಾಪ್ಪೋಕುಂ ಪೊಟಲ್ವೊಳ್; ನಿನ್ನ

೩೦ ಬಗೆಯ ಸಂದೇಗಮುಂ ಪೆಡಂಮೆಟ್ಟುಗುಂ; ಲೋಗರ್ಗೆ ಕಲ್ಯಾಣಮು

ಮೊಡಗರ್ಗುಂ ; ಅದಱಿನಿದೆ ನಿನ್ನಿಷ್ಟಾರ್ಥಮಂ ನೆರೆಯಿಕುಂ"ಮೆಂದು ಬೋಧಿ
ಸಿದಂ.

ಆಗಳ್ ರಾಘವಂ—"ಅಕ್ಕುಮಾನುಂ ತಗೆಬಗೆಯೊಳೊಪ್ಪುವೆಂ. ಆದೊಡಂ
ಜನ್ನಕ್ಕೆ ಪೇೞ್ದ ಕುದುರೆಯು ಲಕ್ಷಣಮಾವುದೊ? ವಿಧಿಯೆಂತುಟೊ?
ಮೇಣೆಮ್ಮಂದಿಗರ್ಗೆ ಸಾಧ್ಯಮೊ? ಇವಱೊಳ್ಮನಮೆಣಿಕೆಗೊಳ್ವುದು".
ಎಂಬುದುಂ ;

ಮುನಿ ತಾಂ—"ನಿಮಗಲ್ಲ ಮೇಣಾರ್ಗೆ ಸಾಧ್ಯಂ? ನೆರೆರಾಯರ ನೆರಂ, ಪಡಿ
ಬಲದ ಬಲಂ, ಗುರುಪಿರಿಯರೊಲ್ಮೆ, ಐಸಿರಿಯ ಪೆರ್ಮೆ, ಬಂಧುಗಳ ನಲ್ಮೆ ಪೞಿ
ಗರ್ಗೆ ಗೊರ್ಗಳವು? ಇವಱೊಳ್ ಸಂಕೆವೇಡಂ. ಕುದುರೆಯೊಳೇಂ? ಮೆಯ್ಯೊಳ್
ಬೆಳ್ಪು ; ಮೊಗದೊಳ್ ಕೆಂಕಂ ; ಕೊಡಂಕೆಯೊಳ್ ಕರ್ಪು ; ಬಾಲದೊಳ್ ೧೦
ಪೊಂಬಣ್ಣಮೊಪ್ಪಿರೆ ಮೆಯ್ಗಣ್ಣನ ಕುದುರೆಯೊಂದಂ ಪೋಲ್ವುದೈಸೆ. ನಿನಗೇಂ
ದೊಡ್ಡಿತ್ತೈ! ವಿಧಿಯಿಂತುಟು. ಬೇಸಗೆಯ ಹುಣ್ಣಮೆಯೊಳಂತಪ್ಪ ಹಯಮು
ನರ್ಚಿಸಿ ಹಣೆಯೊಳ್ ಬೞಿಪಿರುದಂ ತನ್ನಗ್ಗಳಿಕೆಯಂ ಬರೆದೋಲೆಯಂ ಬಿಗಿದು
ನಾಡೊಳೊರ್ಕಾಲಂ ಯಥೇಷ್ಟಂ ತೊೞಲಲ್ಕೆ ಬಿಡುವುದು ; ಎಂತೆಂತು ಕುದು
ರೆಯು ಬಟ್ಟೆಯಂತಂತು ಬೆಂಬತ್ತುವುದು ಕಾಪಿನ ಭಟರ್ ; ಬಲ್ಪುಳ್ಳರ್ ಕಟ್ಟಿ
ದೊಡೆ ಮೊನೆಯೊಳ್ ಮಾರ್ಕೊಳ್ವುದುಂ, ಸೋಲ್ತು ಕಪ್ಪಮನಿತ್ತೊಡೆ
ಕೈಕೊಳ್ವುದುಂ, ಕಾವಲರ್ಗೆ ನೇಱುಗುಂ ; ಎನ್ನೆವರಮಶ್ವಮಿಳೆಯೊಳ್ ಸಂಚರಿ
ಕುಮನ್ನೆವರಂ ಯಜಮಾನಂ ಮೃಗಶೃಂಗಧರಂ ನವನೀತವಿಲಿಪ್ತಸುಗಾತ್ರಂ,
ಬ್ರಹ್ಮಚರ್ಯವ್ರತಮನಪ್ಪುಕೆಯ್ದು, ನಮೆವ ದೀನಾಂಧಬಧಿರರಂ ದಾನ
ಧರ್ಮಂಗಳಿಂ ಪಾಲಿಸುತುಂ, ಬ್ರಾಹ್ಮಣರಂ ಭೋಜನದಿಂ ಸಂತುಷ್ಟಿಗೊಳಿ ೨೦
ಸುತುಂ, ಕಾಣಲ್ಕೆಂದು ಬರ್ಪ ಪುರದ ಮನ್ನೆಯರಂ ಮನ್ನಿಸುತುಂ, ಐದೆಯರ
ನೈದೆ ಪೂಜಿಸುತುಂ, ಕಾಲಮಂ ಸಮೆಯಲಕ್ಕುಂ ; ಕಡೆಯೊಳ್ ಯಥಾವಿಧಿ
ಯಜ್ಞಪರಿಸಮಾಪ್ತಿಯುಂ ಗೆಯ್ದು ಬ್ರತಮನುೞಿವುದೈಸೆ. ಇಂತೀಜನ್ನಮಂ
ಬೇಳ್ದು ಲೋಕಮಂ ಕಾಯ್ವೈ ; ಮೇಣ್ ನಿನಗಕ್ಕೆಮ ಸರ್ವಂ ಮಂಗಳಂ."

ಎಂಬಲ್ಲಿಗೆ ಶ್ರೀರಾಮಾಶ್ವಮೇಧದೊಳ್ ಯಜ್ಞೋಪದೇಶಂ
ಎಂಬ ತೃತೀಯಾಶ್ವಾಸಂ ಸಂಪೂರ್ಣಂ.

## ಚತುರ್ಥಾಶ್ವಾಸಂ

# ಗರ್ಭಧಾರಣಂ

ಪೆಣ್ಮಣಿ ಕೇಳ! ಈವುಪದೇಶಂ ರಾಮಂಗವೊಡಂಬಟ್ಟುದು; ವಸಿಷ್ಠಂಗಂ ಸರಿವಟ್ಟುದು; ಸೋದರರರ್ಗಂ ಮನಂಗೊಂಡುದು. ಒಡನೆಯೆ ಸರಯೂತೀರದೊಳ್ ಮುನಿ ತೋಱಿದೆಡೆಯನಾಯ್ದು ಪುರೋಹಿತಾನುಮತದಿಂ ನಾಲ್ಗಾವುದದಳತೆಯೊಳ್ ಯಾಗಶಾಲೆಯಂ ಸೇರ್ಪಡಿಸಿ ಕುಂಬೆಯಂ ಬಲಿದು, ಹಂದರವೆತ್ತಿ, ಕೊಟ್ಟಾರಮಮಂ ಸಮೆದು, ವೇದಿಯಂ ಸಮಕಟ್ಟಿ, ತಗುವೆಡೆಯೊಳ್ ಕೊಂಡಮಂ ಪಣ್ಣಿ ಯಾಗಂಗಳಂ ನೆರೆಯಿಸುತಿರ್ದರ್.

ಆಗಡೆ ವಸಿಷ್ಠಶಿಷ್ಯರ್ ಪೋಗಿ ಮುನಿಸಂದೋಹಮಂ ಕರೆವುದುಂ; ಶ್ರೀರಾಮಚಂದ್ರದರ್ಶನಲಾಲಸರ್ ನಾರದ ಪರ್ವತ ಕಪಿಲಯಾಜ್ಞ್ಯವಲ್ಕ್ಯ ಸಂವರ್ತಾದಿಋಷಿಗಳ್ ನಿಜಾಶ್ರಮಂಗಳಿಂ ತಳರ್ದು ತಳ್ವದೆ ಕೋಸಲೆಗೆ
೧೦ ನಡೆತಂದು ರಾಯನಂ ಕಾಣಿಸಿಕೊಂಡರ್.

ಇಂತು ಬಿಜಯಂಗೈದ ಮುನಿವರ್ಗಮರ್ಘ್ಯಪಾದ್ಯಾಸನಾದ್ಯುಪಚಾರಂಗಳಿಂ ಮನ್ನಿಸಿ ತಪೋವೃದ್ಧಿಯಂ ಕೇಳ್ದು ಗೋಪ್ರದಾನಾದಿದಾನಂಗಳಿಂ ಸತ್ಕರಿಸಿದಂ. ಮತ್ತಂ ಹರ್ಷಚಿತ್ತರಾದಾತವಸಿಗಳುಂ ವರ್ಣಾಶ್ರಮಧರ್ಮಂಗಳಂ ರಾಘವಂಗೆ ನಿರವಿಸುತುಮಿರ್ದರ್. ಆ ಪ್ರಸ್ತಾವದೊಳ್—

ಮಾಮರನೆಳದಳಿರ ರಸಮಂ ಪಿಟಿದು ಕಳಕಂಠನ ಕಂಠನಾಳಕ್ಕೆಱೆದುಬ್ಬಸಮಂ ಕಳೆದು ಕಲನಾದಮಂ ಪೆರ್ಚಿಸಿಯುಂ, ಅರನೇಱಿಲದೋರೆವಣ್ಣಂ ತೇದು ನಕ್ಕಿಸುತರಗಿಳಿಯ ನಾಲಗೆಯಂ ತೆಳ್ಪನಾಗಿಸಿ ತೊದಳ್ನುಡಿಯಂ ತಿರ್ದಿಯುಂ, ಪುಷ್ಪಧೂಳಿಯಂ ಲೆಪ್ಪಂಬಟಿದದಿರ್ಮುತ್ತೆಯ ಸುರಯಿಯ ಪೊಸಬಂಡನೊಡಲ್ಗಿತ್ತು ಮಱಿದುಂಬಿಗಳ್ಗೆ ಸಂಪಗೆಯತ್ತಣಿನೊದವಿದ
೨೦ ಶಿರೋಭ್ರಮಣಮನಟಿಯಿಸಿಯುಂ, ಬಸಂತಂ ಬೆಜ್ಜನೆಸೆ ಮೈದೋಱಲೊಡಂ; ಅಂದು ಕೋಡುಕೋಡಿಂದೋಡಿ ಮಲಯಮಂ ಮಱೆಗೊಂಡ ಪವನನೀಗಳತ್ತಣಿಂ ಪೊಱಮಟ್ಟು ಮೆಲ್ಲಮೆಲ್ಲನೆಡೆಯೆಡೆಯ ಬನಬನಮಂ ಪುಗುತಂದು ಪೊಂಚಿ ಮುಂಚಿ ಕೆಳೆಯಂಗೆ ನೆರವಾದನೆನೆ ದಕ್ಷಿಣಾನಿಲಂ ಮಂದಂ ಮಂದಂ ವಹಿಸುತ್ತಿರ್ಕುಂ; ಫಲವೃಕ್ಷಂಗಳೆಲ್ಲಂ ಕಾಯ್ಕುಸುಗರ್ಾಯ್ ಪಣ್ದೋರೆವಣ್ ತನಿವಣ್ಗಳಿಂದೆಸೆಯೆಯುಂ, ಗಿಡುಗಳೆಲ್ಲಂ ತಳಿರ್ಚಂದಳಿರೆಳದಳಿರೆಲೆ

ಬೆಳ್ಳಿಲೆ ಪಸುರೆಲೆ ಪಣ್ಣೆಲೆಗಳಿಂ ರಂಜಿಸೆಯುಂ, ಪೂವಳ್ಳಿಗಳ್ ನನೆ ಕೊನೆ ಮುಗುಳರೆಮುಗುಳ್ ಬಿರಿಮುಗುಳುಳ್ಳಲರ್ದ ಪೊಸಮಲರ್ಗಳಿಂದೆ ಸೊಗಯಿಸೆಯುಂ, ಮನೋಹರಮಾಯ್ತು ಪೊಸಸುಗ್ಗಿ; ಬಿರಯಿಗಳೆದೆ*ಕವಡಿಬಿಜ್ಜಿನೆ ಬಿರಿಯೆ, ವಿಟವಿತಾನಕ್ಕೆ ಪೊಸಬೇಟದ ಸೊಂಪು ನೆರೆಯೆ, ಕುಲಟಾಂಗನೆಯರ್ಗೆ ಜವ್ವನದೇಳ್ಗೆ ಮೆಱೆಯೆ, ಕಾವನೆತ್ತಂ ಮೆಯ್ದೋಱದೆ ಸಂಚರಿಸಲ್ತೊಡಂಗಿದಂ; ರಾಘವನ ಪ್ರತಾಪದಂತಿರೆ ನೇಸಱ ಕಾಯ್ಪುಂ ಪೆರ್ಚಿದುದು; ಪುರಲಕ್ಷ್ಮಿಯೊಡನೆ ವನಲಕ್ಷ್ಮಿಯ ಕೆಳೆತನಂ ಪಿರಿದಾಯ್ತು.

ಇಂತು ಬಸಂತಂಗೆ ನಡುಜವ್ವನಂ ಬರೆವರೆ ಕಾಣುತೆ ವಸಿಷ್ಠಂ ರಾಘವಂಗೆ—ಇದೀಗಳ್ ಸಮಯಂ ಯಾಜ್ಞೀಯಾಶ್ವಮಂ ಪೂಜಿಸಲ್ಕೆ, ದಿಗ್ದೇಶಂಗಳಿಂ ಕಪ್ಪಕಾಣ್ಕೆಗಳಂ ತರಲ್ಕೆ, ನೆರೆದ ವಿಪ್ರಸಂದೋಹಮಂ ದಾನಂಗಳಿಂ ಸನ್ಮಾನಿಸಲ್ಕೆ. ಅಂತಱಿಂ ನೀಂ ಪೊನ್ನಸೀತೆವೆರಸು ವ್ರತಮನಪ್ಪುಕೆಯ್ವುದೆಂದೆಚ್ಚಱಿಸಿದಂ.

ಮನೋರಮೆ—ರಮಣ! ಇಂತಿದೇಂ ಪೊನ್ನ ಸೀತೆಯೆಂಬೈ? ರನ್ನಸೀತೆಯೆತ್ತವೋದಳ್? ಜನಕಂ ಜನಕಂ ಕರೆದುಯ್ದಿರ್ದನೇಂ? ಅಂತಿರೆಯುಂ ಮಗುೞ್ದುಂ ಕರೆಯಿಸಿ ಕೊಳ್ವುದಲ್ತೆ ನೋಂಪಿಗೆ.

ಮುದ್ದಣಂ—ಓ! ಮಱೆತೆನೀಯಿರವಂ ಪೇೞಲ್ಕೆ. ಸಂದೆಯಂ ಸಾಜಂ. ಕೇಳ! ರಾಘವಂ ರಾವಣಕುಂಭಕರ್ಣಾದ್ಯರಂ ಮಱುವುಟ್ಟಿಂ ಬರ್ವುದೆಂದಟ್ಟಿ ದೇವರ್ಕಳ ಬಂದಿಯಂ ಬಿಡಿಸಿ ಲಂಕಾಧಿಪತ್ಯಮಂ ಶರಣಂಗೊಪ್ಪಿಸಿ ತಾಂ ಸೀತಾಸಮೇತಂ ಅಯೋಧ್ಯೆಯೊಳರಸುಗೆಯ್ಯುತಿರ್ದನೆಂಬುದನಾಗಳೆ ಕೇಳ್ದಿರ್ಪೆಯಲ್ತೆ! ಇಂತು ಸಾಸಿರಗಾಲಂ ಕೞಿದೊಡಮಿವರೊಳ್ ಸಂತಾನಂ ಪುಟ್ಟಿತಿಲ್ಲಂ. ಎನಿತ್ತೈಸಿರಿಯಿರ್ದೊಡಂ ಮಕ್ಕಳಿಲ್ಲದನ ಬಾೞ್ಕೆಯದೊಂದು ಬಾೞ್ಕೆಯೆ! ನಿಡುಮರನಂತಿರ್ದೊಡದೊಂದಿರವೆ! ನೀರೊಳಿರ್ದುಂ ಮೀಂಗಳ್ ಕಾಡೊಳಿರ್ದುಂ ಮಿಗಂಗಳ್ ಬಾನೊಳಿರ್ದುಂ ಖಗಂಗಳ್ ಮಱಿಗಳನಾರಯ್ಯುತುಂ ಸೊಗಂ ಬಾೞ್ವವೆನೆ, ನಾಡೊಳ್ ಪುಟ್ಟಿಯುಂ ಮಾನವನೆನಿಸಿಯುಂ ಮಕ್ಕಳಂ ಪೆಱದವಂ ಪಾಪಿಯಲ್ತೆ! ಪೆಱಿಂಗಿರ್ಕೆಮೆ? ಪೇೞ್ವೊಡಿನಿತೊಂದು ಮ್ಮಱಿಂ ಪುತ್ರಹೀನರ್ಗೆ ಬದ್ಧಮಿರ್ಕುಂ. ಇವರೊಳಂ ಪುರುಷರತ್ನಣಿಂ ಸ್ತ್ರೀಯರ್ಗಧಿಕಮೀದುಗುಡಂ. ದಿನದೂಟಿಗಂಗಳಂತದಂ ಮಱೆಗೆಯ್ವೆಡೆಯೊಳ್ ನೆರೆವೆಂಡಿರ ಸುಖಗೋಷ್ಠಿಗಳ್ ನಾರಿಯುರೊಳ್ ಮೊದಲಿಕ್ಕುಗುಂ.

ಸೀತೆಯೊರ್ವಳ್ ಕನ್ನೆವಾಡದ ನೆಲೆವನೆಯ ಮೊಗಸಾಲೆಯೊಳ್ ತೂಗುಂ ಮಂಚಮನೇಱಿ ಚೆಲ್ಲದಿಂ ಕುಳ್ಳಿರ್ದು ತಾನುಂ ನಲ್ಗೆಳದಿ ಚಂದ್ರಮತಿಯುಂ

ಸಲ್ಲಾಪಂಗೊಳುತಿರೆಯಿರೆ; ಕಟ್ಟಿದಿರೊಳೊಂದು ಚಟಿಕೆ ನೀಡದೊಳಿರ್ದುಂ ಕಿಱುಮಱಿಯಂ ಕುಟುಂಕಿತ್ತೆಱಂಕೆಯೊಳ್ ಪುದುಗಿಸಿಯುಂ ಕೊಕ್ಕಿಂ ಮೆಲ್ಲು ಪ್ಪುಟನೊಸೆದುನೆಸೆದುಂ ಲಲ್ಲೆಗೆಯ್ವುದಂ ನಟ್ಟಾಲಿಯೊಳಭೀಕ್ಷಿಸಿ ಮಕ್ಕಳ ಬಯಕೆಯಿಂ ಜಾನಕಿ ಸಖಿಗಿಂತೆಂದಳ್ :—ಮಿತ್ರೆ ನೋಡೆ! ನೋಡೆ! ನೀಡುಂ ನೀಡದ ಪಕ್ಕಿಯುಮೆನ್ನಂ ಬಂಜೆಯೆನುತೇಡಿಪಂತಿರೆನ್ನಿದಿರೊಳ್ ಪಿಳ್ಳೆಯಂ ಮುದ್ದುಗೆಯ್ಗುಂ. ಇಂತಿರ್ಪಿನಮಿನ್ನೊಲ್ಲೆನೀಯೆಡೆಯಂ. ಎತ್ತಾನುಂ ಪೆಱತೊಂದೆಡೆಗೆ ಪೋಪಂ. ಅಲಸುವೆನೀನೋಟಕ್ಕೆ. ಓ! ಈ ಪಕ್ಕಿಯನೊಂದನೆ ಪಗೆವೆನೇತರ್ಕೆಯೋ ನಿರ್ನೆರಂ! ಎನ್ನನ್ನರ್ಗೆ ಲೋಕಮೆ ಪಗೆ! ಪಲವಾತಿನೇನಕ್ಕುಂ? ನಿಕ್ಕುವಂ ಮಕ್ಕಳಂ ಪಡೆದೋವಲ್ಕಾಂ

೧೦ ನೋಂತೆನಿಲ್ಲಕ್ಕುಂ. ಎಳವರೆಯದೊಳ್ ನಲ್ಗೂಸಂ ಪೆತ್ತು ಬಾಲಕೇಳಿಯಂ ಕಣ್ದಣಿಯೆ ಕಂಡು ಸಂಸಾರದ ಸಾರಮಿದೆನುತೆ ಸಂತಸಂಬಡುವ ಪೆಣ್ಗಳೆ ಧನ್ಯೆಯರಲ್ತೆ! "ಬಂದಳಿವಳಿವಳ್! ಬಂಜೆ! ಕಂದನಂ ಪಿಡಿಯಲ್ಕೀಯದಿರ್! ಬಡವಕ್ಕುಂ! ಕಿಟ್ಟವಿಡದಿರ್! ಕಂದಿ ಬಸವಳಿಗುಂ; ನೋಡವಿಡದಿರ್! ಕಣ್ ಕೊಂಕುಗುಂ; ನುಡಿಯಿಸಲೆಡೆಗುಡದಿರ್! ನುಡಿಯೊಗ್ಗುಗುಂ." ಎಂಬ ನಾಡ ಪೆಣ್ಗಳ ಬಿಱುನುಡಿಗೆ ತಡೆದುಂ ಬಾಳ್ವ ವಂಧ್ಯೆಯರೆ ಜೀವನ್ಮೃತೆಯರ್ ವಲಂ. ಸಖೀ! ಮಾಂಜದುಸಿರ್; ಕುಲಮಂ ವರ್ಧಿಪ ಕಂದನಂ ಪಡೆದು ತೊರೆದ ಮೊಲೆಯೂಡಿ ತೊಟ್ಟಿಲೊಳಿಟ್ಟು ಪಾಡಿ ತೂಗಿ ಕೂಸು ನಿದ್ದೆವೋ ಪುದುಂ ತಾನುಮರೆಗಟಿಗೆ ಕೆಲದೊಳ್ ಮಂಡಿಸಿ ಬಾಲಲೀಲೆಯಂ ನೆನೆನೆನೆದು ಮತ್ತಂ ಕುವರನೆಚ್ಚತ್ತನಾಗೆ ಪಿಡಿದೆತ್ತಿ ಮುಂಡಾಡಿಯುಂ ಮುದ್ದಿಸಿಯುಂ

೨೦ ತೊದಳ್ನುಡಿಯೊಳ್ ನುಡಿಸಿಯುಂ ಕಿಱುನಗೆಯೊಳ್ ನಗಿಸಿಯುಂ ಪೊಸಬಿನ ದದಿನಾಡಿಸಿಯುಂ ಮನದ ಬೇಸಱಂ ಕಳೆವೊಂದು ಸೈಪೆನ್ನೊಳೆಂದಿಂಗಾದ ಪುದೋ!

ಅಂತುಮಲ್ಲದೆಯುಂ:—ಅಬ್ಬೆ! ಪಿಡಿ ನಡೆದಪೆನೆನುತುಮೆರಟ್ಮೊ ಱಡಿಯಿಡುತೆ ಪೊಂಗಿ ತಾಯ ನಿಡುದೋಳಂ ತಾಂಗಿ ಮೆಲ್ಲನೊತ್ತಿನೊಳಂಕವನೇಱ ನುಣ್ಗಲ್ಲಮಂ ಪಿಡಿದಲುಗಿಸಿ ಈಗಳ್ ನಡೆಗಲ್ತೆನೆನುತೆ ಕೇಳಿಪ ಕಂದನೆಂದಿಂಗೆ ಪುಟ್ಟುವನೋ! ಆಡುತಾಡುತೆ, ನೆವಮಿಲ್ಲದೆ ನಗುತೆ ಪರಿದು ತಾಯ್ತುಂದೆವಿರ್ ಮುಂತಿರೆ ಬೆನ್ನನೆ ಸಾರ್ದಯ್ಯನ ಕಣ್ಗಳಂ ಕಿಱುಗೈಗಳಿಂ ಮುಚ್ಚು ತಾನಾರೆಂದು ಕೇಳ್ವ, ಮಾತೆಯ ಮೇಲುದಱ ಸೆಱಂಗಿನೊಳ್ ತಲೆಯಂ ಬೈತು ಆಂ ಗುಮ್ಮಂ ನುಂಗುವೆನಲ್ಲದೊಡೆ ತನಿವಣ್ಣನೀಯಿಮೆನಗೆನುತುಂ ಕಾಡುವ, ಪೆಱತೊರ್ಮೆ

೩೦ ತಂದೆಯ ಪಿಂದೆಸೆಯೊಳಡಂಗಿ ತಾನೆಲ್ಲಿರ್ಪೆನೆನುತಬ್ಬೆಯಂ ಕೇಳ್ವ, ಮತ್ತಮ

ದೊರ್ವೆ ಕೈಪಿಡಿಯುಂ ಲೀಲೆಯಿಂ ದಿಟ್ಟಿಸಿ ಮಾರ್ಪೊಳೆವ ಮುದ್ದುಮೊಗಮುಂ ಪಡಿಗೂಸುಗೆತ್ತು ತನಗೆ ತಂದೀವುದೆಂದು ಚಲದಿಂ ಮಱುಗುವ, ಮಗುಡ್ದೊರ್ವೆ ತಾಯ್ ಪೊಯ್ದಳೆಂದು ತಾತಂಗೆ ತೋಱುಪ, ತಾತನಬ್ಬರಿಸೆ ತಾಯೊಳ್ ದೂಱುವ, ಸಿರ್ಸೆರಂ ಜಱುಚುವ, ಜಱುಚಾಡಿ ಬೞಲ್ವ, ಬೞಲ್ದು ಮಱುಗುವ, ಮಱುಗಿ ಪರಿತಂದು ಅಬ್ಬೆಯ ಕಾಲಂ ಬಿಗಿವಿಡಿವ, ಬಿಗಿವಿಡಿದು ಬೆಣ್ಣೆಯನೀವುದೆಂದು ಮುಂಜೆಱಗಂ ಸೆಳೆವ, ಇಂತು ತನುಮನಮನಪ್ಪುಕೆಯ್ವ ದಿವ್ಯ ಸುಂದರವಿಗ್ರಹಂ ಕುಮಾರನೆನಗಪ್ಪನೆಂದಿಂಗೋ ಸಖೀ !

ಮುದ್ದಣಂ—ಪ್ರಾಣೇಶ್ವರೀ ! ಇಂತು ತನಗೆ ಮಕ್ಕಳ್ ಪುಟ್ಟಿತಿಲ್ಲೆಂದೊಂದು ಪಂಬಲ್ ಪಿರಿದಾಗೆ, ಗೞಿಗೆಗೞಿಗೆಗೆ ಬಾಡಿ ಬೆಂಡಾಗಿ, ಮತ್ತಂ ಕಂಡರಿಸಿದ ಬೆಳ್ಮರಸೊಂದು ಪಾಪೆಗೆನಗೇಕೆ ಸಿಂಗರಮೆನಗೇತರ್ಕೆ ಭೋಜನ ೧೦ ಮೆನುತಿವಂ ಬೇಸಱಿಸುೞಿದು ಆರೊಳಮೇನುಮನಾಡದೆ ನೋಡದೆ ಸಜ್ಜೆವನೆಗಾಗಿ ಪೋಪುದುಂ; ಚಂದ್ರಮತಿಯುಂ ನಲ್ಮಾತಿನುಪಚರಿಸುತುಮಾರಯ್ಯುತುಂ ಬೞಿವೋದಳ್.

ದೇವಿಯರಿನಿತೊಂದಿರವನೀಕ್ಷಿಸಿ ತೊಟ್ಟನೆ ದೂತಿಯೊರ್ವಳ್ ತಳರ್ದು ತೞಿಮೞಿಂಗೊಂಡೋಲಗಂ ಪರೆಯೆ, ಸಚಿವಂಬೆರಸು ಮಂತಣಂಗೊಳ್ವ ರಾಯನೆಡೆಗೆಯ್ತಂದು—ಜೀಯ ! ಏನೆಂದಱಿಯೆನಕ್ಕನಿಂದು ಕಟ್ಟುಬ್ಬೆಗದೊಳಿರ್ಕುಂ ; ಎನ್ನೊಳೆಂದಳಿಲ್ಲ. ನೆಟ್ಟನೆ ಸಜ್ಜೆವನೆಗೆ ಪೋಪುದುಂ, ಚಂದ್ರಮತಿ ತಾನುಂ ಬಲ್ದುಗುಡದಿಂ ಬೆಂಗೊಂಡೆಯ್ದಿದಳ್. ದೇವರೆ ದೇವಿಯರಿರವನಱಿಯಲಕ್ಕುಮೆಂದು, ಬಿನ್ನವಿಸೆ; ಶ್ರೀರಾಮಚಂದ್ರಮಂ ದಿಮ್ಮನೆೞ್ದು ದಿಗ್ಭ್ರಮೆಯಿಂ ಕಣ್ಗೆಟ್ಟು ಚಿಂತಾಪರವಶತೆಯಿಂ ನಡೆಗಂಬಂ ಬರ್ಪುದೆನೆ ಬಂದು ಪೆಂಡವಾಸಮಂ ೨೦ ಪುಗುತಂದು ರಾಣಿಯಂ ಪತ್ತೆಸಾರ್ದು ಇದಿರೇೞ್ವಳಂ ಮಾಣಿಸಿ ತಾನು ಮರ್ಧಾಸನಂಗೊಂಡಿಂತು ಬೆಸಗೊಂಡಂ :—

ದೇವೀ ! ಕಡಲ ಶುಕ್ತಿಯಿಂ ಜಗುೞ್ದ ನುಣ್ಮುತ್ತುಗಳನುಂಡ ಮೀಂಗಳೀಗಳುಗುೞ್ವವಿಂತೆನೆ ನಿನ್ನೀಕಡೆಗಣ್ಗಳೊಳಿರ್ಕಡೆಯೊಳಂ ಪರಂಪರೆಯಿಂ ಪನಿಪನಿತು ಸುರಿವಶ್ರುಧಾರೆಯಿರವಿದೇಂ ಪೇೞ ! ಅಂತು ಸುರಿದುಂ ಅಂಜನವಿಮಿಶ್ರಿತಾಶ್ರುಧಾರೆಯಿದು ತೆಳ್ಪದಂಪಿನೊಳ್ ರನ್ನಗನ್ನಡಿಗೆ ಜೀವರೇಖೆಯೆನೆ ಬರೆದ ನೀಲರೇಖೆಯ ಪಾಂಗಿನೊಳೊಪ್ಪಿಯುಮೆನ್ನೆದ*ರ್ಗೊಂದು ಕೃಷ್ಣಶಲಾಕೆಯೆಂಬೊಲ್ ಪರಿಣಮಿಕುಮಿಂತೇಂ ಕಾಂತೆ ! ಇಂದುಮುಖೀ ! ಇಂದೀಸಿರಿಮೊಗಂ ಪಗಲ್ಗಂಡ ಪೆಱೆಯಂತಿರೆ ಕಳೆಗುಂದಿದತ್ತೇಕೆ ? ಮತ್ತಂ ಮತ್ತಗಜಕುಂಭಮಂಡಲಕ್ಕೆ ದೊರೆವರ್ಪೀಸುದೃಢಪೀನಪಯೋಧರಂಗಳ್ಗೀ ತೆಱನ ಕಂಪನ ೩೦

ಮೇತರ್ಕರ್ಾಯ್ತು? ನಿನ್ನೀಪೆಱೆನೊಸಲೊಳಿಟ್ಟ ಮೃಗಮದತಿಲಕಮದೆಡೆ
ಗಿಡುವಿನಂ ಮೃಗಲಾಂಛನಮೆನಲ್ಕೆಸೆದುಮೆನ್ನ ಮನಕ್ಕೊಂದು ಲಾಂಛನ
ಮನಾಗಿಪುದಿದೇತಱ ಪರಿ ರಮಣಿ? ಅಂತುಮಲ್ಲದೆಯುಂ ನಿನ್ನೀಕಪೋಲದೊಳ್
ಬರೆದ ಮಕರಿಕಾಚಿತ್ರಪತ್ರಮಿದು ಬಗೆಗೆಟ್ಟಿರ್ಪನಮೆನಗಂ ಬಗೆಗಿಡುವುದಿನಿ
ತೊಂದುಮ್ಮಳಮೇಂ! ನಿನ್ನೀಪದಕಮಳಮೆಂದಿನಂತಿರೆ ಪೊಲ್ತುಡೆಯ ನೇಸಱೆಳ
ವೆಳಗಿನ ಪುಂಡರೀಕದಂತಲತಗೆಯ ಸಿಂಗರಮನೊಂದಿರ್ಕುಮಿಲ್ಲಮಿದೇಂ?
ನುಡಿಯ! ಸುಯ್ ಎಲರ್ಗೆ ಕಂಪುದೋಱದಿದೇಕೆ? ಗುಬ್ಬಿಗಂಕಣಮೇಕೆಯೊ
ಕೆಲದೊಳೊತ್ತಿರ್ಕುಂ, ಕಟಿಲೊಳೇಂ ಪಗೆ? ಅಂಬರಂ ಮಲಿನಮಿದೇಂ?
ಸೀತೆ! ನಿನಗೀತೆಱದ ದುಗುಡಂ ತಲೆದೋಱಿತೆಂತು? ಎನ್ನಿಂ ಪುಟ್ಟಿತ್ತೊ,
೧೦ ನಿನ್ನ ಪರಿಜನರಂತೇಂ ಪೊಲ್ಲದ ಕಜ್ಜಮಂ ತಗುಳ್ಚಿಲ್ಕಾದುದೊ? ಮೆಯ್ಯೊಳ್
ಸಲ್ಲದ ಬೇನೆಯಾಗಿರೆ ತನ್ನಿಂ ತಾನೆ ಮನಕ್ಕೆ ಬೇವಸಮಾಯ್ತೇ? ಅತ್ತೆ
ವಿರೇಂ ಬಯ್ದರೆ? ಎನ್ನೊತ್ತಿನ ಸಹಜಾತರಂತುಟು ಅಣಕಿಸೆ ನಿನಗಾದತ್ತೆ
ವಿಷಾದಂ? ದೂಸಱಿದೆತ್ತಣಿನಾಯ್ತರಸಿ ನಿನಗೆ ಸರಸಿರುಹಾಕ್ಷೀ!

ಇಂತು ನಲ್ಲಳ ಕಟಾಕ್ಷದತ್ತಣಿಂ ಬಸಿವ ಕವೋಷ್ಣಬಾಷ್ಪವಾರಿಯಂ
ತನ್ನುತ್ತರಿಗೆಯ ಕಿಸ್ಸೆಱಂಗಿನಿಂ ತೊಡೆದುಂ, ನಿಟಿಲತಟದೊಳುಯ್ಯಲಾಡುವ
ಮುಂಗುರುಳನುಗುಗುರ್ಗೊನೆಯಿಂ ತಿರ್ದಿಯುಂ, ಕೆಲಕ್ಕೊಂದಿದೆಕ್ಕಸರಮಂ
ಸೈತು ನೇವರಿಸಿಯುಂ, ಅರೆವೆಱೆಗಲ್ಲಮನಲುಗಿಯುಂ, ಮೆಲ್ಲು ಡಿಯಿನಾರೈವ
ಜೀವಿತೇಶನ ನುಡಿಗೆ ಪಡಿನುಡಿಗುಡೆಯುಂ, ನುಡಿಯದಿರೆಯುಮಾಱದೆ ಕಾಂತೆ
ಕೆಲನ ಕೆಳದಿಯುಂ ಮಾಲಿಪಂದವಳ್—ಜೀಯ! ಮಱೆವೊಕ್ಕರ್ಗೆ ಸೊಗಮ
೨೦ ನೀವ ಕಲ್ಪಾಂಘ್ರಿಪನಂತಿರೆ ನೀಂ ಬಟಿಯೊಳಿರೆ ದೇವಿಯರ್ಗೆ ಪೆಱತಾವುದುಂ
ಮನಕೆ ನೋವಲ್ತು; ಮಕ್ಕಳಂ ಪೆತ್ತೋವ ಸೈಪು ತನ್ನೊಳಿನ್ನುಮಾಯ್ತಿಲ್ಲ
ಮೆಂಬೊಂದುಬ್ಬೆಗಮೆಂದಾನಱಿವೆಂ: ಪೆಣ್ಗಳ್ಗಿದು ಸಾಜಮೆ, ಎಂದಳ್.

ಮುದ್ದಣಂ—ಬಾಲೆ! ಚಂದ್ರಮತಿಯಿಂತೆಂಬುದುಂ ರಘುಪ್ರವರನುಂ
ಮನಮಱುಗಿ ಇನಿಸುಂಪೊಲ್ತು ಜಾನಿಸಿ ಬಗೆಯಱಿತು ಮತ್ತಂ ನಿಜಕಾಂತೆಗೆ—
ರಮಣೀ! ನಿರ್ಸರಂ ಮಱುಗಲೇನಕ್ಕುಂ? ಇಂತಿವೆಲ್ಲಂ ವಿಧಿವಶಮಲ್ತೆ!
ದೈವಮೊಂದು ಕಣ್ದೆಱೆಯೆ ಗುರುಜನಮನುಗ್ರಹಿಸೆ ಪಿರಿಯರ್ ಪರಸೆ
ದೊಡ್ಡಿತೇಂ? ಇದರ್ಕೆಮ್ಮಯ್ಯನೆ ಪ್ರಮಾಣಂ. ಅಂತದಱಿಂದೆ ಮನಂ ನಿಶ್ಚಿಂತ
ಮಪ್ಪಂತು ನೀಂ ಭಕ್ತಿಯಿಂ ಕುಲದೈವಮನರ್ಚಿಸುತುಂ ಗುರುಜನಂಗಳಂ
ಪೂಜಿಸುತುಂ ಪಿರಿಯರಂ ಸಂಭಾವಿಸುತುಂ ಗೋಬ್ರಾಹ್ಮಣರಂ ಸೇವಿಸುತು
೩೦ ಮಿರೆ ಎಪ್ಪೊಳೆಲ್ಲರುಮನುಗ್ರಹಿಸೆ ಸಂತಾನಮಕ್ಕುಮೆಂದಱಿವೆಂ. ಆನುಂ

ವ್ರತಹೋಮಾದಿಗಳಿಂ ದೇವರ್ಕಳಂ ಮೆಚ್ಚಿಸುತುಂ ಸಗ್ಗಿಗರೊಡನಾಡಿಗ
ನಪ್ಪಂತೆಯುಂ ಸೂರ್ಯಾನ್ವಯಮೆನ್ನೊಳ್ ತಡೆವುದೆಂಬ ಲೋಗರೊಂದಪ
ವಾದಂ ಪೊರ್ದದಂತೆಯುಂ ನೋೞ್ಪೆನೆಂದು ಕಾಂತೆಯಂ ಸಂತವಿಟ್ಟು
ತಳ್ಕೈಸಿ ಕಳುಪಿ ತಾನೋಲಗಕ್ಕೆ ಬಿಜಯಂಗೈದಂ.

ಮನೋರಮೆ! ವಿಸ್ತಾರಂ ಸಾಲ್ಗುಂ. ಇಂತು ಕೆಲವಾನುಂ ದಿನಂಗಳ್
ಕೞಿಯೆ ಲೋಕಪದ್ಧತಿಯನೊಳಕೊಂಡು ಸೀತೆಗೆ ನೀರ್ನಿಂದು ದಿನಕ್ರಮದಿಂ
ಬಸಿಱ್ ಬಳೆಯೆ, ತ್ರಿವಳಿಗಳೞಿಯೆ, ಮೊಗಂ ತೆಱಂಬೊಳೆಯೆ, ಚೂಚುಕಂ
ಕರ್ಪಂ ತಳೆಯೆ, ನಡು ಬಡತನದೊಂದಪವಾದಮನುೞಿಯೆ, ನುಡಿ ಬೇಸಱಂ
ಬೆರೆಯೆ, ನಡೆಗಲಸು ನೆರೆಯೆ, ನಿಡುಬಾಸೆ ನೇರಂ ಮೆಱೆಯೆ, ನೋಟದ ಗಾಡಿ
ತೞ್ಗೆ, ಮನಕೆ ಪುದುವಯಕೆ ಪುದುಂಗೊಳೆ, ಸೀತೆ ಬಸಿಱಿಯಾದಳ್. ೧೦

ಎಂಬಲ್ಲಿಗೆ ಶ್ರೀರಾಮಾಶ್ವಮೇಧದೊಳ್
ಗರ್ಭಧಾರಣಮೆಂಬ ಚತುರ್ಥಾಶ್ವಾಸಂ ಸಂಪೂರ್ಣಂ.

---

## ಪಂಚಮಾಶ್ವಾಸಂ

# ಸೀತಾಪರಿತ್ಯಾಗಂ

ಮುದ್ದಣಂ—ಪ್ರಾಣನಾಯಿಕೆ! ಇಂತು ಭೂಜಾತೆ ಗರ್ಭಿಣಿಯಾದಳಾಗೆ,
ನಾಡೆ ನಾಡೆ ಸಂತಸಗಡಲೊಳೋಲಾಡುತಿರ್ದುದು; ಬಂಧುಜನಂಗಳ
ಸಮ್ಮೋದಮುಂ ಪರಿಜನಂಗಳುಕ್ಕೆವದೇೞ್ಗೆಯುಂ ಪಿರಿದಾಯ್ತು; ಎತ್ತಲು
ಮೊಸಗೆವಱೆ ಮೊೞಗಿದತ್ತು; ಭೂಸುರರ್ ದಾನದಕ್ಷಿಣೆಗಳಿಂ ತಣಿದರ್;
ನೆರೆದ ದೀನಾಂಧಬಧಿರಕುಬ್ಜವರ್ಗಂ ಸ್ವರ್ಗಸುಖಾನುಭವದೊಳಿರ್ದತ್ತು.

ಆ ವೇಳೆಯೊಳೊರ್ಮೆ ಶ್ರೀರಘುಪ್ರವರಂ ಕಾಂತೆವೆರಸು ಕಟ್ಟೆಱಕದ ೨೦
ಸಲ್ಲಾಪದಿಂ ಬೈಗಿನೊಳ್ ರಾಣಿವಾಸದ ಮೊಗಸಾಲೆಯೊಳಿರೆ ಸೀತೆ
ಕಾಂತಂಗೆ—ನಾಥ! ಬಲ್ಬೇಸಱ್ ಕಣಾ! ಆವುದುಮನೊಳಕೊಂಡಿತಿಲ್ಲೆನ್ನ
ಮನಂ, ಅದಱಿಂ ವನದೊಳಾಶ್ರಮಂಗಳ ಋಷಿಪತ್ನಿಯರಂ ಕಂಡು ಸುಖ
ಸಲ್ಲಾಪಂಗೊಂಡವರೊಡನಾಟದಿನಾನುಂ ಕಿಱಿದುಂ ದಿನಮಿರ್ದು ಮರಲ್ದು
ಬರಲಕ್ಕುಮೆಂದು ಬಯಸುವೆನೆನೆ; ರಾಯಂ—ಅಂತೆಯೆ ಅಕ್ಕೆ! ಆದೊಡೆ

ಒರ್ವಳೆ ಪೋಪುದಲ್ತು; ಕೂಡಿ ಪೋಗೆ ಲಕ್ಷ್ಮಣನಂ ಪೇೞ್ದಟ್ಟುವೆನೆಂದು ಮಾರ್ನುಡಿದಂ.

ಆಗಳ್ ಸಪ್ತಾಶ್ವಂ ನಿಚ್ಚವಯಣದೊಳ್ ಬಲ್ಬಳಲ್ದಶ್ವಸಪ್ತಕಮುಂ ಕಡಲೊಳ್ ಮಯ್ಗರ್ಚಿ ನೀರ್ಗುಡಿಸಲ್ಕೆಂದು ಸಾರಥಿಯು ನೇರ್ಪಡಿಸಿ ತಾಂ ತೇರಿನಿಳಿದನೆನೆ ಪಡುವೆಟ್ಟಸೆಡೆಯೊಳ್ ಮೆಲ್ಲನೆ ಮೆಯ್ಗರೆಯಲೊಡಂ ಲೋಕಯಾತ್ರೆಗೈದು ಮನೆಯಂ ಪುಗುತರ್ಪಿನಿಯಂಗೆ ಚರಮದಿಕ್ಕಾಂತೆ ರನ್ನವಟ್ಟಲೊಳ್ ಪಿಂಗದೆತ್ತಿದಾರತಿಯು ಕೆಂಬೆಳಗೆನೆ ಸಂಧ್ಯಾರಾಗಮೆತ್ತಂ ಪರಿಯೆ; ಬಲ್ಪಾಗಲಂಬಿಡಿದು ನೀನೆ ಗತಿಯೆಂದು ನನ್ನಿಯಿಂ ನಂಬಿದಳಂ ಮಱೆದು ಸವತಿಯೊಂದು ಪಿಸುಣ್ಗೆ ಎಱೆಯಂ ಮಾಱುವೋದನೆಂಬೊಂದುಬ್ಬೆ
೧೦ ಗದಿಂ ಕೊರಗಿದಳೆನೆ ಪದ್ಮಿನಿ ನಾಡೆ ಬಾಡೆ; ಬೇಡ ಗಡಾ! ಮುನಿಸು ನಿನಗಿಸಿಯನೊಳಕ್ಕಟಾ! ಬೇಟದ ಸೂಡಿಂ ಬಾಡಿ ಬಸಂಗೆಟ್ಟುದನಿಂದು ನಿಂದು ಕಾಂತೆಗಱುಪಿ ಒಟಿಯುಟ್ಟುವೆವನಿತೊಂದು ಪೊೞ್ತು ಸೈತಿರ್ಪುದೆಂದು ಸಂತಯಿಸಿ ದೂದುಪೋಪವೆನೆ ಮುಯ್ಯೀರಡಿಗಳೋಡೆ; ಪಗಲ್ ಜಗುೞ್ದುದು. ಪಕ್ಕಿಗಳೋರೊಂದೆಡೆಯ ಮೇಪಿಂ ತಣಿದುಂ ದಿನಾವಸಾನದೊಳಾಗಳಾಗಳ್ ಕಂಡ ಬಿನದಮನೊಳಗೊಳಗೆ ತಮ್ಮ ಬಳಗಕ್ಕೆ ತಿಳಿಪಿ ಸಲ್ಲಪಿಸುತೆ ಪೋಪುವೆನೆ ಮಂದಸ್ವರಂಬೆರೆಯೆ ಕುವಿದು ನಿಜಾಶ್ರಯಂಗಳಂ ಸಾರ್ದುವು. ಮತ್ತಂ ವಿಪ್ರರ್ ಎತ್ತಿದ ಸೇರೆಗೈಯೊಳ್ ಸಂಧ್ಯಾಮಂಡಪಮನಲಂಕರಿಸೆಯುಂ, ವೈಹಾಳಿಯುನುಟಿದು ಬಾಹುಜಜನಿವಹಂ ಬೀಡಂ ಪುಗುತರೆಯುಂ, ಬೇರದವಸ ರದಿಂ ಮೆಯ್ದೆಗೆದು ಬಣಂಜಿಗರ ನೆರವಿ ಶಮುತ್ತಮಗೆ ಪೊಸವರದಿನೆಣಿಕೆಯೊಳಿ
೨೦ ರೆಯುಂ, ಬವಸಿನೊಂದು ಕಜ್ಜಮಂ ತವಿಸಿ ಬೇಸರ್ಗೆ ಕ್ರುಡಿಯರ್ ಕಿಡುಸು ವ್ಮಾನದಿನೊಂದೆಡೆಯೊಳ್ ನೆರೆದು ಶ್ರೀರಾಮಲೀಲಾವಿನೋದಮಂ ಪಾಡು ತಿರೆಯುಂ, ಬಾಲಕರ್ ಆಟಪಾಟಂಗಳಂ ಮಱೆದು ತಾಯ್ವಿರೊತ್ತಂ ಪತ್ತಿ ರೆಯುಂ, ಮುಚ್ಚಂಜೆ ಸೊಗಯಿಸಿದುದು.

ಅನಿತಱೊಳ್ ನೀಲಿಯ ಕಡುವಣ್ಣದೊಳಟ್ಟಿದ ಪಂದಿಯ ತೊವಲಂ ಮುಸುಂಕಿಟ್ಟು ಮೈದೋಱದೆ ಲೋಕಮಂ ಸುಂಗಲ್ಕೆಂದು ಬಂದ ಮಂದೇ ಹರಾಕ್ಷಸನೆನೆ ಕೞ್ತಲೆಯೆತ್ತಂ ಪರ್ಬಿದುದು. ಇದು ನಾಡಿದು ಕಾಡಿದು ನೆರೆ ಯಿದು ಕೆಱೆಯಿದು ನೆಲನಿದು ಪೊಲನಿದು ಬೆಟ್ಟಿದು ತಿಟ್ಟಿದು ಸರನಿದು ಮರನಿದು ದರಿಯಿದೋವರಿಯಿದೆಂದು ಬಗೆಯಲ್ಬಾರದಾಯ್ತು. ಆ ಸಮಯದೊಳ್ ಪಗೆಯ ಸುಟಿವನಱಿವೊಡೆಂದು ಬಿಸುಗೈಯುನಟ್ಟಿದ ಬೇಹುಕಾಱರ ಸೋವೆನ
೩೦ ಲಾಗಸದೊಳೆಡೆಯೆಡೆಯೊಳಱಿಲುಂ, ಭೂಮುಖದ ಮನೆಮನೆಯೊಳ್ ಸೊಡರು

ಮಸೆದುವು; ದೇಗುಲದ ಭೇರಿ ಮೊಱಗೆ, ಸಂಕಿನೊಂದು ನಿಡುಸರಂ ಪೆರ್ಚೆ, ಡಕ್ಕೆಯ ಜೇಗಟೆಯ ಬಿಱುಸರಂ ಬಿಱುಸಾಗೆ, ರಜನೀಮುಖಮೆಡ್ಡಮಾದುದು.

ಇಂತಿರೆ ಅತ್ತಲರಸುಗೆಯ್ಮೆಯ ಕಜ್ಜದುಜ್ಜುಗಂಬಿಡಿದು ನಾಡಿಗರಿರವ ನಾರಯ್ವೊಡೆಂದು ರಾಯನಟ್ಟಿದ ಬೇಹಿನವರ್ ಮುಱಿರೂವಿಂ ಬೀದಿಗಳೊಳ್ ಬರೆವರೆ—ಸೊಗಮಿಂಬಾಗೆ ತಂತಮ್ಮ ಕೆಳೆಯರಂ ಕಾಣುತೊಂದರೆಗಟಿಗೆ ಸಲ್ಲೀಲೆಯಿಂ ನಲ್ವಾತುಗುಡಲ್ಕೆಂದು ನೆರೆವನೆಯಂ ಪೋಪ ಬರ್ಪ ಜವ್ವನಿಗರ ನಡೆನಿಱುಗೆಯಿನಿಡಿಕಿಱಿದ ಪಂತಿಯಿಂ; ವೇದವೇದಾಂತಪರರೊಚ್ಚತಮೊಡ ಗೂಡಿ ಚರ್ಚೆಯಿಂ ಪರತತ್ತ್ವಮನಱಿಕೆಗೆಯ್ವ ಜಾಣರೊಂದು ನೆರವಿಯಿಂ; ಕೇರಲ ನುಣ್ದನಿ ಬೀಣೆಯಿಂಚರಂ ಪುರಿಗೊಳೆ, ಮರ್ದಳೆಯ ತಾಳದ ಲಯಂ ಜತಿಗುಡೆ, ತಾನದೋಜೆಯೊಳ್ ತಾರಮಂದ್ರವಿಭೇದದಿಂ, ಜೇಂಗೊಡಮಂ ಮುಸುಱಿ ಮೊರೆವ ಮಱಿದುಂಬಿಗಳ ಗಾನದಂತೆ, ಮಧುಮಾಸದೊಳ್ ಕೈವಂದ ಮಾಮರನೆಳದಳಿರಂ ಮನಂಬುಗೆ ಸವಿದು ಕೊರ್ವಿ ಕುಕಿಲ್ವ ಗಂಡು ಗೋಗಿಲೆಯ ಮಂಜುಳಸ್ವರದಂತೆ; ಆರಕ್ತಮಾದ ಸೇಱಿಲಂ ಕೊಕ್ಕಿಂ ಕದು*ಂಕಿ ಚಂಚೂಪುಟಮನೂಱಿ ಅರೆಗಣ್ಮುಚ್ಚಿ ಪಕ್ಷಯುಗ್ಮಂ ಸಂಚಳಿಸೆ ಮಧುರಾಸವಮಂ ಸೀಯೆನೆ ಬರೆ ಪೀರ್ದು ತಣಿದುಂ ಸೊರ್ಕಿಂ ಗಱಿಪುವರ ಗಿಳಿಯ ಬಿಡುನುಡಿಯ ಭಂಗಿಯಂತೆ, ಕರ್ಣರಸಾಯನಮಾಗೆ ಶ್ರೀರಾಮನಂ ಪಾಡಿ ಪೊಗೞ್ವ ಗಾಯಕಸಂದೋಹದಿಂ; ಬಗೆಯೆಂತಂತು ಪಾಡು, ಪಾಡೆಂ ತಂತು ಹಾವಂ, ಹಾವಮೆಂತಂತು ಭಾವಂ, ಪುದುಂಗೊಳೆ ನವರಸೋದಯಕೆ ಪಡಿವೆತ್ತಾಡುವ ನಟ್ಟವಿಗರ ಕೂಟದಿಂ; ಜಾರಚೋರರತ್ತಣಿಂ ಭೀತಿಯಣಂ ನಾಡೊಳಿಲ್ಲೆನೆ ಬಾಗಿಲಂ ಪಡಿದೆಱೆದು ಬೊಂಬಾಳಂಗಳನುರಿಯಿಸಿ ತಾಂ ನಿದ್ದೆವೋದ ಸಜ್ಜನರ ಸಜ್ಜುಗೊಂಡ ಬೀಡುಗಳ ಸಾಲ್ಗಳಿಂ; ಅನಾಥರುಂಡಿಲ್ಲ ದೊಡೆ ಬರ್ಪುದು, ತಂಗಟಿಲ್ತು, ಕದನ್ನಮಲ್ತು, ಪೂರಣಗಡುಬುಂಟು, ಓಗರಮುಂಟು, ಅಳೆಯುಂಟು, ಈಗಳೆ ಇಕ್ಕುವೆಂ, ತಳ್ವದಿರಿಮೆಂದು ತಲೆವಾಗಿ ಲೊಳ್ ನಿಂದು ಕರೆವ ಮುತ್ತೈದೆಯರ ತಂಡದಿಂ; ಕೇರಿಗಳ್ ಸೊಗಯಿಸೆ— ನಾಡಂ ಸುತ್ತಿ ಕಂಡುದನಱಿಪಲ್ಕೆಂದು ಸೋದರರಿಂ ಬಳಸಿ ಬಣ್ಣದ ಚೌಕಿಗೆಯೊಳಿರ್ಪ ರಾಯನಂ ಕಂಡು ದೂರದಿಂ ತಲೆವಾಗೆ; ರಾಘವನಾತಂ ಗಳ್ಗೆ—ನಾಡೊಳ್ ಲೋಗರ್ಗೆ ಸೊಗಕೆ ಕುಂದಿಲ್ಲಮಲ್ತೆ, ಆಜ್ಞೆಗೆ ಭಂಗಮಿರ ದಲೆ! ರಾಯನಂ ನಿಂದಿಸರಲೆ! ಇಂದಿನ ವಾರ್ತೆಯೇಂ? ಪೇೞಿಮೆಂದಂ. ಆಗಳ್ ಬೇಹುಕಾಱರ್—ಜೀಯ! ಮೂಜಗಮಂ ಕಾವ ನೀಂ ನೆರೆಯಿರ್ದು ತಿರೆಯಂ ಪೊರೆವಂದು ಲೋಗರ್ಗೆ ಸೊಗಕ್ಕೆ ಕುಂದೆ! ವಿಶ್ವಮೆಲ್ಲಂ ನಿನ್ನಾಣತಿ

ಯೊಳಿರ್ಪಿನಸಂ ಪುಟುವಾನಸರ್ ದೂಱಲಾರ್ಪರೆ! ನಾಮವೊಂದು ದೇಹಿಗಳ್ಗೆ
ತಾರಕಮಂತ್ರಮಾಗಿರ್ಪಿನಂ ಪಟಿಯಲುಂಟೆ! ಮೇಣುಂ ಮುಮ್ಮೆಯ್ಯ
ದುಷ್ಕೃತಿಗಳ್ ನಿಗುಂಬಿಸೆ ಬಾಷ್ಕೆಯೊಂದು ತಗದೆ, ಮಿಟ್ಟು ಪೊಟ್ಟಂ ಪಾರೆ
ಪಾಪರ್ ದೇವರಂ ತೆಗಟಿಸಲೊಡಮೇನಕ್ಕುಂ? ಚೋರಂ ಚಂದ್ರಮಸಂ,
ಸೋಂಬಂ ಪಗಲಂ, ಪಾಷಂಡಿ ವೇದಂಗಳಂ ಪಟಿವಂತಿರಕ್ಕುಮೆಂಬುದುಂ;
ಆಳ್ದಂ ಮತ್ತಮಾಚರರ್ಗೆ—ಮಾಂಜದುಸಿರಿಂ, ಬನ್ನಣೆಯು ನುಡಿಜಾಣ್ಮೆ ಗವಸರ
ಮಲ್ತು, ಕಂಡುದಂ ಪೇಬ್ವುದೆನೆ; ಒರ್ವನೊರ್ವನ ಮೊಗಮನವಲೋಕಿಸುತೆ
ಮೋನಮಿರ್ದರ್. ಇಂತಿರೆ ಮತ್ತಂ ಮತ್ತಂ ರಾಯನೇನಾನುಮೊಂದು
ಪೊಸವಾರ್ತೆಯಿರ್ಕುಮೆಂದು ಚಾರರ ಭಂಗಿಯಿನಱಿತು—ಎನ್ನಾಣೆ! ಅಯ್ಯ
೧೦ ನಾಣೆ! ಪೇಟಿಂ, ಮನ್ನಿಪೆಂ, ಅಲ್ಲದೊಡೆ ನಿಮ್ಮಂ ಶೂಲದ ತುತ್ತ
ತುದಿಯೊಳ್ ಕಾಣ್ಬೆರೆಂದು ಪುರ್ವಿನ ಜರ್ವಿಂ ಗದಱೆ; ಅವರೊಳೊರ್ವಂ
ಕಂಪಿತಕಾಯಂ ಪಾದಾವನತಶಿರನಿಂತು ಬಿನ್ನವಿಸಿದಂ:—ಕಾವಂ ನೀಂ
ಮೆಯ್ವೆತ್ತಿರೆ ಪೆಳಱಲುಂಟೆ? ಮೇಣ್ ನನ್ನಿಯನಾಣ್ಮನೊಳ್ ಬಯ್ತಿಡ
ಲೊಡಮೆವಗಾವ ಬಟ್ಟೆ? ಗಾವಿಲಂ ಕಱುಬಿಂ ಪೇಟ್ದೊಂದು ನಿಷ್ಠು
ರೋಕ್ತಿಯಂ ದೇವರ್ಗೆ ನಿವೇದಿಸುವುದನುಚಿತಮೆಂದು ಮಾಣ್ದೆವೈಸೆ!
ಬಲ್ಲರ ಬಲ್ಲಹಂ ಕಾವೊಡಿಂತಿದು—ನಡುಗೇರಿಯೊಳೊರ್ವನಸಗಂ ಪೆಂಡತಿ
ಮುಳಿಸಿಂ ಪೇಟದೆ ತವರ್ಮನೆಗೆ ಪೋಪುದುಂ ಕಳ್ದುವಂದಳ್ಗೆ ಬುದ್ಧಿವೇಟ್ದು
ತಾಯ್ತುಂದೆವಿರ್ ಬಟಿವಂದಳಿಯುಂಗೊಪ್ಪಿಸಲೆಂದು ಕೋಪಮಂ ತಿಳಿಪ
ಲೊಡಂ, "ಅಗಲ್ದ ಮಡದಿಯುಂ ರಘುಜನಂತಿರೆ ಕೊಂಡಾಳಿಂ ಬಾಡಂ"
೨೦ ಎಂದು ಬಿಱುನುಡಿದಂ. ಕರ್ಣಕಠೋರಮಾಗೆ ಕೊಡಂಕೆಗಳಂ ಮುಚ್ಚ
ತಲ್ಲಿಂ ತಳರ್ದೆವು. ಇಂತಿದೊಂದು ವಾರ್ತೆಯಲ್ಲದಾವುದುಮಂ ಕೇಳ್ದು
ದಿಲ್ಲೆಂದು ಮಗುಟ್ದೆಱಗೆ ರಾಯನವರಂ ಕೈಸನ್ನೆಯಿಂ ಕಳಿಪಿದಂ.

ಗರತಿ! ಮುಂಗಾರ ಮೊಟಗಿನತ್ತಣಿಂ ಪೊಡೆಗಿಡುವೆಳಕಟಿಲೆಯೆನೆ
ಮಂಡಲೇಶ್ವರಂ ರಜಕನೊಂದು ಪರುಷೋಕ್ತಿಗೆ ಮನಗೆಟ್ಟುಂ ಮರವಟ್ಟುಂ
ವಿಚಾರಪರಂ ಮತ್ತಂ ನೀಡುಮೆಣಿಕೆಯೊಳ್ ನಿಟ್ಟುಸಿರ ಕಟ್ಟುಬ್ಬಸದಿಂ
ತನಗೆ ತಾಂ—ಹಾ! ಹಾ! ಪೊಂಜುರಿಗೆಯೆಂದೇ ಎದೆ*ಗೊತ್ತಿದೆಂ, ಇಂತು
ಕರುಳಂ ಕೊಱೆಗುಮೆಂದಱಿತೆನಿಲ್ಲಕ್ಕಟಾ! ಪಾವನೆಯೆಂದೇ ಒಪ್ಪುಗೊಂಡೆ
ನದಱನೀವಿಲಗವೊಂದಕ್ಕೆ ತಲೆಮಟ್ಟೆಂ. ಆಃ! ರಜಕನೆನ್ನ ನೇಳಿಸಿದನಿಲ್ಲಮಾದ
ವೆಟ್ಟಿಱಿಸಿದಂ. ಸಾಜಂ. ಆಗಳ್ ರಕ್ಕಸನ ಬಂದಿಯೊಳ್ ಬಾಟ್ದಳಂ
೩೦ ಮಗುಟ್ದುಮಾನಾಳ್ವೊಡಕ್ಕುಮೆ? ಮಾತೇಂ, ಸೀತೆ ಮನ್ಮನಃಪ್ರೀತೆ

ಯೆಂದೊಡಂಬಟ್ಟೆಂ, ಇಂತು ಲೋಗರ ಮಾತಿಂಗೆ ಕೈಗಿಡುವೆನೆಂದೆಣಿಸ
ದಾಡೆಂ. ಇನ್ನೇವೆಂ? ಕೆಯ್ವೊಲನೊಳ್ ಬೆಳೆದ ಕುಱುಂಬುಲ್ಲಂ ಕಿೞ್ತು
ಬಿಸುಡುವಂತಿರೆ ಸೀತೆಯುಂ ಬಿಡುವೆಂ ಎಂದೇ ಬಗೆದು ಬೞಿಯುಂ ಸೋದರ
ರೊಳ್ ಲಕ್ಷ್ಮಣಂಗೆ—ಕೇಳ್ದೈ ತಮ್ಮ! ಎಮ್ಮೀಬೞಿಗಡರ್ದ ಪೞಿವಂ!
ಮುನ್ನಂ ಲಂಕೆಯೊಳ್ ನೀನೆ ಪೇೞ್ದೆಯಲ್ತೆ ಸೀತೆ ಪೂತೆ, ಅವಳಂ
ಕೈಕೊಳ್ವುದೆಂದು. ಈಗಳೇನಾಯ್ತು! ಎನೆ; ಮಱುಮಾತಿನೊಳ್ ಭರತಂ—
ಸೌಮಿತ್ರಿ ಪೇೞ್ವುದೇಂ! ಎಮ್ಮಯ್ಯಂ ಪೇೞನೆ? ಅಗ್ನಿ ಪೇೞನೆ? ದೇವರ್ಕಳ್
ಪೇೞರೆ? ಭೂದೇವಿ ತಾಂ ಪೇೞಳೆ? ಧೂರ್ತನೊರ್ವಂ ಪೇೞ್ದ ನಾಣ್ನುಡಿಯು
ನೆವಂಬಿಡಿದು ದೇವಿಯರೊಳ್ ಕುಂದನೆಣಿಸಲ್ಬಾರದೆಂದು ಕೈಮುಗಿದಂ.
ಆದರ್ಕಗ್ರಜಂ—ತಮ್ಮ! ಕೆಮ್ಮನಿರ್; ನೀನಱಿಯಯ್. ಧರ್ಮಮಂತುಟು. ೧೦
ಅಪವಾದಂ ಪೊರ್ದಿದಿಂಬೞಿಯುಂ ದೂಷಿತೆಯಾದೀಮಡದಿಯುಂ ಬಿಟ್ಟಲ್ಲದೆ
ಮಾಣೆನೆಂಬುದುಂ; ಭರತಂ ಕಿವಿಗಳಂ ಮಡಿಕೆಗ್ಗೈಯೆ; ಶತ್ರುಹಂ—ಅಣ್ಣಯ್ಯ!
ದೇವಿ ಸಾಕ್ಷಾಲ್ಲಕ್ಷ್ಮೀದೇವಿಯೆಂಬುದಂ ನೀನಱಿಯೆಯ? ಇಂತಿರೆಯುಂ
ಸೈಪಿನ ಬಿತ್ತಂ ನನ್ನಿಗಾಗರಮಂ ಸೊಗದ ಬೀಡಂ ಸಿರಿಯ ನೆಲೆಯಂ
ಸಿಂಗರದ ಕಣಿಯಂ ನಿನ್ನೀಕೊಂಡಾಟದ ರಮಣಿಯಂ ಅರೆಮಯ್ಯಂ
ಬಿಡುವುದೆಂಬರೇ! ಕಿಱುಗೂಸಂ ನಿನ್ನ ಕೈಯೊಳೀವಂದು ಜನಕನೇನೆಂದಂ, ಅಗ್ನಿ
ಸಾಕ್ಷಿಯೊಳ್ ನೀನೆ ಏನೆಂದೈ! ಹಾ! ರಾಘವಾ! ಪಾವಕಪಾವನೆಯಂ
ತೊಱೆಯಲ್ಕೆಂತು ಮನಂದಂದಯ್? ದೇವ! ಕರುಣಾಕರನೆಂಬ ಬಿರು
ದಿಂಗಿದು ತಗುಗುಮೆ! ನಿನ್ನೀಜಸಕೆ ನಿನ್ನೀಪೆರ್ಮೆಗೆ ನಿನ್ನೀಬೀರಕಿಂತಿದು
ಪಾಡೇ! ಸೀತೆಯನುೞಿದುಂ ಸತ್ಯದೇವತೆಗಿನ್ನೆಡೆಯಾವುದು? ಭೂಮಾತೆ ೨೦
ಯೆಂತು ಪೊತ್ತಿರ್ಪಳ್! ಅಕ್ಕಟಾ! ನರಿಯೂೞಿಡೆ ಸುರಲೋಕಂ
ಪಾೞ್ಪೋಕುಮೆ! ನಾಯ್ ಬಗುಳೆ ರಾವುತಂ ಕೀಱುಗುಮೆ! ಪಂದಿಯೊಂದು
ಡುಱುಕೆಂದೊಡೆ ಸಿಂಗಮುಂಡಲೆವುದೆ! ಕೂಳಂ ಕೊಱಚಾಡೆ ನೀನೊಂದಾಡು
ವುದೇ! ಎನ್ನಾಣೆ, ಮಾತೆಯಾಣೆ, ಸೀತೆ ನೀತಿಗೆಟ್ಟಳಿಲ್ಲಂ. ಕಾವುದು ಕಾವು
ದೆಂದು ಕೈಯೊಡ್ಡಿ ಬೇಡುವುದುಂ; ಮತ್ತಂ ರಾಘವಂ ಸೋದರರ್ಗೆ—ಬಲ್ಲೆಂ
ಬಲ್ಲೆನವಳಯೋನಿಜೆಯೆಂಬುದಂ ಪಾವನೆಯೆಂಬುದಂ ಪುಣ್ಯಶ್ಲೋಕೆಯೆಂಬು
ದಂ. ಆದೊಡಮೀಗಳೆನ್ನಳವಲ್ತು; ತೆಗೞ್ಗೆ ಮಾಱುವೋಡೆಂ. ಜನರಿಂತು
ಱೋಡಿಸೆ ಪುದುವಾೞ್ವೆನೆಂತೊ! ಆದಱಿನಿನ್ನಂ ನಿರ್ನಿಮಿತ್ತದಿಂ ತಡೆಯದೆ
ಯಥೇಷ್ಟಂ ಪೋಗಿಮೆಂದುಂ ಮಾಣೆ ನಿರ್ಮೋಕನಿರ್ಮುಕ್ತನಿರ್ಮಲನಪ್ಪ
ಫಣಿಯೆಂತಂತೀಸೀತೆಯಂ ತೊಱೆದೇ ಸೊಗಂಬಾೞ್ವೆನಿದು ಸಿದ್ಧಮೆಂದು ೩೦

ದುಗುಡದೊಂದು ಕಾಯ್ಪಿಂ ಜಡಿದು ನುಡಿವಗ್ರಜನಂ ಕಂಡುಂ ಕಾಣದೆ ಹಾಹಾರಾವಂಗೆಯ್ಯುತೆ ಭರತಶತ್ರುಘ್ನರ್ ಪಿಂಜರಿದರ್.

ಆಗಳ್ ರಾವಣಾರಿ ಬಾಗುಬೊಂದು ಬಿಗುರ್ಪಿಂ ತಲೆ ತಿಣ್ಣಮಾಗೆ ಕೆಕ್ಕೆಯಂ ಕರತಲದೊಳೂಱಿಯುಂ ಕರತಲಮಸಿದು ಬಳ್ಕೆ ಅಂಕದೊಳಿಟ್ಟು ಮಂಕಂ ಕದಕ್ಕದಿಸೆ ನೆಲನೊಳ್ ಧರಿಸಿಯುಂ ನೆಲಂ ನೆಲೆದಪ್ಪೆ ತಾನೆ ತಲೆ ಮಟ್ಟುಂ ಕಂಬನಿಗಱೆಯುತೆ ಕೆಲದೊಳ್ ಕೈಗಟ್ಟಿ ನಿಂದ ಲಕ್ಷ್ಮಣನಂ ಕರೆದು—ಅಣುಗದಮ್ಮ! ಇತ್ತಲ್ ಬಾರೈ! ಅಂದಂದಿಂಗಮೆನ್ನಾಣತಿಯಂ ಮೀಱಿದೆಯಿಲ್ಲಂ ಬಲ್ಲೆಂ; ಈಗಳ್ ಪೆಱಗೆ ಕಱೆಯೆಂತಂತೆಮ್ಮಾಬಟಿಗೆ ಪಟಿಯೊದವಿದತ್ತೀಜಾನಕಿಯ ದೂಸಱಿನಾಕೆಯಂ ಕಾನನಕ್ಕುಯ್ದು ತೊಱೆದು ಬಾರಾ! ಎಂದಂ. ಅದರ್ಕೆ ಸೌಮಿತ್ರಿ—ಜೀಯ! ಅಣ್ಣನಾಜ್ಞೆಯಂ ಮೀಱಿ ನಡೆಯೆ ಕುಂಭೀಪಾಕಂ, ನಿರ್ದುಷ್ಟೆಯಾದೀ ಅತ್ತಿಗೆಯನಱಿದುಂ ನಟ್ಟಡವಿಗುಯ್ದು ಬಿಡೆ ರೌರವಂ. ಎನ್ನೊಡೆಯ! ಅದಱೊಳಂ ತುಂಬಿದ ಬಸಿಱಿಯಲ್ತೆ! ಎಂತಯ್ ಕೊಂಡುಯ್ದು ಪಾಪಿ ಕೈವಲ್ಯಲಕ್ಷ್ಮಿಯಂ ಬಿಡುವಂತಿರೆ, ನಿರ್ಘೃಣನಾಂ ಭಾಗ್ಯಲಕ್ಷ್ಮಿಯಂ ಬಿಡುವೆಂ, ಎಂಬುದುಂ; ಮತ್ತಂ ಮತ್ತಂ ರಾಘವಂ ಚಲಮುಂ ಪಿಡಿದು—ಬಾಲ! ಇಂತುಸಿರಲಾಗದೈ ವೀಸಂ ದೋಸಮಿಲ್ಲಂ, ಮಾರ್ನುಡಿಯದಿರ್, ಪೋ ಪೋಗೆಂದುಸಿರ್ದಂ. ಇಂತಾಗೆ ಲಕ್ಷ್ಮಣಂ ಬೀರದ ಮೆಯ್ಗೊಂಡು ಮನಂ ದಿಟಗೈದು ಅಗ್ರಜಾತಂಗೆ—ಎಲೆ ಅಣ್ಣ! ಇದೆಕೊಳ್ ಚಂಡಾಲಂ ಸಿದ್ಧಮಿರ್ಪೆಂ. ಅಡಿಯಾಣೆ! ಆಣತಿಯೆಂತಂತು ನಡೆವೆಂ. ಮುನ್ನಂ ಭಾರ್ಗವಂ ತಂದೆಯ ನನ್ನಿಗೆ ಮಾತೆ ರೇಣುಕೆಯಂ ಕೊಲ್ಲನೆ! ಅಂತಿರಾಂ ನೀನಯ್ಯಂಗೆ ಪಡಿಯಾಗಿರೆ ಮಾತೆ ಸೀತೆಯಂ ಕೊಲ್ವೆನೊ ಮೇಣ್ ಕಾಡೊಳ್ ಸಿಂಗದಿಕ್ಕೆಯೊಳ್ ಬಿಸುಪ್ಪೆನೊ ಪೇಟ, ಎನೆ; ರಾಘವಂ—ತಾನೆ ಸೀತೆ ದೋಹದದಿನಡವಿಯ ರಿಸಿವೆಣ್ಗಳಂ ಕಾಣಲ್ಕೆಂದು ಬಯಸಿದಳಂತದಱಿನೀನೆವದಿನಡವಿಯೊಳುಟಿದೆ ಬಾರೆಂದಾಡಿದಂ. ಲಕ್ಷ್ಮಣಂ—ದೊಡ್ಡಿತೇಂ, ಅಂತೆಯೆಸಗುವೆಂ; ಸಂದೆಯಮಣಂ ಬೇಡವೆಂದು ದಿಮ್ಮನೆಟ್ಟು ನಡೆದಂ.

ಆವೇಳೆಯೊಳ್ ರಾಮರಾಜ್ಯದೊಳಿಂತನುಚಿತಮಾಗಿ ಅಱಂಗೆಟ್ಟುದೆಂದು ಬೆದಱಿ ತಾರೆಗಳ್ ದೆಸೆಗೆಟ್ಟುವು; ಚಂದ್ರಮುಂ ಕಳೆಗೆಟ್ಟಂ; ಜಂಪತಿವಕ್ಕಿ ಕಂಗೆಟ್ಟುವು; ಕೋವಳೆ ಬಣ್ಣಂಗೆಟ್ಟಳ್; ಕಮಲಿನಿ ಬಾಯ್ವಿಟ್ಟಳ್; ತುಂಬಿ ಮೊಱೆಯಿಟ್ಟುದು. ಇಂತಿದೇನನ್ನೆಯದ ಗಲಬೆ? ಇದಱಡಿಯಱಿಯಲ್ವೇಟ್ಕುಮೆಂದು ಮೆಯ್ದೋಱದೆ ತಡೆತಡೆದುಂ ಕುಳಿಗಾಳಿ ಸುಟಿಯಲ್ತೊಡಂಗೆ, ಪಕ್ಕಿ

ಗಳ್ ಗಜಬಜಿಸೆ, ತಾನೆ ಭಾಸ್ಕರಂ ಬೇಗನುಪ್ಪವಡಿಸಿ ಮೂಡುವೆಟ್ಟಿನ ಕೋಡುಗಲ್ಲನೇಱ ನಿಟ್ಟಿಸುತಿರ್ದಂ.

ಇಂತು ತಳತಳನೆ ಸೇಸಱ್ ಮೂಡೆ ಸೌಮಿತ್ರಿ ಮಾತೆಯಂ ಪೊಡೆಮಟ್ಟುಂ ಪೊಱಮಟ್ಟು ಸರಯೂತೀರಮಂ ಸಾರ್ದು ಜಳಕಂಗೈದು ಕಾಳ್ಯಮನಾಗಿಸಿ ಸೂರ್ಯಂಗೆರಡರ್ಘ್ಯಮಂ ಕುಡುವೆನೆಂದು ಅಂಜಲಿಯನೆತ್ತಿ ಅಶ್ರುಪೂರಿತವಿಲೋಚನಂ ಜಿತಸುಲೋಚನಾವಲ್ಲಭಂ ವಿಶ್ವಲೋಚನಂಗೆ—ಎಲೈ ಆರ್ಯ ಸೂರ್ಯನಾರಾಯಣ! ಎಂತೊ ತೊಳಚಿದೋಂಟದೊಳ್ ತುಱುಚೆ ಪುಟ್ಟು ವಂತಿರೆ ನಿನ್ನೀಬಱಯೊಳ್ ಜಾಡೆನೆ ಪಂಚಮನಾಂ ಪುಟ್ಟಿದೆಂ. ಕೊಡಲಿಯ ಕಾವೆಂಬೊಲಾಯ್ತು ಪುಟ್ಟು. ಅಗ್ರಜಂಗಾಂ ಬಱಯುನಿರ್ಪಿನಂ ರಾಯದವಸಿಯು ಕುವರಿಯಂ ಭೂಸುತೆಯನಯೋನಿಜೆಯಂ ಮಂಗಳಸ್ವರೂಪೆಯಂ ಸೀತೆಯನಣ್ಣನಾಣತಿಯಿಂ ಕಾಡೊಳ್ ಬಿಸುಡಲ್ಕೆ ಬದ್ಧನಾದೆಂ. ಅಡಱನಿದೆ ಪೋಪೆಂ. ನೀಂ ಜಗಚ್ಚಕ್ಷುವಾಗೆ ಕುಂದುಕೊಱತೆಯಂ ಕಡೆಗೊತ್ತುತೆನ್ನ ನುದ್ಧರಿಸೈ, ಎಂದು ಕೈಮುಗಿದು ನಡೆದಂ. ೧೦

ಅಂತು ಲಕ್ಷ್ಮಣಂ ನಡೆತಂದು, ಪೊಂದೇರನಣಿಗೆಯ್ದು, ದಿವ್ಯಾಶ್ವಂಗಳಂ ಪೂಡಿ, ವಾಗೆಯಂ ಕಯ್ಯೊಳೀಟ್ಟು, ತಾನಡರದೊಯ್ಯನೆ ದೇವಿಯರ ಕನ್ನೆ ಮಾಡದ ಕಟ್ಟಿದಿರೊಳಿರಿಸಿ, ಮೊಗವಾಡದ ಬಾಗಿಲೊಳ್ ನಿಂದಾದಂ ಕಲ್ಮನ ನಾಗಿ—ಇದೆ ಇದೆ ಬಣ್ಣದೇರ್, ವನಕುಯ್ವೊಡೆಂದೆ ರಾಘವನಟ್ಟಿದಂ, ತಳ್ವದೆ ಪೊಱಮಡಿವೆಂದಂ.

ವನಕ್ಕೆಯ್ದಿ ಪುಣ್ಯಾಶ್ರಮಂಗಳಂ ಮೇಣೊರ್ಮೆಯುಂ ಕಂಡು ಪಾವನೆಯಪ್ಪೆನೆಂದು ಬಗೆದ ಪಂಬಲ್ ಬೆಟ್ಟಿತಾಗೆ ಸೀತೆಗೆ ಕಣ್ಣೊಳೆ ಬೆಳಗಪ್ಪುದುಂ, ಪೊಱವಾಗಿಲೊಳ್ ಪೆಸರ್ವಿಡಿದು ಕರೆವ ದನಿಯಿಂ ಲಕ್ಷ್ಮಣನೆಂದಱತು, ಪಡಿದೆಱೆದು ಪೊಱವಂದು, ಅರೆಮೊಗದೊಳಿರ್ಪ ಸೌಮಿತ್ರಿಗೆ—ಎನ್ನೈ ಮೈದುನ, ಜೀವಿತೇಶನೆನ್ನೊಂದು ಬಿನ್ನಪಮಂ ತೂಱದೆ ನಲ್ಮೆ ಮಿಗೆ ಪೊರೆದನೆ! ನಿನ್ನಂ ಪೇಳ್ದಟ್ಟಿದನೆ! ಕರುಣಾಕರನಲ್ತೆ! ದೀನೆಯಂ ನಲ್ಲನಲ್ಲದೆ ಮೇಣಾವಂ ಕಾವಂ? ಆಳ್ದನಡಿದಾವರೆಗಳಾವಗಂ ಸೊಗಮಿರ್ಕೆ! ಆದೊಡಿನಿತೊಂದು ಬೇಗದಿಂ ಪೊತ್ತುಡೆಯೊಳೇಂ ತೇರಂ ತಂದಯ್? ಪಗಲಿನ್ನುಮೊರ್ಮೊಱಂ ಮೀಱತಿಲ್ಲಂ. ಆನತ್ತೆವಿರ್ಗೆಱಗಿ ಪರಕೆಗೊಂಡೆನಿಲ್ಲ! ಮಾಳವಿಯರಂ ಬೆಸಗೊಂಡೆನಿಲ್ಲ! ಚಂದ್ರಮತಿಗೆ ಪೇಳ್ದೆನಿಲ್ಲ! ಏಗೆಯ್ವೆನೆನುತೆ ವಿಚಾರದಿಂ—ಅಪ್ಪುದಪ್ಪುದು ನಿಡುವಯಣಂ ಇರ್ಕೆ ರಾಘವಂ ಪೇಳ್ವಂ ಅಲ್ಲದೊಡೆ ತಾಂ ತಮಗೆ ನೆಲೆಗೆಯ್ವರ್. ಎಂತುಂ ಕಿಱದುಂ ದಿನಕ್ಕೆ ಮರಳ್ದು ಬರ್ಪೆವಲ್ತೆ! ಆಗಳ್

೧೦ ೨೦ ೩೦

ಋಷಿಪತ್ನಿಯರೆಂಬ ನಲ್ಗತೆಯುಂ ಮೇಣುಂ ವನದೊಳ್ ಕಂಡ ಪೊಸಬಿನದಮಂ ಬಂದಱಿಪೆ ಸಂತಸಮಿರ್ಮಡಿಕುಂ. ಆಯ್ತಾಯ್ತು! ಪೋಪಂ ಪೋಪಮೆಂದು, ಆನಂದಾಶ್ರುವಿಲುಳಿತ ಕಮಲವಿಲೋಚನೆ ಚಂದ್ರಮುಖಿ ಮುನಿಕಾಂತಾದರ್ಶನೋತ್ಕಂಠೆ ಪುಳಕಿತಸರ್ವಾಂಗಿ ಇಂತಾತುರದೊಳಿರ್ದಳ್.

ಎನ್ನ ರನ್ನಗೆಯ್ಪಿಡಿ! ಕವಡನಱಿಯದ ಬಾಲೆ ಮೆಯ್ವೆರ್ಚಿನ ನಲ್ಲನೊಲ್ಮೆ ತನ್ನೊಳಿಂತು ನನ್ನಿಯೆಂದೇ ಸೊಗವಯಣದ ಬಯಕೆಯಿಂ ಬೇಗಿನುಡಿಯೆ ಕೇಳ್ದು ಮನಮಱುಗದವರಾರೊ? ಪಾಲ್ಗಡಲೊಳಮರ್ದು ಪುಟ್ಟಿದುದಂ ನೆನೆದಳಲ್ಲದೆ ನಂಜುರ್ಕಿದುದನೇಗೈದುಂ ಬಗೆಯದಾದಳ್. ಆಃ! ಭಾಗ್ಯಲಕ್ಷ್ಮಿ! ನಿನಗಮೀವಿಧಿಯಾಯ್ತೆ! ಕಾಲ್ಮಿಗಂಗಳೊಳೊಡಂಬಾಡ್ವೊಂದು ಬವಣೆ ನೇರ್ಪಟ್ಟುದೇ!

ಆಗಳೂರ್ಮಿಳೆಯರಸಂ ಜಾನಕಿಗೆ—ಮಾತೆ! ವನಕೆ ಪೋಪೆನೆಂದು ಕಾಂತನನೇತರ್ಕೆ ಬೇಡಿದೌ! ಏಂ ಸೊಗಮಂ ಕಾಣ್ಬುದುಂಟು! ಮುನ್ನುಂಡುದು ಸಾಲದೆ! ವಿಪಿನಂ ಕ್ರೂರವ್ಯಾಳವೃಕಸೂಕರಚಮೂರುಕಂಠೀರವನಿಷೇವಿತಮಲ್ತೆ! ಈಬಗೆಗೇವೇಳ್ವೆಸೊ! ಎಂಬುದುಂ; ಸೀತೆ—ಏನಯ್ ಲಕ್ಷ್ಮಣ ಇಂತೇಕುಸಿರ್ವಯ್? ವನಮಂ ಕಾಣೆನೆ? ದುಷ್ಟಮೃಗಂಗಳೆಮಗೇಂಗೆಯ್ಗುಂ? ಬೇಂಟೆಗೆ ಪೋದಪೆವೆ? ಋಷ್ಯಾಶ್ರಮಕ್ಕೆ ಪೋಪರ್ಗೆ ಮೃಗಂಗಳಗೊಡವೆಯೇಕೆ? ಮುನಿಪತ್ನಿಯರ್ ವನದೊಳಿರರೆ? ಎಂತೆಂತೊ ಕಾಂತನಂ ಕಾಡಿ ಬೇಡಿ ಅನುಗೊಂಡೆನಿದಂ ತಡೆವುದಂದಮೆ ಕಂದ! ಶ್ರೀರಘುಕುಲವಾರ್ಧಿಪೂರ್ಣಶಶಾಂಕನೊಲ್ಮೆ ಎನ್ನೊಳಿರೆ ಬನ್ನಮಾವುದುಮೊಂದದಯ್! ನಿಕ್ಕುವಂ ತಳ್ವದೆ ಪೋಪಂ, ಇತ್ತಲ್ ರಥಮಂ ಕೂಡಿವಾರಾ! ಎನುತುಸಿರ್ದಳ್.

ಇಂತಾಗೆ ದೇವಿಯರ್ ಬಯಸುವಂತಿರೆ ಪಯಣಂ ಲೇಸಕ್ಕೆ ಎನುತೆ ಮನದೊಳ್ ಭಾಸ್ಕರನಂ ಬೇಡಿ ಮತ್ತಂ ಪ್ರಕಾಶದೊಳ್—ಇದೆ ರಥಂ ಸಿದ್ಧಮಡರಿಮೆನೆ; ಅಕ್ಕ ಎಂದೊಂದು ಮೂಱಡಿ ನಡೆದು ಸಸಂಭ್ರಮಂ ಲಕ್ಷ್ಮಣಂಗೆ—ಓ ಓ! ಇರಿರ್; ಬಂದೆಂ ಪುಣ್ಯತಪೋವನಮಂ ಕಾಣ್ಬೊಂದಾತುರಂ ಪಿರಿದಾಗೆ ಮುನಿಕಾಮಿನಿಯರ್ಗೆಂದು ಕಟ್ಟಿದ ಬಾಯನಂಗಳಂ ಮಱೆತೆನಲಾ! ತಂದಪೆನೆನುತೊಳಪೊಕ್ಕಳ್.

ಅಂತು ದೇವಿ ಪುಗುವುದುಂ, ಲಕ್ಷ್ಮಣಂ ಮುಂತಿರ್ಪ ತೇರಂ ದಿಟ್ಟಿಸಿ—ಎಲೆ ಪೊಂದೇರೆ! ನೀನುಮೆನ್ನಂತಿರೆ ಮುಮ್ಮೆಯ್ಯೊಳೇಂ ದುಷ್ಕೃತಿಯಂ ಕಟ್ಟಿದೆಯೊ? ಸೂಳ್ಪೆಪ ಕಾಳೆಗವಱೆಗಳ್ ಮುಂತಿರೆ, ಕಿಳಿರ್ವ ತುರಗದಟಿಂ ಪಿಂತೆ ವರೆ, ನಡೆವ ಕಾಲಾಳ್ಪಡೆ ಕೆಲಬಲನೊಳಿರೆ, ಚಂಡಭಂಡನಕಂದರಿ

ರಾಜರೊಳೆತ್ತಿ ನಡೆವ ಗಂಡುಗಲಿಯಂ ಕುಳ್ಳಿರಿಸಿ ಕೊಂಡುಯ್ವ ನೈಪುಣ್ಯಂಗೆ ನಿನಗಿಂದು ಪೆಣ್ಣಂ ಪೆಣ್ಗೊಲೆಗೆಂತಂತು ವನಕೆ ಕೊಂಡುಯ್ವುದಾಯ್ತೋ! ಮಿಳಿರ್ವ ಕೇತನಮೀಗಳೆತ್ತವೋದುದೊ? ಪಾಪೆಯೇನಾಯ್ತೋ! ಆಃ! ನಿನ್ನೀಭಾಗ್ಯಮೆ! ತುರಂಗಮಂಗಳಿರ! ನೀಮುಮೇನಂ ಸಂಚರಿಸಿದಿರಯ್? ಇನ್ನೆಬರಂ ರಾಯನ ಹಯಶಾಲೆಯೊಳ್ ಬಳೆದುಂ ಬಾಟ್ದುಮೀಮುತ್ತ ದಿನಂಗಳೊಳಿಂತೊಂದು ಯೋಗಂ ದೊರೆಕೊಂಡುದೆ! ಎಂದಾಡಿ ಮತ್ತಂ ಬಿಸುಸುಯ್ದು ರಥಹಯಂಗಳ್ಗೆ—ಓ! ಕೊಲೆಗನಾನಿರೆ ನಿರ್ನೆರಂ ನಿಮ್ಮನೇನೆಂದು ಪಟಿವೆನೊ? ತೇರೆ! ನೀನೀ ಕಡೆವೊತ್ತಿಗಂ ಭೂಮಿಯಂತಿರೆ ಭೂಸುತೆಯಂ ಪೊಱುವೆ ಗಡ! ತುರಗಂಗಳೇ! ನೀಮುಂ ಧನ್ಯರ್; ಸೀತಾಕಟಾಕ್ಷವೀಕ್ಷಣ ಪರಿಪೂತಗಾತ್ರರಲ್ತೆ! ಅಱಿಗುಲಿಯೆನಾನೊರ್ವನೆ ದೇವಿಯರನೇವೊತ್ತುಂ ಸೇವಿಸಿಯುಮಿಂದೀಗಳ್ ಪುಲಿಕರಡಿಸಿಂಗಂಗಳ ಬಾಯೊಳ್ ತೂಂಕಲೆಂದೆ ಕೊಂಡುಯ್ದಪೆಂ. ಅಕ್ಕಟಾ! ಅಬ್ಬೆ ಎನ್ನನೇನೆಂದು ಪೆತ್ತಳೊ! ಮೇಣಯ್ಯನೇನೆಂದು ಸಾಕಿದನೊ! ಮುನ್ನಮೆಳವರೆಯದೊಳೀರೇಡ್ಗಾಲಂ ವನಂಬೊಕ್ಕು ನಿದ್ರಾಹಾರಂಗಳನುಟಿದು ಶ್ರೀರಾಮಚಂದ್ರಮನಂ ತ್ರಿಕರಣ ಶುದ್ಧಿಯಿಂ ಸೇವಿಸಿಯುಂ ಪಡೆದ ನೈಪಿನೇಱ್ಗೆಗಿನಿತೊಂದು ಫಲಮಾಯ್ತೋ! ಹರಹರಾ! ಎನುತೆ ಚಿಂತಿಸುತಿರ್ದಂ. ಅನ್ನೆಗಂ—

ತಾನೆ ಐರದಾಳಿಯ ಬಿಜ್ಜೋಲೆಯ ಚಂದನದ ಕುಂಕುಮದ ಕರ್ಮಣಿಯ ಕಸ್ತೂರಿಯ ಕರ್ಪೂರದ ಕಮ್ಮೆಣ್ಣೆಯ ಕಾವಿಗಪ್ಪಡದ ಕರಂಡಮಂ ಕೈಯೊಳ್ಕೊಂಡು ಅಂತಃಪುರದಿಂ ಪೊಱಮಟ್ಟು ಪೊಱವಾಗಲ್ಗೆ ಬಂದು—ತಳ್ವದಿರ್ ಪೋಪಂ ಪೋಪಮೆಂದು ಮೈದುನಂಗೆ ಕೇಳಿಸಿದಳ್. ಆಗಳ್ ಜಿತಾತಿಕಾಯಂ ಕಾಯದೊಂದು ಕಾಯ್ಪಂ ಒಡಲಿನೊಂದು ಸೂಡುಂ ಸೀತಾಂಗನಾವದನ ಶೀತಾಂಶುದರ್ಶನದತ್ತಣಿಂ ತಿಳಿದು ಮಾರ್ಪಟ್ಟುದೋ ಎನೆ ದೃಢಚಿತ್ತನಾಗಿ ಚೆಕ್ಕನೆ ಕೆಲನನಿಟಿದು, ಪೂಡಿದ ರಥಮಂ ನೂಂಕಿ ಸಜ್ಜುಗೆಯ್ದು ಕೈಯ ಕರಂಡಮಂ ತಾಂ ಕೊಂಡಿಟ್ಟು, ದೇವಿಯರಂ ರಥಮುಲಂಕರಿಪುದೆಂಬುದು ಮಂತೆಯೆ ಸಂಭ್ರಮದ ನಾಟ್ಯದಿಂ ತೇರನೇಱಿದಳ್. ಇಂತು ಜಾನಕಿ ರಥದೊಳ್ ಕುಳ್ಳಿರಲೊಡಂ ಲಕ್ಷ್ಮಣಂ ಬಗೆಯೊಳೆ ಕುಲದೈವಮಂ ಭಾವಿಸಿ, ಗುರುಜನಮಂ ನೆನೆದು, ತ್ರಿವಿಕ್ರಮಮೂರ್ತಿಯಂ ಸ್ಮರಿಸಿ, ಧರೆಯನೆನೆ ರಥಮಂ ಬಲವಂದು, ಹಯಂಗಳಂ ಜೋಳೈಸಿ, ತಾನುಮಡರ್ದು, ಎಡಗೈಯೊಳ್ ವಾಗೆಯಂ ಸಡಿಲ್ಪಿಡಿದು, ಬಲಗೈಯ ಕಸೆಗೋಲನಲುಗಿ ಚಪ್ಪರಿಸಿ ಜಡಿದಂ.

ಸಾಧ್ವೀ! ನಳ ನಳಕೂಬರ ಮಾತಲಿಗಳಂ ಸಾಟಿಗೆಯ್ಯದ ಸಾರತಿಗೆಯ್ಮೆ

ಯೊಂದು ಜಾಣ್ಮೆಯಿಂ ಸೂಟಿಯಿಂ ಸೂಂಕೆ ಪಾಱಿ ನಾಡಿಂ ನಾಡಿಂಗೆ ಧೀಂಕಿಟ್ಟುವೋ ಎನೆ ಪವನಜವಮಂ ಮುಂಚಿ ವಾಜಿಗಳೋಟಂಗೊಂಡುವು. ತಿಣ್ಣಿನೆ ಸುತ್ತುವ ಪಾಱುಂಬಳೆಯ ಗಱಗಱಮುಂ,ಬಿಣ್ಣಿನೆ ತೂಱಿ ಬೀಸುವ ಪ್ರತಿಕೂಲಪವನನೊಂದು ಭುಗುಭುಗಿಲುಂ, ದಿಮ್ಮನೆ ಕುದಿವ ಕುದುರೆಗಳ ಖುರಪುಟದ ಪಟಪಟಮುಂ, ದೇವಿಯುರಂ ಬಿಡುವುದಾಗದನ್ನೆಯಮಕ್ಕುಮೆಂದು ಕೂಡಿ ಮಱುಕದ ಮೊಱೆಯಿಂ ಬೇಟ್ಪುವೆನೆ ರಾಘವಾನುಜನ ಕಿವಿಗೆ ಕಠೋರಮಾಯ್ತು. ಪತಾಕೆಯೊಂದು ರಾಘವನೂಣೆಯುಮಂ ಕಾಣೆನೆಂದು ವಿಮುಖಮಾದುದು. ಕೆಲಬಲನ ಸ್ಥಾವರಜಂಗಮಂಗಳ್ ಕಂಡುಂ ಕಾಣದಂತಿರೆ ಕಣ್ಮುಚ್ಚಿಯಾದುವು.

೧೦ ಇಂತು ರಥಂ ಪೋಗೆವೋಗೆ ನೋಟದಳತೆಯೊಳ್, ಹರಿಯುಂಗುಟದ ತುತ್ತತುದಿಯೊಳ್ ಪುಟ್ಟಿಯುಂ ಬಾನ್ನವಿರನ ತಲೆಯನಡರ್ದುಂ ಪಾರ್ವತಿಗೆ ಸವತಿಯಾಗಿಯುಂ ಪೊಂಬಸಿಱನ ಗುಂಡಿಗೆಯಂ ಪೊಕ್ಕು ಪೊಱಮಟ್ಟುಂ ಧರೆಗಿೞಿದು ಬಂದು ಲೋಕಪಾವನೆಯೆನಿಸುತೋರಂದದೆ ಪಾತಾಲದತ್ತಣ್ಗೆ ಪೋದ ತ್ರಿಪಥಗೆ ಕಾಣಿಸಿಕೊಂಡಳ್. ಇಂತೊಪ್ಪುವ ಭಾಗೀರಥಿಗಿರ್ಕೆಯ್ಯೊಳಂ ಸಾರ್ವರ್ತುಕಮೆನಿಸಿ ಕೌಂಗಿನ ದಾಳಿಂಬದ ಚೆಂದೆಂಗಿನ ಸುೞಿವಾೞೆ ತಾೞೆಯಿೀಳೆಯ ಕಿಱುನಾರಂಗದ ಕದಿವೆಯ ಪೊಸತೋಂಟಂಗಳ್ ಕಣ್ಗೆಡ್ಡಮಾಗಿ ಸಾಲ್ಗೊಂಡುವು. ಅಲ್ಲಿಗಲ್ಲಿಗೆ ಪಣ್ತು ತೊಂಗಲಿಂಬಿಡಿದ ಮುದ್ದಿಗೆಯ ಕಾವಣಮುಂ, ಕಂಪುಗುವ ಬಿರಿಮುಗುಳಿನೊಪ್ಪುವ ಕಾಡುಮಲ್ಲಿಗೆಯ ಬಳ್ಳಿವಾಡಮುಂ, ರಾಜಿಸೆ ನೀರ್ದಾಣದೊತ್ತಿನೊಳ್ ಪಚ್ಚನೆ ಬೆಳೆದ ಹರಿತಶಾಡ್ವಲಮುಂ, ಸುತ್ತುಂ ನೀಳ್ದ ಪೊದೆದುಂಗೆಯ ಜೊಂಪಮುಂ, ವಿರಾಜಿಸೆ ಮುಗಿಲನಿಱುಂಕುವ ಪೆರ್ಮರಂಗಳ್ ಪಂತಿವಿಡಿದೊಪ್ಪಿರೆ ನದೀಪ್ರದೇಶಂ ಚೆಲ್ವಾಯ್ತು.

೨೦ ಅನಿತಱೊಳ್ ಕಣ್ಣಳತೆಯ ಪೊಚ್ಚಂ ಕೈಯಳತೆಯೊಳಾಗೆ ರಥದಿನಿೞಿದಿರ್ವರುಂ ದರ್ಶನಸ್ತುತಿಗೈದು ಮತ್ತಂ ದಾಂಟಲ್ಕೆಂದು ಅಂಬಿಗರೊಡನೆ ಬೈತ್ರಮನೇಱಿದರ್. ಆಗಳ್ ತನ್ನಂ ಮನ್ನಿಪೊಂದು ನೆವದಿಂ ಬಂದಳೆಂಬ ಸಂತಸದಿಂ ಲೋಕಪಾವನೆಯೊರ್ಮೆ ಬೞಿಯೊಳ್ ಸುೞಿಸುೞಿದುಮೊರ್ಮೆ ಹೈಮಕಂಕಣದಿನೊಪ್ಪುವ ತೆರೆಗೈಗಳಿನಪ್ಪಲ್ಕೆಂದು ಮೇಲ್ವಾಯ್ದುಮೊರ್ಮೆ ಬೆಳ್ನಗೆಯೊಳ್ ನಕ್ಕುಮೊರ್ಮೆ ಮೆಯ್ವೆರ್ಚಿ ನಲಿನಲಿದುಮೊರ್ಮೆ ಮೆಲ್ನುಡಿಯಿಂ ಸ್ವಾಗತಮಂ ಕೇಳ್ದುಂ ದೇವಿಯನುಪಚರಿಸುವಳೆಂಬಂತಿರೆ ಬೞಿವೞಿಯೊಳ್ ಸುೞಿಯಿಂ ಸಿಡಿವ ಸೀರ್ಪನಿಯಿಂ ಕಿಱುದೆರೆಯಿಂ ನೊರೆಯಿನುಬ್ಬರದ

೩೦ ನೆರೆಯಿಂ ಕಳಕಳದೊಂದು ಮೊೞೆಯಿಂ ಗಂಗೆ ಕಂಗೊಳಿಸಲೊಡಂ, ಸೀತೆ

ಮನದೆ—ನೀನೆ ಗತಿಯೆಂದು ನಂಬಿರ್ಪ ಸಜ್ಜನರ್ಗೆದೆ*ಯೊಳಿಂಜೀವ ಮೈಗೊರ್ಬಿನ ಬಿಂಕದಿಂ ತುಡುಕಿ ಮೇಲ್ವಾಯ್ವ ದುರ್ಜನರಸೆದೆ* ಮೆಟ್ಟುವ ನಿನ್ನ ಪೆರ್ಮೆ ಪೆಱರ್ಗೊಳವೆ? ಮುಟ್ಟಿ ಸೇವಿಪರ ಪಂಕಮನೊ ರ್ಮೊದಲೊಳೆ ಪಾಟ್ಗಿಡಿಸುತುಂ ಶಶ್ವಜ್ಜೀವನಮನೀವ ಕಾವ ಜೀವಕೋಟಿಯು ನೊಡಲೊಳ್ ಬಯ್ತಿಟ್ಟು ವಿಶ್ವರೂಪಿಣಿಯೆನೆ ಮೆಱೆವ ನೆಲೆಗಾಣದ ನಿನ್ನೀಮೈಮೆಯಂ ಬಣ್ಣಿಸಲಾವಂ ಸಾಲ್ವನೆಂದು ಗುಣಸ್ತವನಂಗೆಯ್ದಳ್. ಸೌಮಿತ್ರಿಯುಂ ತನ್ನ ಮುತ್ತ ಪಿರಿಯರನುದ್ಧರಿಸಿದ ಭಾಗೀರಥಿಯಂ ಬಲ್ಲಂತೆ ಪೊಗಟ್ದಂ.

ಅನ್ನೆಗಂ ಪಾಱೋಡಂ ಕರೆಮುಟ್ಟೆ ಬರೆ ನಾವಿಕರ್ಗೆ ತರಣಪಣ್ಯಮನಿತ್ತು ಮನ್ನಿಸಿ ಇರ್ವರುಮನುಕೂಲದೆಡೆಯ ಪುಳಿನದೊಳಿಟಿದರ್. ಆಸಮಯದೊಳ್ ೧೦ ನಿಡುವಯಣದೊಂದು ಬೞಲ್ಕೆ ಕಡಿದಾಗೆ ಬಾಯಾಱಿ ತನ್ನ ಕರಂಗಳಿಂ ಗಂಗಾಜಲಮಂ ಮೊಗೆದೀಂಟಲ್ಕೆಂದು ತೇರಿನಿಟಿದು ಬಾನನಡುವೆ ನಿಂದನೆನೆ ನಡುವಗಲ ಭಾಸ್ಕರಂ ನಿಶ್ಚಲಂ ಪೊಳೆಯುತಿರ್ದಂ.ತೊಳಗಿ ಬೆಳಗುವ ರವಿಯ ಕಿರಣಂಗಳೆತ್ತಂ ಪೊಱೆಯ ಜಲದೊಳ್ ಮಾರ್ಪೊಳೆಯುಲೊಡಂ ಪಾಲ್ದೊಱೆ ಯೆನೆ ಗಂಗೆ ವಹಿಸುತಿರ್ಕುಂ. ನೇಸಱ ಕಾಯ್ಪಿನ ಸೂಡಿಂ ಬೆಂದು ಕುಂದಿ ನಂದಿ ಕಾಲ್ಗೆಟ್ಟು ಪವನನಾಗಳ್ ಬೆಚ್ಚನೆ ಬೀಸುತಿರ್ದಂ. ಗಂಗೆಯ ತಡಿಯೊಳಿರ್ಕೆಲನೊಳಂ ಬಿಸಿಲ ಜಳಕ್ಕೆ ನೀರಡಸಿ ಹರಿಣಗಣಂ ಬಂದು ನಿಂದು ಮುಂಗಾಲಂ ನೀರೊಳೂಱಿ ಪಿಂಗಾಲಂ ನೆಲದೆ ಪಿಂತಿಟ್ಟು ಮುಸುಂಡಂ ನೀಡಿ ಕಣ್ಮುಚ್ಚಿ ನೀರಂ ಕುಡಿದು ತಣಿದು ಮರಲ್ವುವು. ವಱಿ ಗೊಣಸುಗಳೋರೊಂದೆಡೆಯ ತಣ್ಣೆಟಲೊಳ್ ಗಾಳಿಗೆ ಮೆಯ್ಯೊಡ್ಡು ತೊಱಗಿ ೨೦ ಕೊಡಂಕೆಯಾಡೆ ಫೇನಮುತ್ಕಟಮಾಗೆ ಅರೆಯೆಟ್ಟುಱೊಳೆ ಮೆಲ್ಕಾಡು ತಿರ್ದುವು. ಸೋಗೆನವಿಲ್ಗಳ್ ನಾಟ್ಯರಂಗದತ್ತಣಿಂ ಬೀಡುಗೊಂಡುವು. ಖಗಂಗಳ್ ನಿಡುಮರಂಗಳ ತೂಱಲ್ಗೊಂಬನಡರ್ದು ಮೋನಮಿರ್ದುವು. ನೀರ್ವಕ್ಕಿಗಳ್ ಜಳಕೇಳಿಗೆ ಮೊಗಸಿದುವು. ಇಂತು ಮಧ್ಯಾಹ್ನಕಾಲಮಪ್ಪು ದುಮವರ್ ಚೆನ್ನಸುಗೆಯ ನೆೞಲಡಿಯ ನುಣ್ಮಟಲೊಟ್ಟಿಲೊಳ್ ಕೆಂದಳಿರಿಂ ನಲ್ಪಾಸುಗೆಯ್ದು ಕ್ಷಣಂ ಕುಳ್ಳಿರ್ದು ಮೆಣ್ ತೀರ್ಥದೊಳ್ ಮಿಂದರ್. ಅಂತು ಮಿಂದು ಸೀತೆ ತನ್ನ ಕಿಱುವೆರಲ ಶ್ರೀರಾಮಮುದ್ರಿಕೆಯಂ ಕೈಯೊಳ್ ಕೊಂಡು ಗಂಗಾಜಲದಿನಭಿಷೇಕಂಗೆಯ್ದು ಲಕ್ಷ್ಮಣಂ ತಿಱಿತಂದ ಪುಷ್ಪ ದಿನಲಂಕರಿಸಿ ತನಿವಣ್ಗಳಂ ಸಮರ್ಪಿಸಿ ತೀರ್ಥಪ್ರಸಾದನೈವೇದ್ಯಂಗಳಂ ಮೈದುನಂಗಮಿತ್ತು ತಾನುಂ ಕೈಕೊಂಡಳ್. ಲಕ್ಷ್ಮಣನುಂ ಗಂಗಾಜಲ ೩೦

ಸ್ನಾನಪರಿಪೂತಕಳೇಬರಂ ದೇವಿಯರಂ ಮೂಱುಂ ಸೂೞ್ ಬಲವಂದು ಮಣಿದು ಇತ್ತುದಂ ಮಹಾಪ್ರಸಾದವೆಂದು ಭಕ್ತಿಯಿಂ ಸ್ವೀಕರಿಸಿದಂ. ಅಂತಿರೆ ಬಿಸಿಲ್ ತಣಿಯೆ, ತಂಗಾಳಿ ಮೈದೋಱೆ, ವಿಹಗಂಗಳ್ ನೇರದಿಂ ಪಾಡೆ, ಮಾರ್ತಂಡಂ ಪಶ್ಚಿಮಾಭಿಮುಖನಾಗೆ, ಸೀತಾಲಕ್ಷ್ಮಣರುತ್ತರಾಭಿಮುಖರಾಗಿ ಪೊಱಮಟ್ಟರ್.

ಇಂತು ನಡೆನಡೆದು ಬಲ್ದೂರಂಬೋಗಿ ನಟ್ಟಡವಿಯಂ ಪೊಕ್ಕು ಕಟ್ಟಕಡೆಯೊಳಣ್ಣನ ಕಟ್ಟಾಣತಿಯನೊರೆದು ಲಕ್ಷ್ಮಣಂ ಭೂಮಿಜೆಯನುೞಿಸಿ ಪೋದಂ.

ಎಂಬಲ್ಲಿಗೆ ಶ್ರೀರಾಮಾಶ್ವಮೇಧದೊಳ್
೧೦ ಸೀತಾಪರಿತ್ಯಾಗವೆಂಬ ಪಂಚಮಾಶ್ವಾಸಂ ಸಂಪೂರ್ಣಂ.

---

## ಷಷ್ಠಾಶ್ವಾಸಂ

# ವಾಲ್ಮೀಕಿದರ್ಶನಂ

ಮನೋರಮೆ—(ಕಂಬನಿಗಱೆದು) ಆಃ! ಎನ್ನೊಡೆಯ! ನೀನುಮೆಂತು ಕಲ್ಮನನಾದಯ್ ಒರ್ತಡವೆಯೆ ದೇವಿಯಂ ಕಾರಡವಿಯೊಳುೞಿದು ಲಕ್ಷ್ಮಣಂ ಪೋದನೆಂಬೊಡೆ. ಮೈದುನಂಗಮಾದೊಡಮೆಂತು ಮನಮಾದುದೋ! ಮೇಣೆಂತು ದೇವಿಯರ್ಗೆ ಕಾವಲಿರದೆ ಪೋದನೋ! ತೊಱೆದು ಪೋಪನ್ನಂ ಸೀತೆಯೇನೆಂದು ಮಱುಗಿದಳೋ! ಅಕ್ಕಟಾ! ಪೆಣ್ಗಳೊಂದು ಬಾೞ್ತೆ ಬಾೞ್ತೆಯೆ!

ಮುದ್ದಣಂ—(ತಾನುಂ ಸರಿವಶ್ರುಜಲಮಂ ಕಿಱುವೆರಲಿಂ ಮಿಡಿದು) ೨೦ ಪ್ರಾಣೇಶ್ವರೀ! ಈ ಇರವನೇನೆಂದು ಪೇೞ್ವೆನೊ? ಅೞಲ್ ಕೊರಲನೌಂಕುಗುಂ. ಮುಂಗತೆಯನಾನುಂ ಪೇೞ್ವೆಂ.

ಮನೋ—ಪೆಣ್ಣೊಡಲಲ್ತೆ! ಎಂತು ಸೈರಿಪೆಂ. ಸೀತೆ ಏನಾದಳ್, ಪೇೞ.

ಮುದ್ದ—(ನೀಡುಂ ಸುಯ್ದು) ಆಯ್ತು, ಕೇಳ್. ಅಂತು ಗಂಗೆಯಂ ಸ್ತುತಿಸಿ ಮುಂತೆ ಸೀತೆಯುಂ ಪಿಂತೆ ಸೌಮಿತ್ರಿಯುಮಾಗೆ ಪಯಣಂಬೋದರ್. ಸೀತೆಗೆ ವೈಖಾನಸರ ಮುತ್ತೈದೆಯರನೇವೊತ್ತಿಂಗೆ ಕಾಣ್ಬೆನೋ

ಎಂಬೊಂದು ತವಕದಿಂ ನಡೆ ಮುಂಚಿದುದು ; ಲಕ್ಷ್ಮಣಂಗೆ ಅಣ್ಣನಾಣತಿಯು
ನೆಂತೊರೆವೆನೋ ಮೇಣೆಂತು ದೇವಿಯುಂ ತೋಱುವೆನೋ ಎಂಬೊಂದು
ದುಗುಡದಿಂ ಪಿಂಚಿದುದು. ಆಃ! ಚಂದ್ರಶಾಲೆಯೊಳೊರ್ವಳುಂ ಶತ
ಪಥಂಬೋಗೆ ಬಸವೞಿವ ಗರ್ಭಿಣಿ ಇಂದು ಬಿಸಿಲಬೇಗೆಗೆ ಕಾಪಥದೊಳ
ಮಾಯಸಂದೋಱದೆ ಉಲ್ಲಸದಿಂ ನಡೆದು ಪೋಪಳೆಂದೊಡೆ ತವಕವೆಂತಪ್ಪ
ರುಮಂ ಮಾಱುಗೊಂಡಲ್ಲದೇಂ ಪೋಕುಂ! ಇಂತು ಮುಂಬರಿದು ಪೋಗೆ
ಪೋಗೆ ಸೀತೆ ಪಿಂದುೞಿದು ಬರ್ಪ ಮೈದುನಂಗೆ—ಏಂ ಕಂದ!
ನಡೆಯೊಳ್ ಪಿಂದಾದಯ್? ಪಥದೊಳ್ ಕಲ್‌ಮುಳ್ಗಳಣಮಿಲ್ಲಂ. ಇಂತಿರೆ
ಪೆಣ್ಣಾಂ ಸಾಗಿವರೆ ನೀಂ ಗಂಡುಗಲಿ ನಡೆಯಲಾಱೆಯೆನೆ, ನಾಣಲೇ!
ಪಿಂಚದಿರ್ ಬಾರೆನುತೆ ಬೞಿವರ್ಪನ್ನಂ ಪಯಣಂಮಾಣ್ದು ನೆರೆವರೆ ಪಂತಿ ೧೦
ಗೊಂಡು ನಡೆಯುತಿರ್ದಳ್. ಮತ್ತಂ ಪೊೞ್ತುಪೊೞ್ತಿಂಗೆ ರಾಘವಾನುಜಂಗೆ
ಕೆಲಬಲನ ವನಂಗಳಂ ತೋಱಿ ಅಂದಿನ ದಂಡಕೆಗೊರೆಯಾಗದೆಂದು ತೂಗಿ
ಬಣ್ಣಿಪಳ್. ಎಂತಾನುಂ ಮೊದಲ್ ನುಡಿನುಡಿಗೊಂದು ಬೞಿಯುಮೆಡೆಯೆಡೆ
ಗೊಂದು ಕಡೆಯೊಳ್ ಕಡೆಕಡೆಗೊಂದು ಹುಂಕಾರಮೆ ಲಕ್ಷ್ಮಣನ ಪಡಿ
ನುಡಿಯಾಯ್ತು. ಅಂತಪ್ಪುದುಂ ಲಕ್ಷ್ಮಣನ ಮೊಗಮಂ ನಿಟ್ಟಿಸುತೆ ತಾಂ
ಬೞಲ್ದಿರ್ಪಿನನೀತನುಮಾಯಸದಿಂ ಜೇಸತ್ತನೆಂದಱಿತು ಕೆಮ್ಮನೆ ಮೆಲ್ನಡೆಯಿಂ
ಪೋದಳ್. ಲಕ್ಷ್ಮಣನುಂ ಬೆನ್ನನೆ ಬಿನ್ನನೆ ನಡೆದಂ. ಈ ಮಾೞ್ಕೆಯಿಂ
ಕಡುದೂರಂ ನಡೆದು ಘೋರಾರಣ್ಯಮನೊಂದಂ ಪೊಕ್ಕರ್. ಮುನ್ನಮೆ
ನಡೆನಡೆದು ಬೞಲ್ದು ಬಿಸಿಲ ಜಳಕ್ಕೆ ಬಾಡಿ ಬಸವೞಿದ ಬಾಲೆ ಈಗಳ್
ಕಂಗೆಟ್ಟಳಿದೆ*ಗುಂದಿದಳ್ ಬಾಯ್ಬಿಟ್ಟಳ್. ಹಾ! ಈ ಪೞುವನೇನೆಂದು ೨೦
ಪೇಳ್ವೆನೋ! ನೇಸಱ ಕದಿರ್ಗೆ ಇಂಬಿರದೆ ಕೞ್ತಲೆಗೆ ಬೀಡೆನಿಸಿರೆ ಒಂದೆಡೆಯಿಂ
ಸಿಂಗಗರ್ಜನೆಯುಮೊಂದೆಡೆಯಿಂ ಪೆರ್ಬುಲಿಯ ಮೊಱೆಯುಮೊಂದೆಡೆಯಿಂ
ಗಜದ ಬೃಂಹಿತಮುಂ ಕೇಳಿಸೆ ಭೀಕರಮಾಗಿರ್ಪುದು ; ಕರಡಿಗಳ್ ದಾರಿಯೊಳ
ಡ್ಡಂಗಟ್ಟಿ ಮೇಲ್ವಾಯ್ವುವು ; ಪೆರ್ವಾವುಗಳೆತ್ತಂ ಬುಸುಗುಟ್ಟುತ್ತೆ ಪರಿವುವು.

ಆಪೊೞ್ತಿಂಗೆ ಭೂಮಿಜೆ ದೆಸೆಗೆಟ್ಟು ತಿಟ್ಟನೇಱಿ ಬೆಟ್ಟನಿೞಿದು ಕೞಿದು
ಅಗೞ್ತೆಯಂ ದಾಂಟಿ ದರಿಯಂ ಸಾರ್ದು ಮರನಂ ಪಾಯ್ದು ಕಲ್ಲನೆಡಹಿ
ಮುಳ್ಳಂ ತಡವಿ ಕಣ್ಗಾಣದುಳ್ಕಿ ಬಳ್ಕಿ ನಡೆನಡೆದು ಕಾಲೊಡೆದು ನೆತ್ತರ್
ಬಸಿಯೆ ಮೆಯ್ಗುಂದಿ ಧರೆಗೆ ಹಮ್ಮಯಿಸೆ ಸೌಮಿತ್ರಿ ಮುಂದುಗಾಣದೆ
ದೇವಿಯನುಪಚರಿಸುತಿರ್ದಂ. ಆಗಳ್ ಕಿಱಿದಾನುಂ ಬೇಗದಿಂ ಮುಚ್ಛೆದಿೞಿದು
ದುಃಖಾರ್ತೆಯಾಗಿ ಮೈದುನಂಗೆ—ಓ ಲಕ್ಷ್ಮಣಾ! ನಡೆಯಲಾಱೆನಯ್. ೩೦

ನೋಡು ನೋಡಯ್ ಕಲ್ಲೆಡಹಿ ಮುಳ್ಳಾಂಟಿ ಕಾಲಿಂ ಬಸಿವ ನೆತ್ತರಂ. ಬಸಿಱಿನೊಂದು ಬೇನೆಯಿಂ ನೊಂದೆನಕ್ಕಟಾ! ಮೈದುನಾ! ಎತ್ತಲುಂ ಮೊಱೆವ ಸಿಂಹಶಾರ್ದೂಲ ಭಲ್ಲೂಕವೃಕಸೂಕರಾದಿದುಷ್ಟಮೃಗಂಗಳ ನಿಷ್ಠುರ ಧ್ವನಿಗೆ ಅಳ್ಕುವೆನಯ್! ಹಾ! ಕಂದಾ! ಈ ದುರ್ಘಟವಮಾದ ಕಾರಡವಿಯೊಳ್ ಋಷಿಗಳ ಪುಣ್ಯಾಶ್ರಮಮುಂಟೇ! ನಿಕ್ಕುವಂ ನೀಂ ಬಟ್ಟೆದಪ್ಪಿದಯ್. ಹಾ! ಹಾ!! ಪಸಿದ ಪುಲಿಯ ಬಾಯ್ಗಿಂದು ತುತ್ತಾದೆನಲಾ! ಹಾ ರಾಘವಾ! ಹಾ ಪ್ರಾಣನಾಯಕಾ! ಕೆಟ್ಟೆನಲ್ತೆ. ಹಾ ಕರುಣಾಕರಾ! ನೀನೆ ಪುಣ್ಯಮೂರ್ತಿಯಿರೆ ಪುಣ್ಯಾಶ್ರಮಂ ಪೆಱತುಂಟೇ! ಕಮಲಮನುಱಿದುಂ ಮಧುಭ್ರಾಂತಿಯಿಂ ಕಿಂಶುಕಕ್ಕೆಱಗುವ ಭ್ರಮರನಂತಿರೆ ನಿರ್ನೆರಂ ಕಾಡೊ

೧೦ ಳಾದೆಂ. ನಿನ್ನಡಿದಾವರೆಯನುಱಿದು ಬಂದೊಡಿಂತೆನಗೀವಿಧಿಯಾಯ್ತೇ! ಹಾ! ಶ್ರೀರಾಮಚಂದ್ರಮಾ! ಮುಂತೇನಯ್ ತನಗೆ ಬಟ್ಟೆ! ಎಂದು ಬಾಯಾಱಿ ಮಱುಗಿದಳ್.

ಮೋಹನಾಂಗೀ! ಇಂತು ಪ್ರಲಪಿಸುವ ರಾಘವನರ್ಧಾಂಗಿಯಿರವಂ ಕಂಡು ಲಕ್ಷ್ಮಣದೇವನ ಬಗೆಯೊಳೇನಕ್ಕುಂ ಬಗೆಯು. ಒಂದೆಡೆಯೊಳಗ್ರಭವನ ಕಟ್ಟಾಣತಿ; ಒಂದೆಡೆಗೆ ಸೀತೆಯತ್ತಣ ಮಱುಕಂ. ಏವಂ? ದೇವಿಗೆ ನೀನಂಜದಿರೆಂಬೊಡುಂಟೆ? ಪುರಕೆ ಮರಳ್ಚುವೆನೆಂಬೊಡುಂಟೆ? ತಾನೆ ಕಾವಲಿರ್ಪೆನೆಂಬೊಡುಂಟೆ? ಆಃ! ತಲೆವೋಕನೊಂದು ಮಾಟಮೇ! ಅಂತಾಗೆ ರಾಘವಾನುಜಂ ಶಶ್ವದ್ಗಳದಶ್ರುಧಾರಾಸಿಕ್ತಕಪೋಲಂ ಕಂಪಿತಕಾಯಂ ಸೀತೆಯ ಪದದೆಡೆಯೊಳ್ ಮೈಯಿಕ್ಕಿ—ದೇವಿಯರೆನ್ನಂ ಕಂದನೆಂದು

೨೦ ಸಂಬೋಧಿಸದಿರಿಂ. ಪಗೆವನೆಂದೇ ಬಗೆಯಿಂ. ಇನ್ನೆವರಮಣ್ಣನಾಣತಿಯಂ ನಿಮ್ಮೊಳೆಂದೆನಿಲ್ಲ. ನಾಡೊಳಾವನೊ ಮಡಿವಳನೊರ್ವನಭದ್ರಮಾಗೆ ದೇವಿಯರೊಳ್ ಕುಂದಿಟ್ಟು ದೇವರಂ ಚುಚ್ಚ ನಾಡಿದಂ ಗಡ! ಅಂತೀದೂಸಱಿನಗ್ರಭವಂ ನಿಮ್ಮಂ ವಿಪಿನದೊಳಿಟಿಪಿ ಬರ್ಪುದೆಂದೆನ್ನಂ ಪೇಲ್ದಂ. ಇದೆಕೊಳ್ಳಿಂ ಸ್ವಾಮಿಕಾರ್ಯಧುರಂಧರಂ ಅಗ್ರಜನ್ಮಾಜ್ಞಾನುವರ್ತಿ ವೀರಾಗ್ರಗಣ್ಯಂ ಕೃತಕೃತ್ಯಂ ನಚ್ಚಿನ ಮೈದುನನೆಂ ಲಕ್ಷ್ಮಣನೆಂ ಈ ಒಸಗೆಯಂ ಪೇೞಲ್ಕೆಂದು ಬೆನ್ನಿಕ್ಕಿ ಪೊೞಲ್ಗೆ ಪೋದಪೆಂ, ಎಂದಂ.

ಸುಂದರೀ! ಅತಿಕಾಯವೈರಿಯುಸಿರ್ದ ನೊಲ್ಲನಾಲಿಸೆ ಬೀರದ ಹರವಸಂ ತೋಱುಗುಂ. ಅತ್ತಿಗೆಯೀವೊಂದವಸ್ಥೆಗೆ ಪಟಯಿಸನೆ, ಬೇಯನೆ, ನೋಯನೆ! ಜಗದೆ ದುಃಖದೊಳೆ ಪೞಂಗಿದರ್ಗೆ ಮೇಣುಂ ಮೇಣ್ ದುಃಖಮೊದವೆ

೩೦ ಬೀರದ ರೋಸಕ್ಕೆಡೆವರ್ಕುಂ. ಇಂತು ಲಕ್ಷ್ಮಣಂ ಪಾಷಾಣಕಠಿನಹೃದಯ

ನಾದನ್ನೆಸೆ! ಎಂತುಂ ಕುಱು ಪೋದುದೆ? ಮನದೊಳೆ ಮಮ್ಮಲ ಮಱುಗಿದಂ, ನೊಂದಂ, ಬೆಂದಂ.

ಲಕ್ಷ್ಮಣನಂತಿರ್ಕೆ. ಸೀತೆಯಿರವನೇನೆಂಬೆನೊ? ಹಾ! ಹಾ! (ಕಂಬನಿ ಯಿಡುವಂ.) ಮುಂಗಾರ ಸಿಡಿಲ ವೊಱಗಂ ಕೇಳ್ದು ಸುರುಂಟುವಣಂಬೆಯ ತಿಟ್ಟದಂತೆ ನೆಟ್ಟನೆ ಬೀಸುವ ಬಿಱುಗಾಳಿಯ ಪೊಯ್ಲಿಗರೆಮುಱಿದು ಬಾಡುವ ಕಪ್ಪುರವಾಱೆಯಂತೆ ಒರ್ಮೊದಲೊಳೆ ದೇವರನಾಡಿದ ಪರುಷತರವಾಕ್ಯ ಮಾರ್ಗಣಂ ಕರ್ಣಕೋಟರಮಂ ನಾಂಟಿ ಮೊಗಂಗುಂದಿ ದುಃಖಾವೇಶದಿಂ ನಿಶ್ಚೇಷ್ಟಿತೆಯಾಗಿ ಮೇಣೊರ್ಮೆ ಹಂಮದಂಬೋದಳ್. ಅನಿತಱೊಳೆ ಲಕ್ಷ್ಮಣಂ ನೆರೆಯೊಳೊಟ್ಟುವರ್ಬಿಯ ನೀರಂ ಸಟ್ಟಲೆಯೊಳ್ ತಂದು ದೇವಿಯೊಳ್ ತನ್ನೊಂದು ಕಡೆವೊತ್ತಿನ ಸೇವೆಯೆಂದು ಪಾದಕಮಲಮಂ ೧೦ ತೊಳೆದು ಕಣ್ಗೆ ಸುರಿದು ಕೈಗೆ ತೊಡೆದು ದೊನ್ನೆಯಂ ಪತ್ರಪುಷ್ಪಮೆನೆ ಬೈತಲೆಯೊಳ್ ಶೇಖರಿಸಿದಂ.

ಈ ಶೈತ್ಯೋಪಚಾರಸಪರ್ಯೆಗೆ ಪ್ರಸನ್ನೆಯಾದಳೆನೆ ಕಣ್ದೆಱೆದು ಕೆಯ್ಯಲುಗಿ ಕಾಲ್ಮಗುಚ್ಚಿ ಸುಯ್ಲಾಡಿದಳ್. ಇಂತು ಮೆಯ್ಯಱಿತು ಅಳವುಗಟಿದ ಮನದಟಲಿಂ—ಹಾ! ಹಾ! ಕಂದ, ಲಕ್ಷ್ಮಣಾ! ಇಂತುಮೆನ್ನೊಂದು ಬಾಳ್ಕೆಯುಸಕಟಿದುದೇ! ಮಾವು ಬೇವಾಯ್ತೇ! ಕರ್ಪುರ ಕೈಪೆಯಾಯ್ತೇ! ತೆಂಗಾಯ್ ಸಿಂಗಾಯಾಯ್ತೇ! ಒಂಡೊಸರ್ವ ನೆಯ್ದಿಲ್ ಸೆಂಡುಮಲ್ಲಿಗೆ ಯಾಯ್ತೇ! ಇಂದಿಗೆ ಕೂರ್ಮೆಗಡಲ್ ಬಱತುದೇ! ಹುಣ್ಣಿಮೆಯ ತಿಂಗಳಂ ರಾಹು ಕಣ್ಣೆವೆ ಮುಚ್ಚಿ ಸುಂಗಿದುದೇ! ಧರ್ಮಂ ಕರ್ಮಡುವೊಕ್ಕುದೇ! ನೀತಿ ಬಾರ್ತೆಗೆಟ್ಟುದೇ! ನನ್ನಿ ಬೆನ್ನಿತ್ತುದೇ! ಹಾ ಕಂದ! ಅನಾಥೆಯಾದೆನಯ್. ೨೦ ಹಾ! ಹಾ! ಮಜ್ಜೀವಿತೇಶನಿಂದೆನ್ನಂ ಕಾರಡವಿಯೊಳ್ ಬಿಟ್ಟು ಬಾರೆಂದನೇ! ಎನ್ನೊಡೆಯಂ ತೊಱೆದನೇ! ಕೂಟನೊಂದು ಪಿಸುಣ್ಗೆ ನಿರಪರಾಧಿನಿಯನೆನ್ನಂ ಬಲಿದೆತ್ತನೇ! ರಾಮಚಂದ್ರಮನಿಂದೆನ್ನಂ ಕೈವಿಟ್ಟನೇ! ಹಾಹಾ! ಪ್ರಾಣ ನಾಥನಿಂದೆನ್ನಂ ಮುಟ್ಟನೇ? ಅಕ್ಕಟಾ! ಬಾಱ್ಗೊಲೆಯಾದೆನಲಾ! ಹಾ ಕರುಣಾಕರಾ! ಇನ್ನೆನಗೆ ಗತಿಯಾರಯ್? ಹಾ ನಲ್ಲ! ಮುಂತೆನಗೆ ಬಟ್ಟೆ ಯಾವುದಯ್? ಹಾ ಕಾಂತ! ಆವಗಂ ನೀನೆ ಗತಿಯೆಂದು ನಂಬಿ ಸೇರ್ದಳಂ ಇಂತೊರ್ಮೊದಲೊಳೆ ತ್ಯಜಿಸಲ್ಕೆಂತು ಮನದಂದಯ್? ಎನ್ನೊಳಾವುದೂಣೆ ಯಮಂ ಕಂಡಯ್? ಊರೊಳ್ ಮಾರಿಯೆಂದು ಮನೆವೋಱಿಯಂ ಮಾಱ್ಗುಗುಡುವರೇ! ಪಾಲ್ಪುಟಿತುದೆಂದಾವಂ ಪೊಯ್ವರೇ? ನಿರ್ವ್ಯಾಜ ಮಸಗನೊರ್ವಂ ತೆಗಟ್ಟನೆಂದಬಲೆಯನಿಂತು ಕಾರಡವಿಯೊಳ್ ಬಿಡುವರೇ! ೩೦

ಹಾ! ಮನೋವಲ್ಲಭ! ಆಂ ನಿನ್ನ ಧರ್ಮಾಂಗಿಯಲ್ತೆ! ಪಟ್ಟದರಸಿಯಲ್ತೆ! ಎನ್ನನುಟಿದೆಂತರೆಮೆಯ್ಯೊಳಿರ್ಪಯ್! ಎಂತು ಪಟ್ಟವಣೆಯನೇಱುವಯ್! ಹಾ ರಾಘವಾ! ನಿನ್ನಡಿಗಳಾಣೆ ಎನ್ನೊಳ್ ಕೊಱತೆಯಿರೆ ಮನ್ನಿಸಿ ಕಾವುದಯ್. ಕೈಮುಗಿದು ಬೇಡುವೆಂ, ಬೇಡುವೆನೆಂದು ಪಲುಂಬಿದಳ್.

ಮತ್ತಮೆಱೆಯನಂ ನೆನೆದು—ಹಾ! ರಮಣ! ಅಂದೆಳಮೆಯ್ಯೊಳೆನ್ನ ಮದುವೆಗೆಂದು ನೆರೆದ ರಾಯರ ಸೊರ್ಕಂ ಮುಱಿವಂತಿರೆ ಬಂದು ಹರನಬಿಲ್ಮುಱಿದ ನಿನ್ನ ಬೀರಮುಮಂ, ನಿನ್ನ ಘನಶ್ಯಾಮಲಕೋಮಲಗಾತ್ರಮುಮಂ, ನಿನ್ನ ಸೊಬಗುಗುವ ಮುಖಕಮಲಮುಮಂ, ನಿನ್ನ ಸೊಗಸುದೋಱುವ ಸವಿನುಡಿಯ ಜಾಣ್ಮೆಯುಮಂ, ನಿನ್ನ ನಡೆವ ಬಿಂಕದ ಗಾಡಿಯುಮಂ, ನಿನ್ನ ಕರ್ಣಾಂತ ವಿಶ್ರಾಂತಸರಳಸುಲೋಚನದರೆನೋಟದ ನೋಟಮುಮಂ, ಆ ನಿನ್ನ ಕಿಱುನಗೆಯ ಬಗೆಯುಮಂ ಕಂಡು ಸೋಲ್ತು ಮೆಚ್ಚಿದೆನಲ್ತೆ! ಅಂದಿಂದಿಂಗಮೆರವಿಲ್ಲದ ಕಡುಗೆಡೆಗಿಂದು ನೆರಮಿಲ್ಲದ ಬಿಡುಗಡೆಯಾಯ್ತೇ! ಆಃ! ಚೆನ್ನ! ಆಗಳೆ ವನವಾಸಮಂ ಪೋಪಂದು ಅರೆಗಳಿಗೆಯಾನುಂ ನಿನ್ನಂ ಬಿಟ್ಟಿರಲಾಱೆನೆಂದು ಬೆಂಬತ್ತಿದೆನಲ್ಲೆ. ಈಗಳೆಂತಯ್ ಚಮೂರು ಪಂಚಾಸ್ಯ ಭಲ್ಲೂಕ ವೃಕ ಸೂಕರಭೀಕರಮಾದೀ ನಟ್ಟಡವಿಯೊಳೊರ್ವಳೆ ನಿನ್ನನಗಲ್ದು ಯಾವಜ್ಜೀವಮುಮಿರ್ಪೆಂ? ಹಾ! ಕರುಣಾಕರಾ! ಮುನ್ನಂ ವಿಪಿನದೊಳ್ ಸಿಚ್ಚವಯಣಂಬೋಪಂದು ಆನೆನಸುಂ ಬಚಲ್ದಿರೆ ಬಲ್ಚಟಲ್ದಳೆಂದು ಪತ್ತೆಸಾರ್ದು ಕೈವಿಡಿದು ಕರ್ನೆಟಲ್ಗುಯ್ದು ತೊಡೆಯೊಳ್ ಕುಳ್ಳಿರಿಸಿ ಮೆಯ್ದಡವಿ ತನ್ನ ಚೇಲಾಂಚಲದಿಂ ಬೆಮರ್ತೆನ್ನೀಮೊಗಮಂ ಪೂಸಿ ಬೀಸಿಯುಂ ಬಾಯಾಱೆ ನಟ್ಟನೆ ತಿಳಿಗೊಳನ ಪನಿನೀರಂ ಕಮಲದೆಲೆಯೊಳ್ ತಂದಿತ್ತುಂ ನಿಡುವಯಣಕ್ಕೆ ಬೇಸಱಲೊಡಂ ಬಿನದಮಂ ತೋಱಿ ನಗುವಂತು ಮಾಡಿಯುಂ, ಕಲ್ಲೆಡಹೆ ನೊಂದಳೆಂದು ಮಱುಗಿಯುಂ ನಿಲೆ ನಿಂಡುಂ ಪೋಗೆ ಪೋಗಿಯುಂ, ನಗೆ ನಕ್ಕುಂ ಉಪಚರಿಸಿದ ನೀನೀಗಳ್ ಎಂತು ಕಲ್ಮನನಾಗಿ ಮಾಲತಿಯಂ ಮೆಕ್ಕೆಯಿಂ ಸಿಂಗರಿಸಿದಯ್! ಹಾ! ರಾಮಚಂದ್ರಮ! ದುಷ್ಟರಾಕ್ಷಸನಂದು ಪುಸಿದವಸಿ ಎನ್ನಂ ಕಳ್ದುಯ್ಯಲೊಡಂ ಬಿಡಲಾಱದ ಮೋಹದಿಂ ಮಱುಗಿ ಕೊರಗಿ ಪುಡುಂಕಿವಂದು ತಿಬ್ಬಮಂತು ಪಿರಿದಾಯಸದಿಂ ಕಡಲ್ಗಣೆಗಟ್ಟಂ ಕಟ್ಟಿ ರಕ್ಕಸರೊಳ್ ಕಾದಿ ಮೊನೆಯೊಳ್ ಗೆಲ್ದು ಎನ್ನಂ ವನಕಟ್ಟುವ್ಪೊಡೆಂದೇಂ ಮರಲ್ಚಿದಯ್? ಹಾ! ಕಾಂತ! ನಿನ್ನಂ ಮಗುಟ್ದಿನ್ನೆಂದಿಂಗೆ ಕಾಂಬೆನೋ! ಎಂದಿಂಗೆ ನಿನ್ನ ಸವಿನುಡಿಯನಾಲಿಪೆನೋ! ಇನ್ನೆಂದಿಂಗೊಡಗೂಡುವೆನೊ! ಹಾ! ಹಾ! ಆ ಬಿನ್ನಣದ ಆ ಬೆಡಂಗಿನ

ಆ ಸೊಗಸಿನ ಆ ಗಾಡಿಯ ಆ ಸಿಂಗರದ ಆ ನಟನೆಯ ಆ ಅಂದದ ಆ ಹಾವದ
ಆ ಭಾವದ ಆ ನೋಟದ ಆ ಜೋಟದ ಆ ಕೂಟದ ಸುಗ್ಗಿಯನೆಂತು ಮಱೆ
ವೆನೋ! ಹಾ! ರಾಮಾ! ಎಂದು ಸೀತೆ ಬಾಯಟಿದತ್ತಳ್.

ಇಂತು ಬಣ್ಣಿಸಿ ಬಣ್ಣಿಸಿ ಮಱುಮಱುಗಿ ಬಿನ್ನನಿರ್ದು ಮತ್ತಂ ಲಕ್ಷ್ಮಣ
ನೊಳ್—"ಕುಱುಂಬನ ಕುತ್ತಕ್ಕೆ ಕಱಿಯ ಪಿತ್ತವೆ ಮರ್ದಾಯ್ತು." ನೀಮ
ನಿಬರ್ ಮೈದುನರಿರ್ದುಮೆನಗೀಪಾಡುಗೈದಿರೇ! ಅಣ್ಣಂಗೆ ನಯಂಬೇಟಿರೇ!
ತುಂಬಿದ ಬಸಿಱಿಯಲೇ, ಒಡಲನೆಂತಾಂ ಪಿಡಿದಿರ್ಪೆಂ? ಅತ್ತೆವಿರಿಂತಿದರ್ಕೊಪ್ಪಿ
ದರೆ? ನಚ್ಚಿನ ಬಂಟಂ ಹನುಮಂತಂ ಕೆಮ್ಮನಿರ್ದನೆ? ಸುಮಂತ್ರಾದ್ಯರ್ಗೆ
ಮನಂ ಬಂದುದೆ? ವೃದ್ಧಂ ಜಾಂಬವಂ ತಡೆಯದಾದನೆ? ಹಾ! ಹಾ!
ಪೆಣ್ಣೆನ್ನೊಂದು ಬಾೞ್ಕೆ ಬಾೞ್ಕೆಯೆ? ಎಂದು, ಒಟಿಯಂ ತನಗೆ ತಾಂ ತಿಳಿದು— ೧೦
ಆಃ! ನಿಮ್ಮನ್ನರನೇಕೆ ನಿಷ್ಕಾರಣಂ ದೂಱುವೆನೊ? ಏತರ್ಕೆ ಬಾಯಾಱೆ
ಮಱುಗುವೆನೋ? ಇಂತಿದೇಂ ಕಾನನರೋದನಮಾಗದೇ? ಪೂರ್ವಜನ್ಮದೊ
ಳಾವ ದಂಪತಿಗಳೊಳ್ ಭೇದಮಿಕ್ಕಿದೆನೋ! ಆವ ಹದಿಬದೆಯಂ ಪಟಿದೆನೋ!
ಬೊಮ್ಮನೆನ್ನ ಪಣೆಯೊಳ್ ಬರೆದುದಿಂತುಟೈಸೆ! ಇಂತು ರಾಘವನೆನ್ನನುಟಿ
ದೊಡಮಾನೆಂತುಮಾತನಡಿಯಂ ಬಿಡೆಂ. ಆತನೆ ಎನಗೆ ಗುರುವಾತನೆ ನಾಥಂ
ಆತನೆ ಜೀವನಾತನೆ ಬಾಂಧವಂ. ರಾಘವನ ಶಾಸನಂ ನಾಡಂ ಸಮಂತು
ಕಾಡಂ ಕೊಱತಿಲ್ಲದಾಳ್ಗುಮಲ್ತೆ. ಆನೊರ್ವಳ್ ಪೆಱಳೆ? ಎನ್ನ ಪೂರ್ವ
ಸಂಚಿತದಿನೀಬಟ್ಟೆಯಾದುದಲ್ಲ ಆತನೇಗೆಯ್ಗುಂ; ಕರುಣಾಸಾಗರನಲ್ತೆ! ನಂಬಿ
ದರಂ ಕಾವನೆಂಬ ಬಿರುದುಳ್ಳನಲ್ತೆ! ಆತನಡಿಯೊಲ್ಮೆಯೊಂದಿರಲಯ್! ಎಂದು
ಮತ್ತಂ ಕಣ್ಬನಿದುಂಬಿದಳ್. ೨೦

ಇಂತಾಡಿದ ಜಾನಕಿಯ ಮಾತಂ ಕೇಳ್ದು ಲಕ್ಷ್ಮಣನುಂ ಮಱುಗುತೆ
ಕಿಬ್ಮೊಗನಾಗಿ ನಿಂದಿರ್ಪುದುಂ; ಸೀತೆ ಮೇಣ್ ಸೌಮಿತ್ರಿಗೆ—ಕಂದಾ!
ಏತರ್ಕೆ ನಿಂದಿರ್ಪಯ್? ತಳ್ವಿದನೆಂದು ನಿನ್ನೊಳಗ್ರಜಂ ಕೋಪಿಸನೆ? ಅಣ್ಣ
ನಾಜ್ಞೆ ಸಂದುದಲಾ! ಪೋಗು ಪೋಗೈ, ಎನುತೆ ಪೇಳ್ದಳ್. ಆಗಳ್
ತನ್ನಂ ತಾಂ ಪಟಿದು ದೇವಿಗೆ—ಆವನಗಲ್ದೆಳಗಱುವಿನಂತಿರೆನ್ನೊಂದಿರ
ವಾಯ್ತೇ! ಅಣ್ಣನಾಣತಿಯೆಂಬೊಂದು ನೇಣ್ ಗೋಣಂ ಬಿಗಿದೀಟ್ಗುಂ.
ಆಗಳೆ ಬಲ್ಬಗೆಯೊಳ್ ಜೇಡಿದೆಂ. ದೇವರ ಚಿತ್ತಕ್ಕೆ ಬಾರದಾಯ್ತು! ಎನ್ನ
ಬಿನ್ನಪಂ ಪಾಪೆಯುಂ ತುಟಿಲ್ಗೈದಂತಿರೆ ಪೊಚ್ಚಱದಾಯ್ತು. ದೇವಿ!
ಎನ್ನೊಂದು ಮುನ್ನೊಡಲ ಅಟಿಗೆಯ್ಮೆಯ ಬೆಸುಗೆಯಿನೀಗಳೀಪಾತಕಕ್ಕೆ
ಕೈನೀಡುವೊಡಾದವಾಡೆಂ. ಅಂತಿರೆ ಗೋರಿಟ್ಟ ಸೈಪಂ ದುರ್ವಿಷಯಂಗಳ್ಗೆ ೩೦

ಸೂಱೆಗೊಟ್ಟು ನಿರಯದ ಬಾಗಿಲ್ಗಾಪಿಗೆಂದು ದಕ್ಷಿಣಾಭಿಮುಖನಾಗಿ ಪೋಪಸಂತೆವೋಲ್ ಪುಣ್ಯರೂಪಿಣಿಯಂ ಕಾಡಿಗೊತ್ತೆಯಿಟ್ಟು ಪಾಪ್ಪೋದ ನಾಡಿಂಗೆ ಮಗುಟಲ್ಕಿರ್ಪೆಂ. ಮಾತೇ! ಇಂತಿರ್ಪಿನಂ ನಿರ್ಘೃಣನಂ ಕುಲಘಾತುಕನಂ ದುಷ್ಟನನುದ್ಧರಿಸೌ, ಎಂದು ಸೀತೆಯ ಕಾಲೊಳ್ ಕೆಡೆದಂ.

ಇಂತಡಿಗೆಱಗಿದ ಮೈದುನನಂ ಸಂತಮಿಟ್ಟು ಏಲೇಲ್ ಕಂದ, ಕೈವಿಡಿದ ನಲ್ಲನೇ ಮುನಿವೆಡೆಯೊಳಾರೇನೆಂಗುಂ. ನಿನ್ನೊಳೇನಪರಾಧಂ? ಪೆಣ್ಣೆನಿಸಿ ಪುಟ್ಟಿದೆನ್ನಯೆ ದೋಷಂ. ಪೊತ್ತಿಟಿದುದಲ್ತೆ. ಪೋಗಯ್. ನಿನ್ನೊಳ್ ಪೇಱೇನೆಂಬೆನೊ? ನಿನ್ನಂ ನಿನ್ನಣ್ಣಂ ಕೇಳ್ದೊಡೆ, ನಿನ್ನಾಣತಿಗಬಲೆ ಮಱುಗಿದಳಿಲ್ಲ; ಮಾರ್ನುಡಿದಳಿಲ್ಲ; ಮುನಿಸಾಂತಳಿಲ್ಲ; ಬೆರ್ಚಿದಳಿಲ್ಲ; ಕೂಱುಕುದಿಗೊಂಡಳಿಲ್ಲ; ದೂಱಿದಳಿಲ್ಲ; ನೀನೆ ಗತಿಯೆಂದು ನಿನ್ನಡಿಯಂ ನೆನೆಯುತೆ ಕಡೆಪೊತ್ತಂ ಪಾರುತಿರ್ಪಳೆಂದು ಬಿನ್ನಯಿಸಯ್. ಅತ್ತೆವಿರ್ಗೆ—ನಿಮ್ಮ ಪರಕೆಗೊಂಡು ಬಾರದಿರ್ಪಿನಮೆನಗೀವಿಧಿ ಒಂದುಗೂಡಿದುದು. ಈಗಳ್ ನುಡಿಯಿಂದಮೆ ಮಣಿದು ಕ್ಷಮೆಯಂ ಬೇಡುವೆನೆಂದೆನ್ನ ನುಡಿಯೊಳೆ ಪೇೞಯ್. ಊರ್ಮಿಳಾದ್ಯರಂ—ನಿಮ್ಮೊಳ್ ನಿಧಾನಿಸದೆ ಬಂದೊಂದೂಣೆಯುಮಂ ಮನ್ನಿಸಿ ತನ್ನನೆಂದೆಂದುಂ ಮಱೆಯದಿರ್ಪುದೆಂದು ಕೇಳ್ದಳೆಂದು ಕೇಳಯ್. ಮೇಣಯ್ಯಂ ಬಟುವಟಿಯಿತ್ತ ನಲ್ಲೊಡವುಗಳೊಳ್ ಏಕ್ಕಸರಂ ಶ್ರುತಕೀರ್ತಿಗೆ ದುಕ್ಕಂಡದ ಪಿಂಡುಗಂಕಣಂ ಮಾಳವಿಗಾಜಕ್ಕಸರಂ ನಿನ್ನರಸಿಗೆ; ಮಿಕ್ಕಿರೆಯಿಂ ದಾಸಿಯರ್ಗೆ ಪಱುರ್ಗುಡ್ಪೈ. ಅಂತುಮಲ್ಲದೆಯುಂ, ಎನ್ನ ಬಲ್ಗಾಲದ ನಚ್ಚಿನ ನಲ್ಗೆಳದಿ ಚಂದ್ರಮತಿಗಾ ಎನ್ನ ಚಂದಿರಗಾವಿಸೀರೆಯಂ ಬಣ್ಣಗುಪ್ಪಸಮಂ ಹಬ್ಬದ ನಿಚ್ಚವಚ್ಚಮನೆಲ್ಲಮಂ ಮೆಚ್ಚನಿತ್ತು ಆಂ ಮುನ್ನಂ ಬಾಸೆಯಿತ್ತ ಪೂರ್ಣಪಾತ್ರಮೆಂದೆ ಮಱುಗದಂತಿರೆ ಪೇೞ್ದೈ. ನಿನಗೆನ್ನೊಳ್ ದಯೆಯಿರ್ಕುಮಪ್ಪೊಡೆ ಲೋಗರನುವಿಂಗೊಂದು ದಮ್ಮಣಿಯನೇರ್ಪಡಿಸ್ಸೈ. ಮೇಣ್ ಮುನಿಸತಿಯರ್ಗೆಂದು ತಂದು ರಥದೊಳುಟಿವಿಟ್ಟ ಬಾಯಿನಮನೊರ್ವ ಮುತ್ತೈದೆ ಪಾರ್ವತಿಗೆ ಕುಡಿಸ್ಸೈ. ಆ ಎನ್ನ ಪೂಜೆಯ ಕವಿಲೆದುಱುವಂ ಆ ಎನ್ನ ಮುದ್ದಿನೆಳಗಱುವಂ ಬಡವಾಗದಂತು ಪೇೞ್ದು ನಿನ್ನಬ್ಬೆಗೆ ಕೈವರ್ತಿಸ್ಸೈ. ಇನಿತೊಂದೆನ್ನೀಕಡೆಗಾಲದೆ ಪುಟ್ಟಿದ ಬಯಕೆಯಂ ಸಲಿಸ. ನಿನಗೆ ಮೇಲಕ್ಕೆ! ಮೇಣ್ ಪಯಣಂ ಸೊಗಮಕ್ಕೆ! ಎಮ್ಮೆಲ್ಲರ್ಗೆ ಶ್ರೀರಾಮನಡಿದಾವರೆಯೊಲ್ಮೆಯೊಂದು ವಜ್ರಪಂಜರಮಕ್ಕೆ! ಪೋಗೈ, ಎಂದು ಪರಸಿ ಲಕ್ಷ್ಮಣಂಗೆ ಪಯಣಕ್ಕಾಣತಿಗೊಟ್ಟಳ್.

ಆಗಳ್ ಸೌಮಿತ್ರಿ ಡೋಲಾಯಮಾನಮಾನಸನಾಗಿ ದೇವಿಯರಂ ಬಲವಂದು ಕೈಮುಗಿದು ದೆಸೆವಳರ್ಗೆ—ಈಕೆ ನಿಮಿಕುಲದೆ ಪುಟ್ಟಿದ ರಾಜಯೋಗಿಯಪ್ಪ ಜನಕನಣುಗುಗುವರಿ, ರಕ್ಕಸರ ಬಳಗಮುಂ ಸದೆದು ದೆಸೆವಲಿಗೊಟ್ಟ ನಿಮ್ಮಂ ಪೊರೆದ ಶ್ರೀರಘುರಾಮನ ಪಟ್ಟದ ರಾಣಿ. ಎಮ್ಮಣ್ಣನಾಣತಿಗಿವಳಂ ವನದೊಳಿರಿಸಿ ಪೋಪೆಂ. ಪೂರ್ಣಗರ್ಭಿಣಿ. ನೀಮೆಲ್ಲರ್ ಕಾವಲಿರ್ದು ಕಾಯಿಮೆಂದು ; ಭಾಸ್ಕರಂಗೆ—ಎಲೆ ಆದಿತ್ಯ ! ನಿನ್ನ ಕುಲವಧುವಿವಳ್ ನಿನ್ನ ಬಟಿವಳ್ಳಿ ಮಡಲ್ವೊಡಿವಳ್ ತಾಯ್ವೇರ್. ಅಂತದಱಿಂ ಇವಳೊಳ್ ದಿಟ್ಟಿಯಿರ್ಕೆ! ಎಂದು; ವನದೇವಿಗೆ—ಎಲೆ ಶಾಕಂಭರಿ! ಇದೆಕೊಳ್ ಭಾಗ್ಯಲಕ್ಷ್ಮಿ ನಿನ್ನ ಕೆಳೆತನಕ್ಕೆಳಸಿ ಬಂದಿರ್ಪಳದುಕಾರಣಂ ನೀನುಮಿವಳುಮೊಡಗೆಳದಿಯರಾಗಿ ಸಂತಮಿರಿಮೆಂದು ಕೇಳಿಸಿ ಅಗಲ್ದು ಪೋಪಸೆಂಬೊಂದು ೧೦ ಬೇಸಱಿಂ ಖಿನ್ನೆಯಾಗಿ ತನ್ನನೆ ನೋೞ್ಪ ದೇವಿಯಿರವಂ ನೆನೆನೆನೆದು ಗಾಳಿಗೆ ಮಾಱೊಡ್ಡಿ ಪೋಪ ಪತಾಕೆಯ ಕೌಸುಂಭಾಂಬರದಂತಿರೆ ಮನಂ ಪಿಂದುಱಿಯೆ ಸಡೆವಟ್ಟೆಯೆನೆ ಪಲವುಂ ಪಂಬಲೊಂದು ದಂದುಗಂ ಬೆಟ್ಟಿತಾಗೆ ಬೀೞ್ಕೊಂಡಂ.

ಮುದ್ದಣಂ—ಅತ್ತಲಯೋಧ್ಯಾನಗರಿಯೊಳ್ ಜನ್ನಗುದಿರೆಯಂ—

ಮನೋರಮೆ—ಸುಡು ಸುಡು ನಿನ್ನ ಜನ್ನಗುದಿರೆಯಂ! ಆ ಕತೆಗೀಗಳೆ ಪೊತ್ತೇ ? ಆಃ ! ಸೀತೆಯೇನಾದಳೆಂತಿರ್ದಳೆಂದು ಪೇೞಯ್ ?

ಮುದ್ದಣಂ—ಬಾಲೇ ಆಯ್ತಾಯ್ತು. ಅಂತು ಲಕ್ಷ್ಮಣಂ ಬೆನ್ನಿತ್ತು ಪೋಪುದುಮಾದೆಸೆಯನೆ ನೋಡಿ ನೋಡಿ ದುಃಖಂ ಮಱುಗೊಂಡೋರಗೆಯ ತನ್ನೊಂದು ಬವಣೆಗೆ ಮೆಳ್ಪಟ್ಟು ಚಿಂತಿಸಿ ತನ್ನೊಳ್ ತಾಂ—ಆಃ ! ನಿಮಿಕುಲಕಂ ಚಲಕಂ ಗಂಡನೆನೆ ಪೆಸರ್ವಡೆದು ಪಟುನುಡಿವೆಂಡಿರ ಬೈತಲೆವಣಿಗೆ ೨೦ ಜೆಲೆಗಟ್ಟಿ ಬ್ರಹ್ಮರ್ಷಿಗಳ್ಗಂ ತತ್ತ್ವಮುಂ ಬೋಧಿಪೊಂದು ಜಾಣ್ಮೆಯಿನೇೞ್ಗೆವೆತ್ತ ಜನಕರಾಜಂಗೆ ಮುದ್ದುಮಗಳೆನಿಸಿಯುಮಖಂಡಮಂಡಲೇಶ್ವರರ್ ಮಱೆಗೊಂಡು ಪುದುವಾೞ್ವಿನಂ ತನ್ನ ಜಸದೆಸಕದಿಂ ನೆಗೞ್ತೆವಡೆದ ಸಾರ್ವಭೌಮರಾಘವನಂ ಕೈವಿಡಿದು ಪಟ್ಟದರಸಿಯಾಗಿಯುಮಂತವುರದ ಸಱಿಮಿಂಡಿಯರನೋಲೈಸಿಯುಂ ಬಾೞ್ದನೆಗೀಗಳಿಂತೊಂದು ವಿಧಿ ಬಗೆದುದೇ! ಹಾ! ಆ ಎನ್ನರಸನ ಅಂಗಸಂಗಮಿನ್ನೀಕಾಲಕುಂಟೇ! ಅಯ್ಯೋ! ಆ ಐಸಿರಿಯಾಪಟ್ಟೆಮಂಚದಾ ಅಂಚೆದುಪ್ಪುೞ ನಲ್ವಾಸಿನಾಪಟ್ಟೆಕೌಳುಡೆಯಾಪುಷ್ಪದಾಗಂಧದಾಸಿರಿಯ ಸುಖಾನುಭವಮುನಿನ್ನೆಂತು ಮಱೆತಿರ್ಪೆನೋ ? ಆಃ ! ಆಃ !! ಇಂದ್ರಚಾಪದ ಪಾಂಗಿನಿಂ ಪಲವಗೆವಣ್ಣದಿಂ ರಂಜಿಪ ಆ ಎನ್ನ ಪೂದೋಂಟದ ಸೊಬಗೇ! ಆ ಎನ್ನ ನೀರಾಟದ ತಿಳಿಗೊಳನೊಂದು ಸೊಗಸೇ! ೩೦

ಹಾ! ಎನ್ನ ಮುದ್ದುಂಚೆ! ಅಗಲುಮೆನ್ನ ಮಂಜೀರದ ಮಂಜುನಾದಂ ಕೇಳಿಸೆ ಪಿಂದೆಸೆಯೊಳೆ ಕೇಂಕರಿಸುತೆ ಬೞಿವರ್ಪ ನೀನಿಂದಾರಂ ಬೞಿಸಾರ್ವಯ್? ಹಾ! ಎನ್ನ ಪಂಜರದ ಸಾರಿಗೆಯೇ! ಪಾಲನೆಱೆವಳಾವಳೋ? ಹಾ! ಹಾ! ಕಾಲದೊಂದು ಗತಿಯೇ! ಓ! ಏತಱ ಮಾತೊ? ನಿಮಗೇಂ ಸೊಗಗೇಡೊ? ಒರ್ವಳ್ ಪೋಗೆ ಪೆಱರೊರ್ವಳಿರ್ಕುಂ. ಆನೊರ್ವಳೆ ಬಡವೆ ಬಱುವೆಯಾದೆಂ. ಉಃ! ಪೋಕೆ ಪೞುವೞಲಿಸೇಂ? ಇವು ಭೋಗಂಗಳ್ ನಶ್ವರಂಗಳಲ್ತೆ! ಆನೆ ರಾಯಗುವರಿಯಾಗಿ ಪುಟ್ಟೆನೆ? ಕಾಡಂ ಪೊಕ್ಕು ರಕ್ಕಸರ ಬಂದಿಗೊಳಗಾಗೆನೆ? ದೇವಿಯಾಗೆನೆ? ಈಗಣೀ ಬವಣೆಗೆ ಬಾರೆನೆ? ಸಾಜಂ ಸುಖದುಃಖಂಗಳ್ ಪಗಲಿರುಳಂತೆವೋಲ್ ಲೋಕದೊಳ್ ಪರಿವರ್ತಿಸಿರ್ಕುಂ. ಇವಱೊಳೆ ನಗಲ್ಕೆಱ ಪೋಯ್ತು. ಶ್ರೀರಾಮನೊಲ್ಮೆಯೊಂದೆ ಶಾಶ್ವತಂ. ಆತನ ನಾಮಸ್ಮರಣೆಯೆ ಎನಗೆ ಬಟ್ಟೆ. ಹೇ ಕಲ್ಯಾಣರೂಪ! ನೀನೆನ್ನಂ ಕೈವಿಡದಿರಯ್. ಹೇ ಕರುಣಾಕರ! ದೆಸೆಗೆಟ್ಟೆನ್ನಂ ಮಱೆಯದಿರ್. ಹೇ ಜಗದೊಡೆಯ! ಪೆಣ್ಣೆನ್ನೊಳ್ ಕರುಣೆಯಿರಲಯ್. ರಾಮಾ! ರಾಮಾ!! ರಾಮಾ!!! ಎಂದು, ಧ್ಯಾನದೊಳಿರ್ದಳ್.

ಆಪೊತ್ತಿಂಗೆ ವೇದಪುರುಷನೇ ಮುದುಪಿನೊಂದು ಪರಿಜಿಂ ಮೆಯ್ಗೊಂಡು ನಡೆತಂದನೋ ಎನೆ—ಮೂಡಿವರ್ಪ ನೇಸಱ ಪಸುಳೆವಿಸಿಲ ಬೆಳ್ಗಿಂಪಿನ ಪೊಸವೊಗರಿಂ ಕಣ್ಗೊಳ್ವ ಪೂರ್ವಾದ್ರಿಕೂಟಮೆಂಬಂತಿರೆ ಮುಂದಲೆಯೊಳರೆಗೆಂಪಿನ ಬೆಳ್ವೆಳಗಿಡಿದ ಜಡೆಮುಡಿ ವಿರಾಜಿಸೆ, ಮಾಗೆಯ ಬೆಳ್ಮುಗಿಲಾಗಸದಂತಿರೆ ಭಸಿತೋದ್ಧೂಳಿತಲಸಿತಲಲಾಟಂ ಕಣ್ಗೊಳಿಸೆ, ಇನ್ನೀತನಸಿದಿರ್ಚೆ ಕೈಮಾಡೆನೆಂದು ಆಣೆಯಿಟ್ಟು ಕಾವನರೆಮುರಿದ ಕರ್ವುವಿಲ್ಲೆಂಬಂತಿರೆ ಶಿಥಿಲಮಾಗಿ ಜೋಲ್ವ ಪುರ್ವಸೆಯೆ, ಜ್ಞಾನದೃಷ್ಟಿಯ ನೆರಮೊ ಪೊಱನೋಟಮೇವುದೆಂದು ಮುಱಿದು ನೋಳ್ಪನೆನೆ ತುಱುಗೆಮೆಯರೆದೆಱೆದ ಕಣ್ಣೊಚ್ಚತಮಾಗೆ, ತನ್ನಚ್ಚಿಯ ಮಱಿನೋಟದ ವಿಶ್ರಾಂತಿಯೆಡೆಯಿದೆನೆ ನೀಳ್ದ ನಾಸಾಪುಟಂ ರಂಜಿಸೆ, ಭಾರತಿಯ ಪದ್ಮಪೀಠಂಬೋಲ್ ಮುಖಕಮಲಮೊಪ್ಪಿರೆ, ಗೊರವನ ಜೆಳ್ಗೊರಲೊಳಮರ್ದ ಹಾಲಾಹಲದ ಕರ್ವೆಳಗುದುಱುಗಲ ಮಾಪ್ಕೆಯಿಂ ಶಂಖಧವಳಕಂಠದೊಳ್ ಪತ್ತುವಿಡಿದೇಕಮುಖೀರುದ್ರಾಕ್ಷಮೊಂದು ತೆಱಂಬೊಳೆಸೆ, ಜೋಗಗೆಳೆಯರೆಣ್ಬರೇಱುವರ್ಪನ್ನ ಮಱುವಗೆಗಳೞಿವೋದ ನಿಚ್ಚಣಿಗೆಯೆಂಬಂತಿರ್ಬದಿಯೊಳಮೆಲ್ಗಳ ಸಾಲ್ಗಳ್ ತೋಱೆ, ಸಡಿಲ್ದ ಮಾಯೆದಾವಿನ ಪಲವುಂ ಪುರಿಗಳೆಂಬಂತೆವೋಲ್ ಸೆರೆಗಳೆತ್ತಂ ಮಡಲ್ತಿರೆ, ನಡುವಿನೊಳುಟ್ಟ ವಲ್ಕಲಂ ತೊವಲುಡೆಯನ ಕೃತ್ತಿವಾಸಂಬೋಲ್ ಮನೋಜ್ಞಮಾಗಿರೆ, ವಾಲ್ಮೀಕಿ ತಾನಾಬಟ್ಟೆಯೊಳೆ ಬರುತುಮಿರ್ದಂ.

ಇಂತು ಬರುವರುತೆ ಕಟ್ಟಿದಿರೊಳ್ ಅರೆವೆಱೆಗಲ್ಲಮಂ ಕರಪಲ್ಲವದೊಳೂಱಿ ಮುಂಬಗಲ ಪೆಱೆಯಂತೆ ಕಳೆಗೆಟ್ಟುಂ, ತನ್ನೊಂದು ಕಣ್ಬೊಗರ್ ಕಾಳಿಂದಿಯ ಕರ್ಮಡುವಿನೊಳೋಲಾಡುವ ಬಾಳೆಮೀನ ಪಾಗಿನಿಂ ಪೊಳೆಯುತಿರೆ ಎತ್ತಂ ನೋಲ್ಪ ಪೆಣ್ಣೊರ್ವಳಿರೆ ಕಂಡಚ್ಚರಿವಟ್ಟಾರವಳೆಂದಱಿವೊಡೆಂದು ಮುಟ್ಟಯಿಸಿ ಬಂದು—ಆರೌ? ವನದೇವಿಯಂತಿರೀವನದೊಳೊರ್ವಳೆ ಇರ್ಪುದೇಂ? ಎಂದು ಬೆಸಗೊಂಡಂ. ಈನುಡಿಗೆ ಸೀತೆ ಮನದೊಂದು ಭಯದಿಂ ಗಕ್ಕನೆೞ್ದು ಪಿಂಜರಿದು ಮುನ್ನಿನೊಂದು ಬನ್ನಮಂ ನೆನೆದು ರಕ್ಕಸರ ಮಾಯೆಯೆಂದೇ ಬಗೆದು—ಎನ್ನಾಣೆ! ರಾಯನಾಣೆ! ಪತ್ತೆಸಾರದಿರ್ ಸಾರದಿರ್, ಎಂದು ಕಿಸುಗಣ್ಚಿ ಮರಸಂ ಮಱೆವೋದಳ್.

ಇಂತಪ್ಪುದುಮಾಪುತ್ತಿನ ಪುತ್ರಂ ಆವಳೊ ಬಾಲೆ ತಳ್ಳಂಕಂಗೊಂಡಳೆಂದು ೧೦ ಮಱುವಾತಿನೊಳ್—ಬಾಲೆ! ಆಂ ಅಸ್ಯರಲ್ತು ; ತವಸಿಗಳ್. ಕಾಡೆ ನಾಡಾಗೆ ಈಯೆಡೆಯ ಆಶ್ರಮದೊಳೆ ಇರ್ಪೆವು. ಅಂಜದಿರೌ! ನೀನಾರ್ಗೆ? ಪೆಸರೇನೆಂದು ಪೇೞೌ, ಎಂದು ಕೇಳ್ದಂ.

ಇದರ್ಕೆ ಸೀತೆ—ರಾವಣಂಬೋಲ್ ಪುಸಿದವಸಿಗಳ್ ಪಲಂಬರೊಳರ್ ; ಸವಿನುಡಿಯಿಂ ಬೋಸರಿಸಿ ಮಾಯೆಗೈವರ್. ನಿಮ್ಮಂದಿಗರೊಳೇಂ ಮಾತೊ? ಶ್ರೀರಾಮನಾಣೆ! ಸನಿಯಂ ಬಾರದಿರ್ ಎಂದು, ಮಾರ್ನುಡಿವುದುಂ; ಮುನಿಪಂ ರಾಮನಾಮಮಂ ಕೇಳ್ದು ಸಂದೆಗದಿಂ ತಾನುಂ—ದೇವೀ, ರಾಮನಾಣೆ! ತನ್ನಾಣೆ! ಆಂ ಕವಡುದವಸಿಯಲ್ತು, ವಾಲ್ಮೀಕಿ ಕಣಾ! ಬೞಿವೋಕಂ ; ನಿರ್ಜನಪ್ರದೇಶದೊಳಿರ್ಪೀ ಬಾಲೆ ನಿನ್ನನಱಿವೊಡೆಂದೆ ನುಡಿಯಿಸಿದೆಂ, ಪೆಱತೆಣಿಸದಿರೆಂದು ಪ್ರಾರ್ಥಿಸಿದಂ. ೨೦

ಆಗಳ್ ಭೂಸುತೆಗೆ ಮನದ ಭಯದ ಕವಲ್ ಪತ್ತುವಿಡೆ, ಸಂದೆಯಮೆನಸುಂ ಪೆಡಂಮೆಟ್ಟೆ, ದಿಟದ ನಂಬುಗೆಯಿಂಬುಗೊಳೆ—ಅಂತಪ್ಪೊಡೆ, ನೀಂ ಮಾನ್ಯಂ. ನಿನಗೆಱಗುವೆಂ. ತಂದೆ! ಎನ್ನಿರವನೇನೆಂಬೆನೊ? ಜನಕರಾಜಂಗೆ ಮಗಳಾಗಿ ದಶರಥಂಗೆ ಸೊಸೆಯಾಗಿ ಶ್ರೀರಾಮಂಗೆ ಪಟ್ಟದರಸಿಯಾಗಿ ಬಾೞ್ದೆನ್ನ ಒದು*ರ್ಂಕು ಈಗಳ್ ವನದೊಳಾಯ್ತ್ತೈ! ರಕ್ಕಸನೊಳ್ ಬಱದಿ ವಾೞ್ದೆನ್ನ ಸೊಪ್ಪುಗೊಂಡನೆಂಬೊಂದು ಲೋಕಾಪವಾದದ ದೂಸಱಿಂ ಶ್ರೀರಘುಜನೆನ್ನ ನಡವಿಯೊಳ್ ಬಿಸುಟ್ಪುದೆಂದು ಲಕ್ಷ್ಮಣಂಗೆ ಬೆಸನಿತ್ತು ಕಳಿಪಿದನೈ! ಅಂತು ಲಕ್ಷ್ಮಣನೀಗಳೆ ಉೞಿದು ಪೋಪಿನಂ ಕಾಡಿಂಗೆ ಕೋಳುವೋದೆನೆಂಬೊಂದು ಭೀತಿಯಿಂ ಬೆದಱಿ ಬೆಬ್ಬಳವೋಗಿ ಬನಗತ್ತಲೆಗೆ ಕಱಿಂಗಿದೀಮರಂಗಳಿಱುಂಬಿನೊಳ್ ದೆಸೆಗೆಟ್ಟು ವನಪಿಶಾಚದಂತಿರೆ ಇದೆನೊಳ್ ೩೦

ಮಱುಗುತಿರ್ದಪೆಂ, ಎನ್ನೀಅೞಿವೆಯ್ಯಂ ಬಾವಿದಾವುಗಳ್ಗೊಪ್ಪಿಸಿ ಎನ್ನನಿ
ಯನಂ ಮಗುೞ್ದುಂ ಕಾಣಲಕ್ಕುಮೆಂದೊಡೇವೆನ್ನೈ! ಅಱುದಿಂಗಳ ಗರ್ಭಿಣಿ
ಯಪ್ಪಿನಂ ಆತ್ಮಹತ್ಯಭ್ರೂಣಹತ್ಯದೋಷಂಗಳೊರ್ಮೊದಲೊಳ್ ಬಂದೊದ
ವುಗುಮೆಂದೆ ಮಾಣ್ದೆಂ. ಹಾ! ಎಂದು, ಆತನ ಪಾದಕಾನತೆಯಾದಳ್.

ಇಂತೆಱಗಿದಳಂ ಕಂಡು ಮುನಿಪಂ—ಅಂತಾಗದೌ! ನಿಕ್ಕುವಂ ನೀಂ
ಮಕ್ಕಳಂ ಪಡೆವುದುಂಟು. ಮಱುಗದಿರ್. ಎಡೆಯೊಳ್ ಎಮ್ಮಾಶ್ರಮಂ.
ಜೋಗವಟ್ಟಿಗೆಯಾಣೆ! ರಾಘವನಾಣೆ! ಮಗಳೆಂದೆ ನಿನ್ನಂ ಸಲಹುವೆಂ.
ಏೞೌ, ಎಂದು ಸಂತಯಿಸಿ ಭಾಗ್ಯಲಕ್ಷ್ಮಿಯಂ ಕೊಂಡುಯ್ವ ದೀನನಂತಿರೆ
ಸಂತಸದಿಂ ತನ್ನಾಶ್ರಮದತ್ತಣ್ಗೆ ಕರೆದುಯ್ದಂ.

೧೦ ಇಂತು ಸೀತೆ ಕಿಱಿದಾನುಂ ದೂರಂಬೋಗೆ ತನ್ನ ಕೂಡುವಳಗದ ನಿಚ್ಚ
ದಂದುಗಮೊಂದು ಮಿಡುಗಿಂ ನಂಜುಂಡ ಬಾನ್ನವಿರಂ, ಗಜಮುಖನ
ಬಿರಿವೊಡೆಯ ಬಾವಂ, ಅಱುಮೊಗನ ತೇರ ಸೋಗೆಯುಂ, ಪಾರ್ವತಿಯ
ಸಿಂಗಮುಂ, ತನ್ನ ಬಸವನಂ ಇನ್ನಾನುಂ ಪಗೆಯಂ ಮಱೆತು ಸಂತಂ
ಪುದುವಾೞ್ವುದೆಂದು ಬುದ್ಧಿವೇೞಲೊಡಮದುವೆ ವಿರಾಗಮಂ ಪುಟ್ಟಿಸೆ
ಪ್ರಪಂಚದೊಳ್ ತಮಗೇತಱ ಸುಖಮೆಂದು ತಾವೊಂದುಗೂಡಿ ತಪಶ್ಚರ್ಯೆ
ಕ್ಕೆಂದು ವನಂಬೊಕ್ಕು ನಿರ್ವೈರದಿನಿರ್ಪವೆನೆ; ಒಂದೆಡೆಯೊಳ್ ಬೈಗಿನ
ಕಿಱುಮುಗಿಲೊಡ್ಡಂ ಕಂಡುಲ್ಲಸದಿಂ ಪೊಂಗಿ ಇಡಿಕಿಱಿದ ಪೀಲಿಗಳಂ
ಬಿದಿರ್ಚಿಯುಮಣಿಗಟ್ಟಿ ಕೇಗಿ ತನ್ನೊಂದಾಡಂಬರದಿಂ ಮಯೂರಂ
ತಾಂಡವಕ್ಕಾರಂಭಿಸಲೊಡಂ ತಾನುಂ ವಾಲ್ಮೀಕಿಯೆನೆ ಪುತ್ತಿನೊಂದು
೨೦ ವ್ಯಾಳಂ ಪೊಱಮಟ್ಟು ತೀಡುವ ತೆಂಬೆಲರ್ಗೆ ಮೆಯ್ಯೊಡ್ಡಿ ಪರಿದು ರಂಗಂ
ಬೊಕ್ಕು ನೆರೆಯೊಳ್ ಮಂಡಲಾಸನಂಬಲಿದು ಕುಳ್ಳಿರ್ದು ನಾಟ್ಯಂ ಮನಂ
ಗೊಂಡುದೆನೆ ಪೆಡೆಯೆತ್ತಿ ತಲೆಯೊಲೆದು ಸಭ್ಯಂಬೋಲ್ ನಿಟ್ಟಿಸುತಿರೆಯುಂ,
ಕೆಲವಾನುಂ ಕಾಲದಿಂ ಸಮಾಧಿಸ್ಥನಿರ್ಪುದುಂ ಪೊಱಗೆ ಬಳೆದ ಬಂಬಲ್ವಡೆ
ಯೆನೆ, ಮತ್ತಮೊಂದೆಡೆಯೊಳ್ ಗೋಣ್ಣವಿರ್ ಮುಮ್ಮಡಂಬರಂ ಮುಸುಂಕಿರೆ
ಪಟ್ಟೊಂದು ಮುತ್ತಸಿಂಗಕ್ಕೆ ತನ್ನ ಕೇಸರಮೆ ಜಾಲವಾಗಿ ಪರಿಣಮಿಸೆ
ಕಾಲ್ ಸಿರ್ಕಿನೊಳಾಗೆ ಮಗುೞ್ದುಂ ಮಗುೞ್ದು ಮೇೞಲಾಟಿಸಿಯುಮಾಱದಿರೆ
ಪೊರಳ್ದೊರಲ್ವುದಂ ಬೞಿಯೊಳ್ ಕಡವೆ ಕೇಳ್ದು ನಟ್ಟನಾಎಡೆಗೆ ಬಂದು
ತನ್ನೆರಡುಂ ಶೃಂಗದಿಂ ಸಿರ್ಕುಂಗೊಂದಲಂ ಬಿಡಿಸುತಿರೆಯುಂ, ಇಂತಿದು
ಪುಣ್ಯಾಶ್ರಮದ ಮೈಮೆಯೆಂದು ಬಗೆದಂದು ಸಂತಸಂಬಾಳ್ದಳ್. ಅಂತು
೩೦ ಮುಂತೆ ಮುಂತೆ ಬರ್ಪುದುಂ—

ಎಮ್ಮಂದಿಗರೆಂತಂತು ಪಸುಗೆಗೊಂಡುಂ ಪಱಿಯನೆ ಚರುಚಾರುಗಂಧಮುಂ
ಶರ್ವರ್ನೆಂಬೊಂದು ಪುರುಳಿಂ ಬಸ್ನಗೊಂಡದ ಬೇಳುರಿ ಚಟಚಟಿಸಿ ಕಿಱಿಕಿಱಿ
ವೋಪುದುಂ, ಕಿಸಿಸಿಂ ಕಿಚ್ಚಂ ತಳ್ಪೊಯ್ದುಂ ಧೂಮಧ್ವಜಮುಂ ಮುಱಿದು
ಮಿಾಬಗೆಯುಂ ಮುನಿಗೆ ದೂಱಲ್ಕೆಂದಿದಿರ್ವಂದನೆನೆ ಚರುಪುರೋಡಾಶಂಗಳ
ನಱುಗಂಪುವೊರೆದ ಪಾವನಪವನಂ ತೀಡೆ, ಆಗಳೆ ಹವಿರ್ಭಾಗಮುಂ ಕೈಕೊಳ
ಲ್ಕೆಂದು ತಪೋವನಕಿೞಿದು ಬಂದಿಂದಿರನ ಮುಗಿಲ್ದೇರೆನೆ ಹೋಮಧೂಮಂ
ನಾಲಾಳೇಱುಸೊಳ್ ಚೆದಱಿ ತಳ್ತಿರೆ, ಮುಂದೆಸೆಯೊಳ್ ಗೋರಂಟೆಯು
ಮರುಗದ ದವನದ ಪಸುರ್ದೆನೆಯು ಗೊಜ್ಜಿಗೆಯು ಜಾಜಿಯು ಮುಡಿವಾಳದ
ಮಿಡಿಯು ಎಡೆಯೆಡೆಯು ಸಂಪಗೆಯು ಸುರಯಿಯು ಬಕುಳದ ಸಿರಸದಸುಗೆಯು
ಮರಂಗಳನಪ್ಪುಕ್ಕೈದ ಕಾಡುಮಲ್ಲಿಗೆಯು ಮೊಲ್ಲೆಯು ನೀಲಗಂಧಿಯು ಬಳ್ಳಿಗ ೧೦
ಳೆಡೆಯುಸಿಡಿಕಿಱಿದ ಬಂಡುಗೆಯು ಪಾದರಿಯು ಪದ್ಮಳಿಯು ಗಿಡುಗಳ ಪಂತಿಗಳ್
ತೋಂಟದೊಳ್ ಪೂವೆಂದುಂ ಮುಡಿಯುದೆಸೆವ, ಪಣ್ ಎಂದುಂ ಬೀಯದ
ಫಲವೃಕ್ಷಂಗಳೆತ್ತಂ ತುಱುಗಿ ಬೆಳೆದಿರೆ ಭ್ರಮದ್ಭ್ರಮರನಿನದಮೆಂದುಂ ಕಿವಿಗ
ನಿದಂ ಕಱಿಯೆ, ಋಷ್ಯಾಶ್ರಮೋಪವನಂ ಸೀಕ್ಷೆಗೆ ಕಣ್ಗೆವಂದತ್ತು.

ಅಂತುಮಲ್ಲದೆಯುಂ ಮಟ್ತಿಯು ಮುಟ್ತುಗದರಳಿಯು ಸವ್ರದೆಗಳನಳತಿ
ಯೊಳ್ ಕೊಯ್ದು ಪೆರ್ಗನಾರಿಂ ತಲೆವೊಱೆಗಟ್ಟಿ ತರ್ಪ ವಟುಗಳಿಂದೆಯುಂ, ಬೆಲ್ಲ
ಪತ್ರದ ಬಡಸಿಯು ಪಚ್ಚೆಲೆಯುಸೊಟ್ಟೆ ಗಱುಕೆಯು ತೊಳಚಿಯು ದಾಂಗುಡಿಯುಂ
ಚಿವುಂಟಿ ಬಾಡೆನಟ್ಟಿಯೊಳ್ ಮೂಡಿ ತರ್ಪ ಬಾಲವಟುಗಳಿಂದೆಯುಂ,
ಕುಂದದ ಪಾರಿಜಾತದ ಮಂದಾರದ ಪಾಟಳಿಯ ಬಿರಿಮುಗುಳಂ ತಿರಿತರ್ಪ
ಮುನಿಕನ್ನೆಯರಿಂದೆಯುಂ ಪುಣ್ಯಾಶ್ರಮಂ ಮನೋಹರಮಾಯ್ತು. ೧೫

ಮತ್ತಮಲ್ಲಿ ಉಟಜಾಂಗಣದೊಳೊಂದೆಡೆಯೊಳ್ ಸಂಜೆಯು ಶುದ್ಧಿಗೆಂದು
ಪೊಡೆಯೊತ್ತೆ ಬಾಲಂ ನಿಮಿರೆ ಲಂಡಮುಸುರ್ಜುವಾಕಳಿಂ, ಆಕಳ ಗೋಮ
ಯಮುಂ ಕಲಂಕಲ್ಕೆಂದು ತಮ್ಮ ಕರಪುಷ್ಕರದಿಂ ನೀರಂ ತಂದು ತುಱುಂಕುವ
ಮಱಿಯಾನೆಗಳಿಂ, ಮಱಿಯಾನೆಗಳ್ ಕಲಂಕಿದ ದಡೆಯುಂ ತುದಿವಾಲದಿಂ
ಬಱಿವ ಚಮರಿಮಿಗಂಗಳಿಂ, ಚಮರೀಮೃಗಂಗಳ ಸಾರಣೆಯೊತ್ತುಗೊಂಡು ನೆಲನ
ತಣ್ಪುಸಾಱೆ ತಮ್ಮ ಮೊಗದ ನರೆ ನಮಿರಿಸುರ್ದುತೆ ಪೋಪ ಗಂಡುಗರಡಿಗಳಿಂ,
ಕರಡಿಗಳ್ ಸಚ್ಚುಗೈದ ನೆಲನೊಳ್ ರಂಗವಲ್ಲಿಯುಂ ಬರೆವ ಕಗೊರ್ಪೇಡಗಂ
ಗಳಿಂ, ಮತ್ತಮದೊಂದೆಡೆಯೊಳ್ ಎಕ್ಕಲನಗುಬ್ದು ಗೋರಿಟ್ಟು ಗೆಬಸಿಂ,
ಸಿಂಗನಾಯ್ದು ಪರಿಪಿದುದಿರ್ವಣ್ಣಿಂ, ಮೇಣೊಂದೆಡೆಯೊಳ್ ಶೌಚದ ಸ್ನಾನದ
ವೇದಪಾರಾಯಣದ ಸಂಧ್ಯೋಪಾಸ್ತಿಯು ಜಪದ ತಪದ ಸಂಕೀರ್ತನೆಯು ೨೦

ಉಪದೇಶದ ಯೋಗಾಭ್ಯಾಸದ ಪುರಾಣಶ್ರವಣದ ಋಷಿವರ್ಗದಿಂ ಸೊಗಯಿ
ಸಿದುದು.

ಇಂತೊಪ್ಪುವಾಶ್ರಮಮಂ ಕಂಡು ಸಂತಸಮಾಗೆ ವಾಲ್ಮೀಕಿವೆರಸು ಸೀತೆ ಸಂಜೆಯೊಳ್ ಸಂಧ್ಯಾದೇವಿಯಂತಿರೆ ಮುನಿ ತೋಱಿದೆಲೆವನೆಯಂ ಆಶ್ರಮವಾಸಿಗಳ್ ಪೊಗಱೆ ದೇವರ್ಕಳ್ ಕೊಂಡಾಡೆ ಬಂದು ಪ್ರವೇಶಿಸಿ ಮುನಿಯ ಪಾಲನೆಯೊಳ್ ಸೊಗದಿನಿರ್ದಳ್.

ಎಂಬಲ್ಲಿಗೆ ಶ್ರೀರಾಮಾಶ್ವಮೇಧದೊಳ್
ವಾಲ್ಮೀಕಿದರ್ಶನಮೆಂಬ ಷಷ್ಠಾಶ್ವಾಸಂ ಸಂಪೂರ್ಣಂ.

---

## ಸಪ್ತಮಾಶ್ವಾಸಂ

# ವಿಜಯಪ್ರಯಾಣಂ

ಮುದ್ದ—ಎನ್ನ ಕೊಂಡಾಟದ ಬಾಳ್ವಣಿಮೆ! ಇಂತು ಭೂಜಾತೆ ಪ್ರಾಚೇತಸನೊಲ್ಮೆಗಾಪಿಂ ಪುಣ್ಯಾಶ್ರಮದೊಳಿರ್ಪನಮಿತ್ತಲ್ ಸಾಕೇತ ನಗರದೊಳ್ ಸೀತಾರಾಮಂ ತನ್ನ ಬಿರ್ದಿನ . . .

ಮನೋ—ಸಲ್ಲ! ಏಮಾತೊ? ಸೀತೆಯನಂತುಟಿದುಮೇತಱ ಸೀತಾರಾಮಂ. ಪೋ! ಮಾಣ್! ಅವಂಗಿನ್ನೆತ್ತಣ ಸೀತೆ? ಅಪ್ಪೊಡಿನ್ನಾಕಲ್ಲೆದೆ*ಯಂ ರಾಮನೊ ಭೀಮನೊ? ಏಕೆ?

ಮುದ್ದ—ಎನ್ನ ಕೈಗಳಸಮೆ! ಇಂತುಮೆಂಬರೆ! ಶ್ರೀರಾಮಂ ಕಲ್ಲೆದೆ*ಯನೆ! ಆಃ! ಒಟಿಕ್ಕಮಾತನ ಪ್ರಳಾಪಮಂ ನೀಂ ಕೇಳ್ದುದಿಲ್ಲಂ.

ಮನೋ—ಏಂ ತಾನೆ ತಲೆವೊಯ್ದುಂ ಮಱುಗಿದನೆ?

೨೦ ಮುದ್ದ—ರಾಮಂ ತಲೆವೊಯ್ದನೇಂ? ತಾಂ ಯಶೋಧನನಪ್ಪಿನಂ ಲೋಕಾಪವಾದಭೀತಿಗಡವಿಗಟ್ಟಿದನಲ್ಲದರಸಿಯೊಳೇಂ ಪಗೆಯೆ?

ಮನೋ—ಪಗೆಯೇಂ ನಗೆಯೇಂ? ಬಡವೆಯೊರ್ವಳ್ ಕಾಡಿಂಗಾದ ಕೈಸೆ?

ಮುದ್ದ—ಇಂತಿದನೆ ನೆನೆನೆನೆದಱುಂಬಂ ಪಲುಂಬಿದಂ.

ಮನೋ—ಏಂ ತಸಗೆ ಪೆಱರ್ ಪೆಂಡಿರಿಲ್ಲೆಂದೆಯೆ?

ಮುದ್ದಣಂ—ಪರಿಹಾಸಂ ಸಾಲ್ಗುಂ ಕೇಳ್. ಏಗಳ್ ಲಕ್ಷ್ಮಣಂ ಸೀತೆಯುಂ ಕೊಂಡುಯ್ದನೆಂಬ ವಾರ್ತೆ ಕೇಳಿಸಿದುದಾಗಳೆ ಪಶ್ಚಾತ್ತಾಪದಿಂ ರಾಘವನ ಮನವೊಳಗೊಳಗೆ ಬೆಂದು ಬೇಗುದಿಯೊಳಿರ್ದತ್ತು; ಮೇಣೆಂದು ವನದೊಳಿೞಿಪಿ ಬಂದೆನೆಂದನಂದೆ ಒರ್ಮೆಯೆ ಉರ್ಕಿದುದು. ಮಾತೇಂ?

ರಾಘವನಿಂತೊಂದು ದುಗುಡದಿಂ ತನ್ನೊಳೆ ತಾಂ—ಆಃ! ಬಿದಿಯೇ! ಎನ್ನೊಳವಿಂತು ಮಾಡುವರೇ? ಎನ್ನ ಬಾೞ್ಕೆಯಿಂತು ನಂದಿದುದಲೇ! ಏಂ ಮಾಡೆಯೊ! ಸೊಗಂಬಾೞ್ವರೊಳ್ ಏೞ್ತವಂ ಸಂಚುಗೆಯ್ದುಂ, ಪುದು ವಾೞ್ವರೊಳ್ ಪಗೆಯುಂ ದೂದಟ್ಟಿಯುಂ, ತಾಂ ಪಿಡಿದಿರ್ಪರೊಳ್ ಕಾವಸಂ ಕಾವಲ್ಮಾಡಿಯುಂ ನೋಟಮಾಟಂಗಳ್ಗೆ ತೋಱಿದನಲ್ತೆ! ಓ! ನಿನ್ನನೇಂ ಬಯ್ವೆಂ! ನೀನುಮೆನ್ನಂತಿರೆ ನಾಣ್ನುಡಿಯೊಳ್ ನೊಂದನ್ನೈಸೆ! ಹಾ! ೧೦ ಲೋಕಾಪವಾದದೊಂದೇೞ್ತರದ ಬಲ್ಮೆಯೇ! ಎಂತಪ್ಪರುಮಂ ಬಿಟ್ಟಿರಯೇ! ನಿನ್ನೀದೂಸಱುಂ ಮದುವೆನಿಂದ ಮಡದಿಯುಂ ಬಿಟ್ಟಿರ್ಪುದಾಯ್ತು. ನಿಷ್ಕಳಂಕೆ ಯೆಂದಱಿಯೆನೆ? ಪಾವನೆಯೆಂದಱಿಯೆನೆ? ಹಾ! ಹಾ! ಸೀತೆ! ಎನ್ನಂ ಕೈವಿಡಿವಿನಂ ನಿನಗೊದವಿದ ಭಾಗ್ಯಮೇ! ಎನ್ನನೆ ವರಿಪೆನೆಂದಾವ ದೈವಮಂ ಮುಂ ನೋಂತೆಯೊ! ಅಕ್ಕಟಾ! ಕೈವಿಡಿದಿನ್ನೆ ಬರವೊಂದು ದಿನಮಾದೊಡಂ ಸೊಗಮಂ ಕಂಡುದುಂಟೇ! ಎಳವೆ ವನಸಂಚಾರದೊಳಾಯ್ತು; ಬಳವಿ ರಕ್ಕಸರ ಬಂದಿಯೊಳಾಯ್ತು; ಕೞಿವೆ ಪುಲಿಕರಡಿಗಳಿನಗುರ್ವಿಸಿದ ಕಾರಡವಿಯೊಳಾ ಯ್ತಲೇ! ಅಯ್ಯೋ! ಅಬ್ಬೆಯಿಲ್ಲದ ಪೆಣ್ಮಗಳನೊರ್ವಳಂ ಕಾಡಿಗೊತ್ತೆಗೀ ವೊಡೆಂದೇಂ ಮದುವೆನಿಂದೆನೇ! ಆಃ! ಚೆನ್ನೇ! ನಿನ್ನಾ ಪಾತಿವ್ರತ್ಯಮನಾ ಸೌಜನ್ಯ ಮನಾವಿನಯಮನೆಂತೊ ಮಱೆವೆಂ. ಮುನ್ನಮಯ್ಯನ ನನ್ನಿಗೆ ವಿಪಿನಕ್ಕೆ ೨೦ ತೆರಳ್ವನ್ನಮಾಂ ಪೊಱಮಟ್ಟೆನೆಂದು ಕೇಳ್ದು ಮಗಲ್ದಿರಲಾಱದೊಂದು ಮೋಹದಿಂ ಬೆಂಬತ್ತಿದ ನಿನ್ನಂ ತಕ್ಕೊರ್ಮೆಗೆಟ್ಟುಂ ಪೇೞದೆಯುಮಾನೆ ಪೞುವಿಂಗಟ್ಟಿದೆನೇ! ಕಿಱುನಗೆಯ ಮೋಡಿಯೊಳೊರ್ಮೆ ತಾಂ ಬೞಲ್ದುಂ—ನಲ್ಲ! ಬೞಲ್ದೆಯ! ಕುಳ್ಳಿರ ಎಂದು ಪಾಸಱೆಯುಂ ತೋಱಿ ತಾನುಮೊತ್ತಿನೊಳ್ ಮಂಡಿಸಿ, ನೆವದ ಬಣ್ಣನೆಯೊಳ್ ನುಡಿಯಿಸಿ, ಕೂಡೆವೋದಂದಿನ ಪಯಣದ ದಿನಂಗಳ ನಿನ್ನುಂ ಮಱೆತೆನಿಲ್ಲಕ್ಕಟಾ! ಮಗುೞ್ದೊರ್ಮೆ ನಗರಂಬೊಕ್ಕು ತಾಂ ಪಟ್ಟದರಸಿ ಯಾದೆನೆಂಬೊಂದು ಸಂತಸದಿಂ ತನ್ನೋರಗೆಯ ಕೆಳದಿಯರ್ಗೆ ತೊೞ್ತಿರ್ಗೆ ಮೆಚ್ಚಿಸಿತ್ತುದೇಂ ಲೆಕ್ಕಕೊಳಗೆ! ತನ್ನ ಬಾವದ ನಲ್ಮೆಯೊಲ್ಮೆಯ ನುಡಿಯೊಳರ ವೆಂಡಿರ ಪೆರ್ಮೆಯ ಸೊರ್ಕಿನ ಕೊರ್ವಿನ ಬಿಂಕಮುಂಟೇ! ಆಃ! ಸಿಗ್ಗಾಳಿ! ಆಗಳುಂ ಸುಶೀಲದಿನೆ ಬಾಗಿ ನಡೆವ, ಕಜ್ಜಮಿರೆ ನುಡಿಗೊಂಡು ನುಡಿವ, ೩೦

ಸೆವದಿಂ ನಗುವ, ಪುಸಿಮುನಿಸಿಂ ಮುನಿವ, ತಿಳಿಪೆ ತಿಳಿವ, ನಿನ್ನ ರತಿರಹಸ್ಯ ಮನಿನ್ನೆಂತು ಮಱೆವೆನೋ! ಬಲ್ಗಾಲದಿಂ ತನಗೆ ಮಕ್ಕಳಾದುದಿಲ್ಲೆಂದು ಮೆಯ್ಯಂ ತವಿಸಿ ನೋಂಪಿಯಂ ನೋಂತಳ್ಗಡಾ! ಎಂತೆಂತೊ ದೈವಮನುಗ್ರಹಿಸ ಲೊಡಮೀ ಪೊಟ್ಟಿಂಗೀಗತಿಯುಮಾಯ್ತು. ಅಕ್ಕಟಕ್ಕಟಾ! ಆಗರ್ಭಿಣಿ ಯೆಂತು ಪ್ರಸವವೇದನೆಯಂ ಸೈರಿಪಳೊ! ಇನಿಯಂ ಕೈವಿಟ್ಟನೆಂಬೊಂದು ದುಗುಡವೊಂದು; ವನವಾಸದ ಬವಣೆಯೆರಡು; ಕಾಟ್ಮೆಗಂಗಳತ್ತಣಿಂ ಭಯಂ ಮೂಱು; ಬಱುವೆಯೆಂಬೊಂದು ಬೇವಸಂ ನಾಲ್ಕು; ಬಸಿಱ ಬೇನೆಯೈದು; ಅಯ್ಯೋ! ಈ ಉಮ್ಮಳಕ್ಕೆಂತಸುವಿಡಿದಿರ್ಪಳೋ! ಹಾಹಾ! ಲಕ್ಷ್ಮಣಂ ಕಾಡೊಳಿಟಿಪಿ ಮರಲ್ವನ್ನಮೇನೆಂದಳೋ! ಎನಿತ್ತ ಬಲ್ದಳೋ! ಎಂತು ಸುಮ್ಮ
೧೦ ನಾದಳೋ! ಮೇಣುಂ ತಾಂ ಬೆನ್ನನೆ ಬರ್ಪೆನೆಂದಳೋ! ಎನ್ನಂ ಬಯ್ದಳೋ! ಈಗಳೇನಾದಳೋ! ಹರಹರಾ! ಆತನೊಳಮಿಾತೆಱನೇನೆಂದು ಕೇಳ್ವೆನೊ! ಎನಗಾವ ಮೊಗವೊ! ಸುಡು ಸೀತೆಯಿಲ್ಲದೀನಾಡಂ! ಹಾ! ನಾಯಿಕೇ! ಹಾ! ರನ್ನೆ! ಆಮಿರ್ವರುಂ ಕಾಡೊಳಾದೆವಲ್ತೆ! ಎಮಗಾವುದು ಬಟ್ಟೆ! ರಾಜ್ಯದಿನೇಂ? ಐಸಿರಿಯಿನೇಂ? ಇಂತಿವು ಪೆಱವರೊಡಮೆಯಲ್ತೆ! ಈಗ ಳಾನುಂ ಪೆಱರ್ಗೆ ಮಾಱುವೋದೆಂ; ಇನ್ನೆನಗೆ ಸಂತಸಮಾವುದೊ! ಸೊಗ ಮಾವುದೊ! ಕೆಳೆತನಮಾವುದೊ! ಬಾಳ್ತೆಯಾವುದೊ! ಹಾ! ಹಾ! ಜಾನಕೀ! ಎಂದು ಪಲವಗೆಯೊಳ್ ಬಣ್ಣಿಸಿ ಬಣ್ಣಿಸಿ ಮಱುಗಿದಂ. ಅನಿಗಾಲಮಿಾವಿ ಯೋಗದುಃಖಮಂ ನೆನೆನೆನೆದು ಪಳಯಿಸುತಿರ್ದಂ.

ಇಂತಿದು ಕಣಾ! ಸೋದರರಂ ಸೊಮ್ಮುಗಿಡಿಸಿದುದು, ಅಗಸ್ತ್ಯನಂ ನೆಲೆ
೨೦ ದಪ್ಪಿಸಿದುದು; ಸಾಜಮಲೇ ಪತಿಪತ್ನಿಗಳೊಳ್ ವಿಯೋಗದುಃಖಂ! ರನ್ನೆ! ಆನೊರ್ಮೆಯುಂ ನಿನ್ನನುಟಿದು ಬಾಟೆಂ. ಅಂತದಱಿನೆಮ್ಮೊಳಾವಗಂ ಪುದು ವಾಳ್ಕೆಯಂ ದೀರ್ಘಾಯುಮಂ ಶಿವಂ ನೆಲೆಗೆಯ್ಗೆ! ಸ್ವಸ್ತಿ!

ಮನೋರಮೆ! ಮುಂಗತೆಯಂ ಕೇಳ. ಅಂತು ಕುಂಭಸಂಭವನ ಬೆಸನಂ ಪಿಡಿದು ಅಶ್ವಮೇಧಮಂ ಕೈಕೊಂಡ ರಾಘವಂ ಸ್ವರ್ಣಸೀತಾಸಮೇತಂ ದೀಕ್ಷೆ ನಿಂದಂ. ಅಗಸ್ತ್ಯಂ ಬ್ರಹ್ಮನಿರ್ದಂ. ವಸಿಷ್ಠನಾಚಾರ್ಯನಾದಂ. ಮೇಣ್ ಋಷಿಗಳ್ ಅಧ್ವರ್ಯೂದ್ಗಾತೃಹೋತಾರರುಂ ಋತ್ವಿಜರುಂ ಸಾಮಾಜಿಕರು ಮಾಗೆಸೆದರ್. ಅನ್ನೆಗಮಾಚಾರ್ಯಂ ಶುಭಮುಹೂರ್ತದೊಳ್ ಸಿಂಗರದ ಚೆನ್ನ ಜನ್ನಗುದುರೆಯಂ ಪೇಟ್ದಂತು ಪೂಜಿಸಿ ಬಟಿಯಗ್ಗಳಿಕೆಯ ಬಿರುದೋದಂ ಬರೆದೋಲೆಯಂ ಪಣೆಗೆ ಬಿಗಿದು "ನಿರಾಕುಳಂ ಚಪ್ಪನ್ನ ದೇಶಂಗಳಂ ಸಂಚರಿ
೩೦ ಸುತುಂ ಕಪ್ಪಕಾಣ್ಕೆಗಳಂ ಕೂಡಿತರ್ಪುದು." ಎಂದು ಶಿರದೊಳ್ ಮಂತ್ರಾಕ್ಷತೆ

ಯನಿಟ್ಟುಂ ಬಿಟ್ಟಂ. ಆಗಳ್ ಯಜಮಾನಂ—ಈಪೊೞ್ತು ಪೋದೋಱೆದ
ಯಜ್ಞೀಯಾಶ್ವದ ಬೆಂಬಱಿವೋಗಿ ನೆರಂಗೂಡುವ ನಾಡೆಱೆಯರ ಕೊಟ್ಟಜಮ
ನೊಟ್ಟಯಿಸಿಯುಂ, ಬಲ್ಪಿಂ ತಡೆವರೊಳ್ ಪೊಣರ್ಕೆಯಿಂ ಮರಲ್ಚಿಯುಂ, ಗೆಲ್ಲ
ವೆಣ್ಗೆ ಜಸದ ಪೊಸಚೊಲ್ಲೆಯುಮಂ ಸೂಡಿ ಕೂಡಿವರ್ಪ ಬಲ್ಲಾಳ್ತನದ ಗಂಡುಗ
ಲಿಗಳಿರಾ! ಎನ್ನೀಕ್ಕೈವೀಳೆಯುಮಂ ಕೈಕೊಳ್ಳಿಂ, ಎಂಬುದುಂ;—ಆಂ ತಾನೆಂ
ಬಾಕೆವಾಳರ ಗಲ್ಲಣೆಯ ಬಲ್ಲುಲಿಯಂ ಮಾಣಿಸಿ ಪುರ್ವಿಸೊಂದು ಜರ್ವಿಂ ಕಂಠ
ದೊಂದು ಹುಂಕೃತಿಯಿಂ ಬೀರರ ಜಂಗುಳಿಯೊಳ್ ನುರ್ಗಿ ಬೀದಿಗೊಂಡು
ರಾಯನಿದಿರ್ವಂದು ಶತ್ರುಘ್ನಂ—ಆರುಮಲ್ತಾನೆ ಕೊಳ್ವೆಂ, ಎಂದಂ.
ರಾಯಂ ತನ್ನ ಕಿಱುದಮ್ಮನ ಬೀರದ ಮೈಸಿರಿಯ ಬಿಂಕದ ಮೈವಳಿಯ
ನುಡಿಗೆ ಸಂತಸಂಗೊಂಡು—ಲೇಸು, ಲೇಸೈ! ಭರತಂ ನಗರಪಾಲಕಂ  ೧೦
ನೇರ್ಪಡೆ, ಲಕ್ಷ್ಮಣನೆನ್ನ ಕೈಗುಂದಿನೂಱಿಗದೊಳಿರೆ, ನೀನಲ್ಲದಾವಂ
ಮೇಣೀಕಜ್ಜದೊಳ್ ಸಾಲ್ವಂ. ಪೋ, ಕ್ಷಾತ್ರಧರ್ಮಂಗಳೊಳಮುಪಾಯಂಗ
ಳೊಳಂ ನೀಂ ಜಾಣನಿರ್ಪಿನಂ ಪೆಱತಾವುದಂ ನಡೆನುಡಿವೇಳ್ವೆಂ? ಆದೊಡಂ
ಕೇಳ್; ಮೊನೆಗಲ್ಲದೆ ಬರ್ಪ ಪಿರಿಯರುಂ ವಿಪ್ರರುಂ ಸೇವ್ಯರಪ್ಪಿನಮವರಂ
ಕಡೆಗಣ್ಚದಿರ್. ಹರಿಹರರೊಳ್ ಭೇದಮೆಣಿಸದರಂ ನೀನುಂ ಭೇದಮೆಣಿಸ
ದಿರ್; ಜೀವನಂ ಪಶುಜೀವನಮೆಂದುಂ ವ್ಯಾಘ್ರಜೀವನಮೆಂದುಂ ವ್ಯಾಳ
ಜೀವನಮೆಂದುಂ ಉತ್ತಮಮಧ್ಯಮಾಧಮವಿಭೇದದಿಂ ಮೂದೆಱನಿರ್ಕುಂ.
ಲೋಗರ ಶಿಕ್ಷೆರಕ್ಷೆಗಳೊಳಿವಱೊಂದು ಜಾಣ್ಮೆಯಿರ್ಕೆ. ರಣದೊಳ್
ನಿರಾಯುಧರಂ ಮೂರ್ಛಿತರಂ ಸಮಂತು ಪಲಾಯಿತರಂ ನೋಯಿಸದಿರ್;
ಮತ್ತಂ ಪುತ್ರನೇಱಿದರಂ ಪುಲ್ಲಂ ಕರ್ಚಿದರಂ ಬಾಯೊಳ್ ಬೆರಲನಿಟ್ಟರಂ,  ೨೦
ಮುಟ್ಟದಿರ್; ಮಱೆಮೋಸದ ಕವಡುಬಿಜ್ಜೆಯಂ ಕಾಳೆಗದೊಳ್ ಮಾಣ್;
ಪೆಣ್ಗೊಲೆಗೆಳಸದಿರ್; ಇಂತು ನಯಂಬಿಡಿದು ಮಾರ್ಮಲೆವರಿರಾಯರಂ ಗೆಲ್ದು
ಬಾರೈ, ಎಂಬುದುಂ; ನೆರೆಯೊಳೆ ನಿಂದಾಲ್ಪೈಪ ಸೀತಾವರಜಂ ಲಕ್ಷ್ಮೀ
ನಿಧಿ ತಾಂ ಮುಗುಳ್ನಗೆಯಿಂ ರಘುಪ್ರವರಂಗೆ—ಭಾವ! ಇಂತುಟಲೆ ಕ್ಷಾತ್ರ
ಧರ್ಮರಹಸ್ಯಂ. ನೀಮೆ ಪಂಡಿತರೈಸೆ! ಮುನ್ನ ಮಾತಾಟಕೆಯಂ ಕೊಲ್ವಂದೀ
ಅಱಿವೆತ್ತವೋದುದೋ? ಭಾರ್ಗವನೊಳ್ ಪೊಣರಿರೆ! ವಾಲಿಯೊಳಂದೇತಱ
ಕಾಳೆಗಮಾಯ್ತೊ? ನಿಮ್ಮಯ್ಯಂ ತಾಂಡವನನೇನೆಂದು ಕೊಂದನೊ!
ಈಲಕ್ಷ್ಮಣಂ ಶೂರ್ಪಣಖಿಯ ಕಿವಿಮೂಗುಗಳಂ ಬಿಚ್ಚ ಬೆಸುಗೆಯಂ ಕೀಱನೆ!
ಇಂತಿದು ಬಱಿವಿರುದಲ್ತೆ! ಈಗಳ್ ಶತ್ರುಘ್ನನುಮಂತಿರೆ ಧರ್ಮಮಂ
ಬಱಿಸಲ್ಪಂ! ಎಂದು ವಿನೋದಮಾಗೆ ಹಾಸ್ಯಮನಾಡಿದಂ. ಅದರ್ಕೆ  ೩೦

ರಾಘವಂ—ಆಃ ನನ್ನಿ ಗವಸುಳೆ! ನೀನಱಿಯಯ್, ಇಂತೀರಹಸ್ಯಮಂ ನಿನ್ನ ಬಿಲ್ಲೋಜನಪ್ಪ ಶತಧೃತಿಯಂ ಕೇಳೆಂದು ಮಾರ್ನುಡಿದಂ. ಈನುಡಿಗೆ ಸಭ್ಯರೆಲ್ಲರ್ ತಲೆದೂಗಿ ಸಂತಸಂದಾಳ್ದರ್. ಅಂತಿರ್ಪುದುಮಾಗಳ್ ಲವಣಾಂತಕಂ ರಾಘವನಂ ಮಣಿದುಂ ಭರತಾದ್ಯರಂ ಪೊಡೆಮಟ್ಟುಂ, ಮಾತೆ ಏರನೆಱಗಿಯುಂ, ಗುರುವಂ ನಮಸ್ಕರಿಸಿಯುಂ, ಪಿರಿಯರಂ ತಲೆವಾಗಿಯುಂ, ವಿಪ್ರರಂ ಕೈಮುಗಿದುಂ, ಋತ್ವಿಜರಂ ತುಟಿಲ್ಗೆಯ್ದುಂ ಸಭ್ಯರಂ ಕುಂಬಿಟ್ಟುಂ, ಮುತ್ತೈದೆಯರಂ ಕಾಲ್ವಿಡಿದುಂ ಪರಕೆಗೊಂಡು, ಬೆನಕಂಗೆ ಹಂಕೆ ಯಿಕ್ಕಿಯುಂ, ಭಾಸ್ಕರನಂ ಧ್ಯಾನಿಸಿಯುಂ, ತ್ರಿಮೂರ್ತಿಗಳಂ ಸ್ತುತಿ ಸಿಯುಂ, ನವಗ್ರಹಂಗಳಂ ಭಾವಿಸಿಯುಂ, ದೆಸೆವಳರಂ ನೆನೆದುಂ, ಯಜ್ಞೀ
೧೦ ಯಾಶ್ವಮಂ ಬಲಗೊಂಡುಂ ಸಸಾಯಕಂ ಸರ್ವರಾಣತಿಗೊಂಡು ಸುಮತಿ ವೆರಸು ಪೊಱಮಟ್ಟಂ. ಆ ಪೊತ್ತಿಂಗೆ ಹನುಮಂತ ಸುಗ್ರೀವನೀಲನಳ ಜಾಂಬವಾದಿಯಪ್ಪ ಕಪಿವೀರರುಂ ಕೋತಿವಡೆಯನೊಡಗೊಂಡು ನಾಯಕನ ಮೆಯ್ಗಾವಲ್ಗೆಂದು ತಳರ್ದರ್. ಈತಂಗಳಂ ಕೂಡೆ ಪ್ರತಾಪಾಗ್ರ್ಯನೀಲರತ್ನ ರಿಪುತಾಪೋಗ್ರಾಶ್ವಲಕ್ಷ್ಮೀನಿಧಿಗಳೆಂಬ ಪಂಚಮಹಾರಥಿಕರ್ ಪ್ರತ್ಯಕ್ಷೌ ಹಿಣೀಸೇನಾಸಮೇತರ್ ನಡೆದರ್.

ಮತ್ತಮಾವೇಳೆಯೊಳ್ ಪೆಟ್ಟಿದ ಬಣ್ಣವಾವುಗೆಯ ಸಿಂಗರದುಟ್ಟ ಬೀರಗಾಸೆಯಂದದ, ಕಟ್ಟಿದ ದಟ್ಟಿಯ ಬಲ್ಪಿನ, ತೊಟ್ಟ ಪೊಸಗುಪ್ಪಸದ ಚೆಲ್ವಿನ, ಇಟ್ಟ ಕೀಱುಗಂದದ ರಯ್ಯದ, ಅಳವಟ್ಟ ಮಣಿಯ ಕುಂದಣದ ಮಗುಟದ ಸೊಬಗಿನ, ಕಿಱುಜನ್ನನದ ಬಿಂಕದ, ನಡೆವೊಂದು ಗಾಡಿಯ ಪುಷ್ಕಲಂ,
೨೦ ಆಗಳೆ ತಂದೆತಾಯ್ವಿರಡಿಯಾಣತಿವಡೆದು ಕಿಱಿಯಯ್ಯನ ಬೆಂಬಲಕ್ಕೆಂದು ಸಾಯಕಂಗಳನೆತ್ತಿ ಪೋಪವಸರದೊಳ್ ಬಿಡುಜಡೆಯ ಬಿದುವೊಗದ ಬಿರಿದೆಸಳ್ಗಣ್ಣ ಬಿಲ್ಪುರ್ಬಿನ ಬಿಂಗ (?) ಗೆಕ್ಕೆಯ ಬಿಂಬಾಧರದ ಬಿಲ್ವಸ್ತನದ ಬಿಣ್ಪೊಡೆಯ ಬಡವಾಸೆಯ ಬಳಲ್ನಡುವಿನ ಬಲಮುರಿಸುಂಕುಗೊರಲ ಬಸೆನಡೆಯ ಬೆಳ್ದಳಿಗ್ರ್ಯಯ ಬಂದುಗೆವೊಗರ ಬಾವನ್ನಸೊಪಡ ಬಳಲೊಡಲ ಬೆಡಂಗಿನ ಬಾಲೆಯೊರ್ವಳ್ ತನ್ನ ಕಿಱುವೆರಲ ಸೆಳ್ಳುಗುರ್ಗೊನೆಯಿಂ ಮುಂಗುರುಳನೇಱೊತ್ತುತುಂ ಅರೆಜಾಱಿದ ಮೇಲುದುಮಂ ಸಮಂ ಸೇವರಿ ಸುತುಂ ಪತ್ತೆವಿಡಿದುಡೆನೇಣಸೊತ್ತು ಸೇರಿಸುತುಂ ಕೈವಳೆ ಘುಲ್ಘುಲ್ಲೆನೆ ಮಂಜೀರಂ ಘಲ್‌ಘಲ್ಲೆನೆ ನಸುನಗೆಯರೆನೋಟದ ತಲೆವಾಗಿನ ವಿಲಾಸದಿಂ ಮಂದಾರದ ತೋರದಂಡೆಯನಿರಿಸಿ ಪೊಂಬಟ್ಟಲನೆತ್ತಿ ಬರುತುಮಿರ್ದಳ್.

೩೦ ಇಂತು ಕಾವನಧಿದೇವತೆಯೆನೆ ಕಟ್ಟಿದಿರೊಳಿರ್ದಿರ್ಪ ತನ್ನ ಮನದೆಱಕದಿನಿ

ಯಳಂ ಕಂಡು ನಸುನಕ್ಕು ಮುಟ್ಟಿಸಾರ್ದು ತಳ್ಕೆಗೆಯ್ದು ನುಣ್ಗಲ್ಲಮನಲುಗಿ
ಮೈಸೋಂಕಿಸೊಂದು ಸೊಗದಿಂ ಸಿಮಿರ್ನವಿರ್ ಗುಡಿಗಟ್ಟೆ ಕಾಂತೆಗೆ—
ಕಾಮಕಲ್ಪವಲ್ಲರೀ ! ಅಯ್ಯನ ಪಿರಿಯಯ್ಯನಾಣತಿಯಾಯ್ತು. ಇದೆ! ಜನ್ನ
ಗುದುರೆಯ ಬೆಂಗಾವಲ್ಗೆಂದು ಪೋಪ ಕಿಱಿಯಯ್ಯನ ಬೆಂಬಲವಾಗಿ
ತಳರ್ದೆಂ. ಬಾಲೇ ! ಅನಿತೊಂದು ಕಾಲಂ ನೀಂ ಮನಮುಱುಗದೆ ನಿನ್ನತ್ತೆಯಿರ
ಸೇವೆಯ ನೋಂಪಿಯೊಳೆ ಬಾೞ್. ಇದು ನಿನ್ನನ್ನರಪ್ಪ ಹದಿಬದೆಯರ್ಗೆ
ಮೇಲ್, ಎಂದಂ. ಆನುಡಿಗೆ ಕಾಂತಿಮತಿ ತಾಂ ಗದ್ಗದವಾಣಿಯಿಂ ನಲ್ಲಂಗೆ—
ಇನಿಯ ! ಚಿರಕಾಲಂ ನಿನ್ನನಗಲ್ವೆನೆಂಬೊಂದು ಬೇವಸದಿಂ ನೋವೆನಾದೊಡಂ
ದಿಗ್ವಿಜಯಾರ್ಥಂ ಪೋಪ ವೀರರಂ ತಡೆವುದು ವೀರಪತ್ನಿಯರ್ಗೆ ತಗದಲ್ತೆ,
ಲೇಸೈ ! ಎಣೆವೆಂಡಿರ ನಗೆಗೆನ್ನಂ ಪಕ್ಕಾಗದಂತು ಮಾಡಿ ಗೆಲ್ಲವೆಣ್ಣಂ ಸವತಿಯ ೧೦
ನಾಗಿಸೈ. ನಿನ್ನನುಟಿದುಂ ಕುಳಿರ್ಗಾಳಿಗೆ ಕಾವಂಗೆ ಅವುಃರ್ದು*ಗೈಯಂಗೆ
ಸುಗಿದು ಗಳಿಗೆಯುಂ ಯುಗಮೆನೆ ಬೇಟದ ಸೂಡಿಂಗೆ ನೂಂಕಿ ನಮೆಯಲಿರ್ಪೆ
ನ್ನೊಳ್ ನಿನ್ನಡಿಗಳೊಂದು ಸಲ್ಮೆ ಸಮಂತಿರ್ಕೆ ! ಮೇಣಾರ ಮುಖತುರಗಕ್ಕೆ
ಬೆಂಬಟಿಪೋಪೆಯಾರಾಮನೊಲ್ಮೆ ನಿನಗೆ ರಕ್ಷೆಯಿರ್ಕೆ ! ಎಂದು ಕಟ್ಟಾಣಿ
ಮುತ್ತಿನ ಸೇಸೆದಳಿದು ನಱುದಂಬುಲಮನಿತ್ತು ಸುಖಾಶ್ರುವೆನೆ ಆಲಿಸೀರ್
ತುಱುಂಕೆ ಕಿಱುವೊಗದ ಸುಕರ್ಣಂಬಗೆಯ ಬಾವದಿಂ ನಿಂದಿರ್ಪುದುಂ ; ಭಾರತಿ,
ಕಾಂತೆಗೆ—ಕಾಂತಿಮತಿ ! ಎಣ್ಕೆಯೇಂ ? ದೆಸೆಗೆ ಜಿಬ್ದಾರಾಯರ ಬಾಟ್ದಲೆ
ಪಿಡಿದುಂ ಜಯಕಾಂತೆಗೆ ತೊಟ್ಟಿರಂ ಮಾಡುತುಮಲ್ಲದಂದವರ ಪಂದಲೆಯ
ತಿಱಿಕಲ್ಲಾಟದಿಂ ಮರುಳ್ಪಡೆಗೆ ನಲವೆರ್ಚಿಸುತುಂ ಕಪ್ಪಕಾಣ್ಕೆಗಳನೆಬೆದು
ತರ್ಪೆಂ ; ನೋಯದಿರ್ ; ಪೋಗೆಂದೊಡಂ ಬಿಡಿಸಿ ಬೀಳ್ಕೊಟ್ಟಂ. ಅಂತಾ ೨೦
ಕಾಂತೆ ವಿಜಯಕ್ಕೆಂದು ಪೋಪ ನಲ್ಲನ ತಲೆಮುಡಿಯಡಂಗುವನ್ನಮೆಟ್ಟೆದ್ದು
ನೋಡಿಯುಂ ಬಯಲಾಸೆಯಿಂ ಬೀಡಂ ಪೊಕ್ಕಳ್. ಭರತಾತ್ಮಜನುಂ ತನ್ನ
ಬಗೆಯನಿರ್ಕುಳಿಗೊಂಡ ಕಾಂತೆಯ ಕಾದಲ್ಮೆಯುಂ ನೆನೆನೆನೆಯುತೆ ಪೋಗಿ
ಶತ್ರುಘ್ನಂಗೆ ಬೆಂಬಲವಾದಂ.

ಈಗಳ್ ಶತ್ರುಘ್ನನಾಜ್ಞೆಯಿಂ ಪುಷ್ಕಲನೊಂದು ನಿಯಮದಿಂ ರಥಿಕರ
ಮಂತಣದಿಂ ಪಱುವಾನಿಸಬೀರರ ಪದ್ಧತಿಯಿಂ ನಡೆವ ಸೇನೆಯ ಕಾಪಿಂ
ಮುಖತುರಂಗಂ ತರಂಗಲೀಲೆಯಿಂ ಯಥೇಚ್ಛಂ ಪೋದುದು. ಆಸ್ಕಂಧಿದಿತ
ಧಾರೆಯಿಂ, ಸುದೃಢಪೀವರಕಾಯದೊಂದು ಕಾಂತಿಯಿಂ, ನಿಮಿರ್ದ ಕೊಡಂಕೆ
ಯಂದದಿಂ, ರನ್ನದಾರದ ಪೊನ್ನ ಕಿಱುಗಂಟೆಯ ಚೆಲ್ವಿನ ಗೋಣ ಸೊಬಗಿಂ,
ಪಣೆಯ ಬಿರುದೋಲೆಯೊಪ್ಪದಿಂ, ಸನ್ತಂ ಪೋಪ ಕುದುರೆಯ ಬೆನ್ನೊಳೆ ೩೦

ಪಱೆಯ ಪೆರ್ಗಾಳೆಯ ಪಳಹದ ಕೋಟಲ ತಂಬಟೆಯ ಶ್ರುತಿಯ ಡೌಡೆಯ ಮವುರಿಯ ಭೇರಿಯ ಭೂರಿನಿನಾದಂ ದೆಸೆಮುಟ್ಟೆ ಪಳಂಚಲೆಯೆ, ಸೇನಾಪದ ಸಂಘಾತಸಂಜಾತರೇಣುಜಾತಮಂಬರಮಂ ಮುಸುಂಕೆ, ಎತ್ತಿದ ಸತ್ತಿಗೆಯ, ಡಾಳಿಸುವ ಚಾಮರದ, ಮಿಳಿರ್ವ ಕೇತನದ ಪಂತಿಯೆತ್ತಂ ನಿಮಿರ್ದಿರೆ, ರಾವುತರ ಮಾವತಿಗರ ತೇರಾಳ್ಗಳ ಚಪ್ಪರಣೆಯೊಳ್ ಕಿಳಿರ್ವ ಹಯದ ಗೀಟಿಡುವಾನೆಯ ಕಿಱುಗಿಱುವ ಪೊಂದೇರೋರಣಮಿಂಬಿಡಿದಿರೆ, ಕಡಿತಲೆಯ ಸುರಗಿಯ ಕೊಂತದ ಸೂಳದ ಬಿಲ್ಗಣೆಯ ಮೂಡಿಗೆಯ ಭಟರ ದೞ್ಬಳಂ ನೇರಮಾಗೆ, ಗರಗರಿಕೆಯ ದಟಿದುಟಿದ ಬಿಂಕದ ಬೀರರುಗ್ಗಡಣೆ ಪಿರಿದಾಗೆ, ಜೋದರ ಗೋಟಾಯಿಲರ ರಥಿಕರ ಕಾಲಾಳ್ಗಳ ಪಡೆವಳರಾಕೆವಾಳರ ಗಡಣಂ
೧೦ ನೆರೆದಿರೆ, ಲವಣಾತಂಕನ ಕಟ್ಟಾಣತಿಯಿಂ ಪಡೆ ನಡೆಯುತುಮಿರ್ದುದು.

ಇಂತು ಪರ್ವಿದ ಕಡಲೆಂಬಂತಿರೆ ಮೇರೆವರಿದು ಪೋಗೆ ಸೇನೆಯೊಂದಿರವಂ ತಮತಮಗೆ ಸಂತಸದುರ್ಬಿನಿಂ ಕಾಂತೆಯರ್ ನೆಲೆವಾಡಮನೇಱಿಯುಂ ಮೊಗಸಾಲೆಯೊಳಿರ್ದು ಬಾಗಿಲೊಳ್ ನಿಂದುಮರೆದೆಱೆದ ಪಡಿಯಲ್ಲಿ ಗವಾಕ್ಷದೊಳ್ ನಿಳ್ಕಿಯುಮೀಕ್ಷಿಸುತಿರ್ದರ್. ಅವರೊಳೊರ್ವಳ್ ಜಕ್ಕಜವ್ವನದ ಚೆಲ್ಲಗಾರ್ತಿ ತನ್ನ ಒಟಿವಂದ ಕಾದಲನನೆಂತಂತು ಕೊರಲಂ ತಪ್ಕೈಸಿ ಪಿಡಿದ ತುಂಬುನೀರ ಪೊಂಗೊಡಮನಿಟಿಪಿ ಪಡಿಮೊಗದ ನೆರೆವೀಡ ನಡುಜವ್ವನದ ಕೆಳದಿಯೊರ್ವಳಂ ಸನ್ನೆಯಿಂ—ಎಲೆ ಅತ್ತಿಗೆ, ಎಂದುಂ ನಿನ್ನ ತೋಳೆಡೆಯೊಳೊಪ್ಪುವಂಗದಂ ತೋರ್ಕುಮಿಲ್ಲಮಿಂದೇನೆನೆ; ತಂಗೆ! ಊರ್ಗೆ ಪೋದ ನಲ್ಲನಿಂದು ಬರ್ಪಿನಮಾತನ ಪದಸೇವೆಯೊಳ್ ಸಂದಿರಲೊಡಮೆಂತೊ
೨೦ ಮೆಲ್ಲನೆ ಸಡಿಲ್ದು ಈಗಳ್ ಕಟಕಂಬೊಲಿರ್ಕುಂ, ಇದೆ! ಎಂದು ಕೈಯೆತ್ತಿ ತೋಱಿದಳ್.

ಮತ್ತಮೊಂದೆಡೆಯೊಳೊರ್ವ ಸಿಂಧುರಬಂಧುರಯಾನೆ ತನ್ನೊತ್ತಿನ ವಿದಗ್ಧೆಯೊರ್ವಳಂ ಮಂದಹಾಸದಿಂ—ರಥಾಂಗಂ ಸಡಿಲ್ದಚ್ಚಿಂತು ತೊಱೆದೀಸು ಕಟಿಲ್ಚಿದ ತೇರನೇಕೊ ನಿಮ್ಮ ಕಾವನ ಬೀರರಡರ್ವರ್ ನಿರ್ನೆರಂ ಏಂ ಸೊಗವೊ! ವೇಗಂ ಮಂದಮಾಗದೆ ಎಂಬುದುಂ; ಅವಳ್—ಆಃ! ಪೊಸ ತೇರೆಂತೊ ಕಿಱುಗುಟ್ಟುಗುಮೆಂದುಟಿದು ಪಲವುಂಸೂಟ್ ರಂಗಂಬೊಕ್ಕು ಗಂಡುಗಲಿಗಳಂ ಗೆಲ್ದು ಪಟಿಂಗಿದ ತೇರನೆ ಆವುದೊ ಕುಱುಪುಗೊಂಡು ಬಿಡದಾಯ್ದುಡರ್ದು ಸಂಗರದೊಳ್ ಬಲ್ಪೊಟ್ತಂ ಕಾದುವರ್. ಈಕಾವರಾಯನ ಸಂದ ಸೆಣಸಾಳ್ಗಳ ಕಟ್ಟಾಳ್ತನಮಂ ನೀನಿನ್ನುಮಱೆತೆಯಿಲ್ಲಮೆಂದು
೩೦ ಮಾರ್ನುಡಿದಳ್.

ಇಂತೀಪರಿಯ ಕಟಕಿವಾತಿನ ಮೋಡಿಯ ಪೊಱನಾಡ ಕೇರಿವೆಣ್ಗಳ ನಭೀಕ್ಷಿಸುತ್ತುಂ ಮೂಡದೆಸೆವಿಡಿದು ವಾಜಿಯ ಕಾಪಿಂ ಪಾಯ್ದಳಂ ಸಡಗರದಿಂ ನಿಚ್ಚವಯಣದಿಂ ದೇಶದೇಶಂಗಳಂ ಕಟಿಕಟಿದು ಪೋಗುತುಮಿರ್ದುದು.

ಎಂಬಲ್ಲಿಗೆ ಶ್ರೀರಾಮಾಶ್ವಮೇಧದೊಳ್
ವಿಜಯಪ್ರಯಾಣಮೆಂಬ ಸಪ್ತಮಾಶ್ವಾಸಂ ಸಂಪೂರ್ಣಂ.

---



## ಅಷ್ಟಮಾಶ್ವಾಸಂ

# ಕಾಮಾಕ್ಷಿದರ್ಶನಂ

ಮುದ್ದಣಂ—ಓ! ಎನ್ನ ನಿಚ್ಚನಿಡುಗುಂಕುಮದ ಬಿಂಕದ ಮೆಚ್ಚುಗಾರ್ತಿ! ಓ! ಎನ್ನ ಇಚ್ಚೆಗಾಱನ ಬೆಚ್ಚ ಪಚ್ಚೆಯ ಕೈಗನ್ನಡಿ! ಓ! ಎನ್ನ ಎಚ್ಚ ವೈಗಣ್ಣ ಪೆಣ್ಣೆ! ಓ! ಎನ್ನ ಮೀಂಮಚ್ಚಲಚ್ಚಣದ ಸಿರಿಗೈಯೆ! ಓ! ಎನ್ನ ಮೂಗೊಂಕುಮೂಗೆರೆಯ ಗುಜ್ಜುಗೊರಲ ತರಳೆ! ಕೇಳ್. ಇಂತೀ ಮಾಟ್ಕೆಯಿಂ ಯಜ್ಞೀಯಾಶ್ವಂ ನಾನಾವಿಷಯಂಗಳೊಳಂ ಮನೋರಥದ ವಾಜಿಯ ಪಾಂಗಿನಿಂ ತೊಟಿತೊಟಲ್ದು ಬರೆವರೆ ಊರಾಳ ಒಲ್ಲಾಳ ಪೆರ್ಗಡೆ ಮಾಸಾಮಂತಮನ್ನೆಯರಾಯರ್ ಮುಂತಪ್ಪ ನಾಡೊಡೆಯರ್ ಶ್ರೀರಾಮನ ಕಟ್ಟಾಳ್ತನದ ಬಲ್ಪಿನ ಬಟಿವಿರುದನೋದಿಯುಂ ಹಯದ ಬೆಂಬಲದ ಬಲ್ಗೈಬಂಟರಂ ಕಂಡುಂ ಕೈಮುಗಿದು ಶತ್ರುಘ್ನನ ಮಱೆವೊಕ್ಕುಂ ಕಪ್ಪಮನೊಪ್ಪಿಸಿ ತಾಮುಂ ಪಡೆವೆರಸಿ ಕುದುರೆಯ ಕಾವಲ್ಗೊದವಿ ಪೋದರ್. ಆಕಾಲದೊಳ್, 　　೧೦

ಆರಂ ತೋಡುಂಗಿಱದೆ ತನ್ನೊಂದು ಗರಗರಿಕೆಯ ಸೊಮ್ಮಿನಭ್ಯುದಯದೆ ಪದುಳಮುರಸಾಳ್ವ ಬಸಂತರಾಯನುರ್ಕುಂ ಸೊರ್ಕುಂ ಸೋರ್ದು ಬಯಲಪ್ಪಿನೆಗಂ ದಾಟಿಗೆಯ್ದಾತನ ನಾಡಂ ಬೀಡಂ ಪಡಲಿಡಿಸಿ ಪುರುಳ್ಗೊಂಡು ತಾನುಂ ಲವಣಾಂತಕಂಗೆ ನೆರವಾದನೆನೆ ಗ್ರೀಷ್ಮರಾಜಂ ತಲೆದೋಱದಂ. ಕಟಿ ಪೂವಟಿಯೆ, ನೀರುಂ ಬತ್ತೆ, ಕೆಸಱುಂ ಪಾವಸೆಯುಮುಟಿಯೆ, ಕೊಳಸಂ ನಿಸ್ಸಾರಮೆಂದು ಪುರುಳ್ಗುಂದಿದಾಣ್ಮನಂ ತೊಱೆದು ಪೋಪ ತುಟಿಲಾಳ್ಗಳಂತಿರೆ ನೀರ್ವಕ್ಕಿಗಳ್ ದೆಸೆದೆಸೆಗೆ ಪೋದುವು. ಈ ಅಪದೆಸೆಯಂ ಕಂಡೊಂದು ಬಕಂ ಬೆಳರ್ತು ಮುಂಗಾಣದೆ ತನ್ನ ನಂಟುವೊರೆಯ ಮೀಂಗಳ್ಗೆ ಮುಂತೆ ಬಟ್ಟೆ ಯಾವುದೆಂದಾವಗಮುಗಲದೆ ಚಿಂತಾಪರನಾಗಿರ್ಕುಂ. ಪೆರ್ದೊಱೆ ಕಾಲ್ಗೊ 　　೨೦

ಱೆಯುಂ ಕಿಱುದೊಱೆ ಪುಟಿಲ್ದೊಱೆಯುಮಾಯ್ತು. ನಾಡುಂ ಕಾಡುಂ
ಬೀಡುಂ ಸೂಡಿಂ ಸೀಕರಿವೋಯ್ತು. ಕಾತ ಮರಂ ಪೂತ ಬಳ್ಳಿ
ಸುರ್ಕಿ ಸುಟಿವಾಡಿದುದು. ಕಲ್ ಸುಣ್ಣಬೇವಾಯ್ತು. ಮಟಲ್ ಹುರಿಗಡಲೆಯು
ಮುಮ್ಮಱಿಯಾಯ್ತು. ವನಜಂತುಗಳ್ ಬಯಲ್ದೊಱೆಗೆ ಮರುಳ್ಗೊಂಡುವು.
ಪಕ್ಕಿಗಳ ಗಳದೆ ಭಿನ್ನಸ್ವರಂ ಪುಟ್ಟಿತ್ತು. ಆಗಳಾಗಳುರಗಂಗಳ್ ತಮ್ಮಾ
ರೋಗಣೆಯ ಪೊಪ್ತೆಂದು ಸಂಚರಿಸಲ್ತೊಡಂಗಿದುವು. ಅಲರ್ವಕ್ಕಿಗಳ್ ಬಂಡ
ನುಂಡುಂಡು ಬಾಯಾಱಿ ಬಂದು ಕನ್ನೆವೆಣ್ಗಳ ಕೈಗೊಡನ ತುಟುಕುಂಬನಿಯಂ
ಕುಡಿಯಲಾಟಿಸಿದುವು. ಕಾಂತಾಜನಂ ಪಟ್ಟುಡೆಯಿಂ ಪುಡಿಗಪ್ಪುರಂಬೆರೆದ
ಸಿರಿಕಂಡದಣ್ಪಿಂ ಮುತ್ತಿನೊತ್ತೆಸರದ ತೊಡವಿನುಳ್ಳಲರ್ದ ಬೈಗುಮಲ್ಲಿಗೆಯ
೧೦ ಚೊಲ್ಲೆಯದ ತುಱುಬಿಂ ಕಣ್ಗೆಡ್ಡಮಾದುದು. ಬಟ್ಟೆಗರಱವಟ್ಟಿಗೆಯ ಬಾಲೆಯರ
ನಯನಾತಿಥಿಗಳಾದರ್. ಬಿರಯಿಗಳ ಬಿಸುಸುಯ್ಲಿಂ ಪೊರೆದುದೆನೆ ಬನಗಾಳಿ
ಬೆಚ್ಚನೆ ತೀಡಿದುದು. ಲೋಗರ್ ತೃಷ್ಣೆಗೊಂಡರ್. ಭಾಸ್ಕರನಾಗಳುಂ
ಕಾಯ್ಪಿನೊಳಿರ್ದಂ.

ಇಂತು ಬಂದ ಕಡೆಯ ಕಡುವೇಸಗೆಯೊಳಂ ತುರಂಗಂ ಮುಂತೆ ಮುಂತೆ
ಪೋಗೆವೋಗೆ ಅಂದಂದು ಚಾಟಿ ಪೇರೊಡಲಿನುಗಿದುಂ ಬಿಗಿದುಂ ಪೊಱದೆಗೆದ
ಬೆಳ್ವಕ್ಕದ ತುಂಬುವೆಱೆಗಳನೊಟ್ಟಿಸಿ ಮೂಸೆಯೊಳಿಟ್ಟು ತಿದಿಯೊತ್ತಿ ಕರಗಿಸಿಯು
ಮೆಱೆದುಂ ಕಂಡರಸಿಯುಂ ಹಳಿದುಂ ಕೆತ್ತಿಯುಂ ಬೆಚ್ಚಂ ನಯಸಾಣೆವಿಡಿದುಂ
ಸವೆದುದೆಂಬಂತಿರೆ ತಟತಟನೆ ಪೊಳೆದು ಬಿತ್ತರಂಬಡೆದ ಬಿದುಗಲ್ಲ ಸುತ್ತಣ
ಮೆಟ್ಟಡಿಯಿಂ, ಪಾಸಿದ ತಣ್ಗದಿರಱೆಯ ಪಾದವಟ್ಟಿಗೆಗಳೊಳಗೇರಿಯ
೨೦ ನಿಡುಮರಂಗಳಿಱುಂಬಿನ ಕಟ್ತಲೆಯನೊಳಕೊಂಡು ಬೆಳರ್ಮಣ್ಣ ಪೊಸ
ಕಡಾಯದೊಳ್ ತುಂಬಿದ ನೀಲಿಯ ತನಿರಸಮೆಂಬಂತಿರೆ ಕಳಿಂದಜೆಯ
ಕರ್ಮಡುವಿನೊಂದು ಪೊಳೆಪಿಂ, ಗುಣ್ಪಂ ತೋರ್ಪ ತಿಳಿಸೀರಿಂ, ತುಂಬಿ
ತುಟುಂಕುವ ತಿಳಿನೀರ್ಗೆಡೆಯೆಡೆಯೊಳ್ ಕಾರಿರುಳಾಗಸದೊಳಿಡಿಕಿಱಿದ ತಾರೆ
ಗಳ ಪಾಂಗಿನುಳ್ಳಲರ್ದು ರಯ್ಯಮೊಪ್ಪುವ ಬೆಳ್ದಾವರೆಗಳಿಂ, ಬಂಡೊಸರ್ಪ
ಪುಂಡರೀಕಮಂ ನಱುಗಂಪಿನ ಬಟಿಗೊಂಡೈತಂದು ಕಮಲೆಯ ಮುಖ
ಕಮಲದ ಕತ್ತುರಿಬೊಟ್ಟನನುಕರಿಸಿ ಮುಸುಱಿ ಮೊರೆವ ಮಱಿದುಂಬಿಗಳಿಂ,
ಬಂಡೆಱಗಿ ಬಂಡಿನಲರ್ವುಡಿಯಿಂ ಪೊರೆದ ಪರಮೆವಱಿಯುಂ ಕೋಶದೆಳ
ಬಿಟ್ಟುಗೆತ್ತು ಕರ್ದು*ಂಕಲೆಂದವ್ವಳಿಸುವ ಬಾಲಹಂಸಂಗಳಿಂ, ಮೆಲ್ಲಮೆಲ್ಲನೆ
ನಡೆದುಂ ಪಾಱಿಯುಂ ಪೋಪ ಬಾಲಹಂಸೆಗಳಿಂ, ಬೆಳ್ವಕ್ಕಿಯ ಬಿಗುರ್ಪಿಂ
೩೦ ನೀರೊಳೊಳಗೊಳಗೆ ಮೈಗರೆವ ಮೀಂಗಳಿಂ, ಮೀಂಗಳ ನೀರ್ವಕ್ಕಿಗಳ

ಕಿಱುಗಾಳಿಯಲೆಪದಿಂ ಕಾಲ್ಪರಿವ ತೆರೆಯಿನೊಂದು ಕೊಳಂ ಪಗಲ್ವೆಣ್ಣ
ಕೈಪಿಡಿಯೆಂಬಂತಿರೆ ಸೊಗಯಿಸಿದತ್ತು.

ಇಂತು ಮುಂಗಾರೆನ್ನದೆ ಸುಗ್ಗಿಯೆನ್ನದೆ ಬೇಸಗೆಯೆನ್ನದಾಸಡಿಯೆನ್ನ
ದಿಂಬೊಸರಿಂ ತುಂಬಿ ಪೊನಲ್ಪರಿವ ಹೊಕ್ಕರಣೆಯುಂ ಬೞಿಗೊಂಡೊಂದು
ಬಸಂ ಬನರಾಣಿಯ ಕರತಳದ ಚೆಂಬೊಗರ್ಗನುಕಾರಿಯುಪ್ಪೆಳದಳಿರಿಂ ತೀವಿ
ತೋರ್ಪ ಚೆನ್ನಸುಗೆಯಿಂ, ಬಸಂತಂ ಪೊಲ್ದು ಸಮಕಟ್ಟಿದ ಮಲಂಗೆಂಬಂತಿರಡಿ
ವಿಡಿದು ಮುಡಿವರೆಗಂ ಒಲ್ಪಣ್ಗಳಿಂ ತುಱುಗಿ ತೋರ್ಪ ಬಕ್ಕೆವಲಸಿಂ
ದಿನಲಕ್ಷ್ಮಿ ನಡೆಯೊಂದು ಸೇದೆಯಿಂ ಬೞಲ್ದು ಪಯಣಂಬರ್ಪ ತನ್ನಿನಿಯನ
ನೀರಡ್ಕೆಗೆಂದೇಱುತ್ತಿ ನೀಡಿದ ತಣ್ಣೀರ ಪೊಸಪೊಂಗಳಸಮಿದೆನೆ ಇಂಬಿಡಿದ
ತೆಂಗಾಯಿಂ ಬಾನುದ್ದಂ ಬೆಳೆದೋರಣವಾಗಿ ತೋರ್ಪ ತೆಂಗಿಂ, ಮಾರ ೧೦
ವೀರನ ಕಟ್ಟೋಲಗದ ವಂದಿಗಳ ಮಾಗಧರ ಗಾಯಕರ ಪಸುರ್ವಟ್ಟೆಯ
ಗೂಡಾರದ ಬೀಡಾರಮೆನೆ ಚೆಂದಳಿರಿಂ ತನಿವಣ್ಣಿಂ ಪೊಸಪೂವಿಂ ತೀವಿ
ದಿಮ್ಮಾವಿಂ, ಇಚ್ಚೆಗಾರ್ತಿಯ ಪೆರ್ಚಿದ ಬಲ್ಮೊಲೆಯ ಪಾಂಗಿನಿಂ ಜೋಲ್ದು
ಪೊಂಬಣ್ಣದಿಂ ಮನೋಜ್ಞಮಾದ ಬೀಜಪೂರದಿಂ, ಬನಸಿರಿಯ ಸಿರಿಮೊಗ
ದೊಳೊಗೆದ ಬೆಳ್ನಗೆಯೊಳಂದು ಪೊಱತೋರ್ಪ ಬಾಯ ಸುಲಿಪಲ್ಲನನುಕರಿಸಿ
ಬಿತ್ತಿನೊತ್ತರಂಬಿಡಿದರೆವಿರಿದ ದಾಡಿಮದಿಂ, ರತಿಕಾಮರ್ಕಳ ತಿಱಿಕಲ್ಲಾಟದ
ಇಂದ್ರಾಶ್ಮಕಂತುಕಂಬೊಲೆಸೆವ ಬಾಲಜಂಬೀರದಿಂ, ಮಧುಲಕ್ಷ್ಮಿಯ ಕೇಶ
ಪಾಶಮೆನೆ ಮಡಲ್ತು ಕಱಂಗಿ ಕತ್ತಲಿಸಿದ ತಮಾಲದಿಂ, ಕಾವನ ಪೇರುಕ್ಕೆವ
ದೊಳಂದು ಪೊತ್ತಿಸಿದ ದೀವಿಗೆಗಂಬಮೆಂಬಂತಿರೆ ಪೂವಿಂ ಕರಂ ಚೆಲ್ವಾದ
ಸಂಪಗೆಯಿಂ, ಕುಸುಮಾಯುಧನ ಪೊಸಮಸೆಯೊಪ್ಪದ ಕೂರ್ವಾಳೆನೆ ಮಿಱುಗಿ ೨೦
ಕುತ್ತೆಸಳಿಂ ತೀವಿದ ಪೊಂಗೇದಗೆಯಿಂ, ಮುಗುಳ್ತ ಪಾರಿಜಾತದಿಂ, ಪೂತ
ಮಂದಾರದಿಂ, ಉಳ್ಳಲರ್ದ ಸುರಹೊನ್ನೆಯಿಂ, ನನೆಯೇಱಿದ ಸುರಯಿಯಿಂ,
ಬಕುಳದಿಂ, ಸಿರಿಸದಿಂ, ಪುನ್ನಾಗದಿಂ ಸೊಗಯಿಸಿ ತೋರ್ಕುಂ. ಕೊನರಿಲ್ಲದ,
ಮಿಡಿಯಿಲ್ಲದ, ಕಸುಗಾರ್ಯಿಲ್ಲದ, ದೋರೆವಣ್ಣಿಲ್ಲದ, ತನಿವಣ್ಣಿಲ್ಲದ ಮರಂಗ
ಳಿಲ್ಲಾ ಬನದೊಳ್. ಮುಗ್ಗದ ಮುಗಿಯದ ಬಾಡದ ನುಱುಗದ ಸುರುಂಟದ
ಪೂವೆ ಪೂಬನದೊಳಳುಂಬಂ. ಮತ್ತಂ ಮೃದ್ವಂಗಿಯೆಂತಂತು ನುಣ್ಪು
ವಡೆದುಂ, ಗಾಡಿಯಿಂ ನಡೆವ ಕೃಶೋದರಿಯೆಂತಂತು ಬಳ್ಳಿಯುಂ, ನಚ್ಚಣಿ
ಯೆಂತಂತು ಪೊತ್ತುಪೊತ್ತಿಂಗೆ ತಲೆಯನೊಲೆದುಂ, ಸೂಡ್ಗೆವಂದ ಕಾದಲೆ
ಯೆಂತಂತು ನೆರೆಯ ತೆಳ್ಮರನಂ ತಳ್ತಮರ್ದಪ್ಪಿಯುಂ, ಪೂವಳ್ಳಿ ಮಡಲ್ತೆಸುಗುಂ.
ಬಿರಿದ ಮುಗುಳ ಕಂಪಿಂ ಬೆರೆದು ತನಿವಣ್ಗಳ ಸಱುವಿಂ ಪೊರೆದುಗುವ ಸೊನೆಯ ೩೦

ಸೌಸವದಿಂ ನೆರೆದದಿರ್ಗಂತಿಯುಂ ತಾಟಿ ಮಾಲತಿಯುಂ ಮುಟ್ಟಿ ಮಾಧವಿಯುಂ ಕಿಟ್ಟಿ ಬನಗಾಳಿ ತಣ್ಣನೆ ತೀಡುಗುಂ. ಅಂತುಮಲ್ಲದೆಯುಂ—ತೀಟದ ಕಂಪೆತ್ತಲತ್ತಲ್ ಮೋಹರಿಸಿ ಗಾವರಿಸಿ ತಂಡತಂಡದಿಂ ತೇಂಕುತ್ತೈತಂದು ಮುಂದೈಸಿದಲರ್ಜೊಂಪಮಂ ಕಂಡು ಪಿಂಡೆಱಗಿ ಪೊಸಜೇನನುಂಡು ಱಕ್ಕೆಯುಂ ಬಿದಿರ್ಚಿ ಮೊರೆದೆಟ್ಟು ಮೇಣುಂ ಮುಂಬರಿವ ಬವರಿವಿಂಡಿಂ, ಪಿಳ್ಳಸೆ ಪಿಡಿದು ತನಿರಸದ ತಂದಲ್ಸುರಿವರಸೇಱುಲ ಗೊಂಚಲಂ ಕಟ್ಟಿದಿರೊಳ್ ಕಂಡು ತಾನುಂ ಸಾರಿಗೆಯುಮಿರದೆ ಪವ್ವನೆ ಪಾಱಿ ಸೆಳೆಗೊಂಬನಡರ್ದು ಮೈವಾಗಿ ಕೆಲಕೊಲೆದ ಕಟಿವಣ್ಣಂ ಕೊಕ್ಕಿಂ ಕುರ್ಕಿ ಸೀಯೆನ್ನೆ ಸವಿವ ನುಡಿವಕ್ಕಿಗೊಂದಣದಿಂ, ಬಂದ ಸೀಮಾವಿನಳ್ಳೆಗೊಂಬಿನೊಳಿರ್ದು ಕಣ್ಮುಗಿದು ಕೊನರ ಕನ

೧೦ ಸೊರ್ಗೀನೆಯುಂ ಚಂಚೂಪುಟದಿನಡಿಗಡಿಗೆ ಮೇಜೊಲ್ದು ಪುಯಲ್ಚುವ ಪಡಿಯುಱವಕ್ಕಿಗಳ ತಂಡದಿಂ, ನಿರಿಗದ ಮರಂಗಳೊಂದು ಪೊದೆಯಿಂ ಪುದಿದ ಬನಗಟ್ಟಲೆಯೆ ಕಾರ ಕರ್ಮುಗಿಲೊಡ್ಡಾಗೆ, ಇದಿರ್ಗಾಳಿಗೊಲೆವ ಮಾವಳ್ಳಿಯ ದಾಂಗುಡಿಯ ನುಣ್ಬೊಗರೆ ಬಳ್ಳಿಮಿಂಚಾಗೆ, ಅಡಿಗಡಿಗೆ ಜಗ್ಗಿಪ ಮೇಳಂಬದ ಮೊರೆಯೆ ಗುಡುಗುವ ಬಲ್ದನಿಯಾಗೆ, ಪೂದೊಂಗಲತ್ತಣಿಂನೆಡೆವಿಡದೆ ಪನಿವ ತನಿಜೇನೆ ಸೋನೆಯಾಗೆ, ಕಾರ್ಗೆತ್ತು ನಾಟ್ಯವಾಡುವ ಸೊರ್ಕಿನ ಸೋಗೆ ನವಿಲ್ಗಳೊಂದು ಕೂಟದಿಂ ಬನಂ ಮನಂಗೊಂಡುದು.

ಈ ತೆಱನೊಂದು ಮಾಡ್ಕೆಯಿಂ ಮಾಧವನೋಲಗದ ಸಾಲೆಯೆಂಬಂತಿರೆ ಕರಂ ಸಿಂಗರಂಬೆತ್ತ ತೋಂಟದೊತ್ತಿನೊಳ್—ಕಂಕಣವಲಯಂಗಳಿಂ ಮನೋಜ್ಞಮಪ್ಪ ಸುಮೇರುವೆಂತಂತು ಕಿಸುವೊನ್ನ ಪಿಂಜರಿಯ ಚೆಂದವಗಲ್ಲ

೨೦ ಕೋಂಟೆಯ ಮೂವಳಸಿನಗಟಿಂಡೊಳಗೆ ಕರ್ಮಣಿಯ ನೆಲೆಗಟ್ಟಿಂ ಪಳಿಕಿನ ಱೆಯ ಭಿತ್ತಿಯಿಂ, ಬಜ್ಜರದ ಜಂತೆಯಿಂ, ರನ್ನದೊಳ್ಗಂಬದಿಂ, ಮುತ್ತಿನ ಜಲ್ಲರಿಯಿಂ, ಪುಷ್ಪಪರಾಗದ ಪೊಸಂತಿಲಿಂ, ಗೋಮೇಧಿಕದ ದಾರವಂದದಿಂ, ಪವಳದ ಪಡಿಯಿಂ, ಮರಕತದೊಂದು ಕಳಸದಿಂ ತಾರಗೆವಟ್ಟೆ ಮುಟ್ಟೆ ನಿಗುರ್ದು ಸೈಪಿನಾಗರಂಬೋಲ್ ಮಣಿಸತ್ತಿಗೆಯ ಮೊಗಮುಂಟಪದ ಬಣ್ಣವಟ್ಟಿಗೆಯ ಅಮಳಗುಟಿಯ ನಂದ್ಯಾವರ್ತದ ತೋರಣದೋರಣದ ಲೋವೆಯು ಮದನ ಗೈಯ ಬಾಗಿಲ್ವಾಡದ ಸಿಂಗರದೊಂದು ದೇಗುಲಂ ಕಣ್ಗೆಡ್ಡವಾಗಿ ರಂಜಿಕುಂ.

ಇಂತು ಸೊಂಪಿನ ಪಂಪಿನಲಂಪಿನೊಂದು ಚೊಕ್ಕಳದ ನೀರ್ದಾಣಮಂ ಬನಮುಂ ದೇಗುಲಮಂ ಕಂಡು ಬಗೆವಗೆಯ ಕಟ್ಟಚ್ಚರಿಯಿಂ ತನ್ನ ಮುತ್ತ ಮಂತುಗೆ—ಅಯ್ಯ ಸುಮತಿ! ಕಂಡೆಯ! ಈಕಟ್ಟುರ್ಬಿನ ಬೇಸಗೆಯ ಬೇಗೆ

೩೦ ಯೊಳಂ ಬತ್ತದೆ ತುಂಬಿ ಬೆಳ್ಳಂಬರಿವ ಬೆಂಚೆಯಂ. ಓ! ನೋಡ್ಪೊಡೀಬನಂ

ಸಂದ ಸುರನಂದನಮನೇಳಿಕುಂ ಚೋದಿಗಮಲೆ! ಇದೆಕೊಳಾತೋರ್ಪುದಾ
ತೋರ್ಪುದೊಂದು ದೇಗುಲಂ ಬೆಳ್ಳಿವೆಟ್ಟಿನ ಪಾಂಗಿಂ. ಆವ ದೇವತೆ
ಯಿರ್ಕುವೆಯೊ? ಆವ ಪೆರ್ಮೆಯ ಗೊತ್ತೊ? ಪೇಟ! ಎಂದು ಬೆಸಗೊಳ
ಲೊಡಂ: ಮಂತ್ರಿಪಂ—ಜೀಯ! ಇಂತಿವೆಲ್ಲಮಾತೋರ್ಪ ಪೊಟಲ್ಗೊಡೆಯಂ
ಸುಮದಂಗೊಲ್ದು ಬಂದೀದೇಗುಲದೊಳ್ ನೆಲೆಗೊಂಡ ಕಾಮಾಕ್ಷೀದೇವಿ
ಯೊಂದು ಮೈಮೆಯೈಸೆ. ಅಂತದಱಿನೀಪುಣ್ಯರೂಪಿಣಿಯ ದರ್ಶನಂಗೈದು
ಬಲಂಗೊಂಡೊಡೆಮಗೆಲ್ಲಂ ಗೆಲ್ಲಮೆಂದಂ. ಆನುಡಿಗೆ ಶತ್ರುಘ್ನಂ—ಅಂತೇಂ
ಸುಮದನಾವ ನಾಡೊಡೆಯಂ? ಏಕೆ ದೇವಿಯಂ ಮೆಚ್ಚಿಸಿದಂ? ಏವಂದಳಾರ
ವಳ್? ಅಂ ತಿಳಿವಂತು ಬಿತ್ತರಿಸಯ್ ಎಂದು ಕೇಳ್ದಂ. ಅದರ್ಕೆ ಸಚಿವಂ—
ಲಾಲಿಸೈ. ಈಭೂಕಾಂತೆಗೆ ಲಲಾಮಮೆಂಬಂತಿರಿದೆ ನಂದನಕೆ ಕೆಲಸೊ    ೧೦
ಳೊಪ್ಪುವುದಹಿಚ್ಛತ್ರಪುರಂ. ಈನಾಡಂ ಸುಮದನೆಂಬೊರ್ವನಱಿಕೆಯ
ರಾಯನಾಳ್ವಂ. ಮುನ್ನಮೊರ್ಮೆ ತನ್ನ ಪೊಟಲನರಿರಾಯರ್ ಸೂಱೆಗೊಳ
ಲೊಡಮದುವೆ ವೈರಾಗ್ಯಮಂ ಪುಟ್ಟಿಸೆ ಹತಭಾಗ್ಯಂ ವನಂಬೊಕ್ಕು ಕಾಮಾಕ್ಷಿ
ಯನೊಲಿಸಲ್ಕೆಂದು ತಪದೊಳ್ ನಿಂದಂ. ತಱಗೆಲೆಯುಂಡು ಮೂಱುಂಬರಿಸಂ,
ನೀರುಂಡು ಮೂಱುಂಬರಿಸಂ, ಗಾಳಿಯನುಂಡು ಮೂಱುಂಬರಿಸಂ, ನಿರಾ
ಹಾರಂ ಮೂಱುಂಬರಿಸಂ, ಕಟ್ಟುಗ್ರಂ ತಪಂಗೈದಂ. ಇಂತು ಪನ್ನೆರಡು
ಕಾಲಂಬರಂ ತಪದೊಳಿರ್ಪುದುಂ, ಕಡಲ್ ಕುದಿವನ್ನಂ ನೆಲೆವಟ್ಟು ಜಗ್ಗು
ವನ್ನಂ, ವನಂ ಬೇವನ್ನಮಾಶಾಧಿಪರ್ ಗೆಂಟುಗೆಂಟಿನೊಳೋಸರಿಪನ್ನಂ,
ತಪಃಪ್ರಭಾವಮೊಂದೇಱ್ಗೆವೆತ್ತು ದೆಸೆದೆಸೆಯೊಳಂ ಮಸಗೆ ಕಂಡು, ಪುರುಡಿಂ
ಮೆಯ್ಗಣ್ಣಂ ಕೀೞ್ಬಗೆಯಿಂ ತಪೋವಿಘ್ನಮಂ ನೆಗೞ್ಚಲೆಂದು ತಱಿಸಂದು,    ೨೦
ಕಾವನಂ ಬರವೇೞ್ದು, ತಾನುಮಾತನುಂ ಮಂತಣದೊಳಿರ್ದಿಂಬೞಿಯುಂ—ಎಲೆ
ಕಾಮ! ಆಮುಂ ನೀಮುಂ ತವಸಿಗಳ್ಗೆ ಪಗೆಗಳಲ್ತೆ! ಆರಾಯನ ತಪಕೆಂತುಂ
ಬನ್ನಮನೊಡರ್ಚಯ್. ಅಚ್ಚರಸಿಯರು ನಿನ್ನ ಬೆಂಬಲಕ್ಕೆ ಬೞಿಯುಟ್ಟುವಂ,
ಎಂದಂ.

ಮನೋರಮೆ—ಅಣ್ಮ! ನಾಕಲೋಕದ ದೇವರ್ಕಳ್ಗಮೀನರಲೋಕದ
ತವಸಿಗಳ್ಗಮಾವ ಮೊಱೆಯೊಳ್ ಪಗೆ ಪೇೞ್?

ಮುದ್ದಣಂ—ಓಚ್ಚೇರೆಗಣ್ಣ ಪೆಣ್ಣೆ! ಮೊರೆಯುಂ ಪುದುವಂ ಪಾರಿ
ತಿಲ್ಲಕ್ಕುಂ; ಜತಿಗಳೊಳೊಂದು ಪುಟ್ಟುವಗೆಯೈಸೆ! ನೂಱೇಂ? ನಾಡಿಗರ್
ದಿನದಿನಂ ಬೇಳ್ವೊಂದು ಹವ್ಯಮನುಂಡುಂಡು ಸವಿಗೊಂಡ ಬೋಡೆಯ
ರೆತ್ತಾನುಮೊರ್ವನೀನಿಚ್ಚವಲಿಯೆಡೆಯಿಂ ಪುರುಳಾಗ್ಗಣದೆ ಪಜ್ಜೆವಿಟ್ಟು ತಿರುಳಂ    ೩೦

ಸಮಂತು ಪುರುಳಂ ತೋಱುಪ ಜೋಗವೆಣ್ಗೆ ಸಂಚುಗೈಯಲೊಡಂ ಕಱುಂಬಿ ನಿರ್ನೆರಮೀವುಜ್ಜುಗಕ್ಕೆ ತಡೆವರ್ಪರ್. ಕಳ್ಗುಡಿದರೇಂ ಮಾಡರೊ? ಸೂಱುಂ ಜನ್ನದೊಂದು ಬಲ್ಮೆಯಿಂ ಸಗ್ಗದೊಳ್ ಬಾಳ್ವಿಂದಿರನುಮೀಜೋಗವಟ್ಟೆಯುಂ ಕಂಡಿರಂ.

ಮನೋ—ಉಂ! ಪೋಕೆ. ಮುಂತೇಂ ಮುಂತೇಂ? ಕಾವನೇನೆಂದಂ?

ಮುದ್ದ—ಆಱೆನೆಂಬನೆ! ಸುಮತಿ ಶತ್ರುಹಂಗುಸಿರ್ದುದಂ ಕೇಳ್.

ಸುಮತಿ—ಕೇಳಯ್! ಆಗಳ್ ಮದನಂ ತಳ್ವದೆ ಕೋಲ್ಬಿಲ್ಗಳಂ ಕೊಂಡು ಪೊಱಅಡಿಯೊಳ್ ಬರ್ದಿಲರೊಡೆಯಂಗೆ—ಕಾಣಿರೆ ತನ್ನ ಬಲ್ಲಾಳ್ತನಮಂ! ಜಗದಱಕೆಯ ಸಾಂತೆನರವೆಣ್ಣಾಗನೆ! ಬಾನಗಲಂ ತೊಟಲ್ವ ಚೆಂಡವಂ ಕಡೆಗೆ
೧೦ ತಾರೆಯುಂ ಮಱೆವುಗನೆ! ಏತಱ ಮಾತೊ! ಎನ್ನ ನನೆಯಂಬಿನ ಮೊನೆಗೆ ಸುಗಿದಹಲ್ಯೆಯುಂ ನೀಮೆ ಶರಣ್ಬೊಕ್ಕುದೇನಱಿಯದುದೇ! ಪೋ ಬಡಗೊಂದೆ ದವಸಿಯೇವಂ? ಆಜೋಗವಟ್ಟಿಗೆಯುಮಾಬೆಳ್ಜಡೆಯುಮಾಬೆಂಬೂದಿಯ ಪೂಸುಮಾಚೆಂಗಾವಿಗಪ್ಪಡದುಡೆಯುಂ ಮೇಣಾಪಾಸುಂದೊವಲುಮೆನ್ನೀ ಎಸುಗೆಯ ಕೂರಂಬಿನ ನನೆಯೊಂದು ಕುತ್ತೆಸಳ ಜಾಲೆಗೆ ಸೀಕರಿವೋಗದೇಂ ಮಾಣ್ಗುಂ. ಸುತ್ತೇಂ? ಎನ್ನೊಂದುಗೆಯ್ಮೆಯಿನಾಗಾವಿಲ ಜೋಗಿಯನರ್ದೆ* ಯನುಗಿಬಗಿಮಾಡಿ ಬಗೆಯಂ ಕದಡಿ ತೋಱಿದ ಗಾರಿಗೆಗಂಪಿಗೆ ಬೆನ್ನನೆ ಬರ್ಪ ಕುನ್ನಿಯಂತಿರೆ ನಿನ್ನಾರಂಭೆಯರ ಬೆಂಗೊಂಡು ಬರ್ಪಂತು ಮಾಡದಿರೆ ಬಿಂಕದ ಬೀರನೆ! ಸಂತಮಿರೆಂದು ಪೂಣ್ದು ಕಾಮಂ ಪ್ರಕಾಮಂ ತನ್ನ ಪುಸಿವಡೆವೆರಸು ತಪೋವನದತ್ತಣ್ಗೈತರುತುಮಿರ್ದಂ. ಆತಂಗೆ ಬೆಸ್ನೊಳೆ ಊರ್ವಶಿ, ರಂಭೆ,
೨೦ ಮೇನಕಿ, ತಿಲೋತ್ತಮೆ, ಮಂಜುಘೋಷಿ, ಘೃತಾಚಿ ಮುಂತಪ್ಪ ಅಚ್ಚರಸಿಯರ ಪೆಣ್ಬಡೆ ನಡೆತಂದುದು.

ಅನ್ನೆಗಮಾತನ್ನಚ್ಚುಮೆಚ್ಚಿನ ಚೆನ್ನಿಗಗೆಳೆಯಂ ಪಗೆಯೊಳೆತ್ತಿವರ್ಪೊಂದೊಸಗೆಯಂ ಮಱುದುಂಬಿಗಳೆಂಬೋಲೆಕಾಱರ ಬಗೆಯೊಳಱಿತು ಸಂತಸಮುಗುಂದಲೆಯಾಗೆ ಪಡೆವೆರಸು ನಡೆತರ್ಪ ಬಿತ್ತೆಗನುಕ್ಕೆವಕೆಂದು ಬಸಂತಂ ಮಡಲ್ತು ದಾಂಗುಡಿಯಿಡುವೆಳವಳ್ಳಿಯೆ ಬಳ್ಳಿದೋರಣಮಾಗೆ ಪಚ್ಚನೆ ಬೆಳೆದ ಬಾಪಲೆಯೆ ಪೊಸಕಾವಣಮಾಗೆ ಕಮ್ಮಲರ್ಜೊಂಪಮೆ ಜಲ್ಲರಿಯಾಗೆ ಪಣ್ತುತೊಂಗುವ ಪಣ್ ಫಲಾವಳಿಯಾಗೆ ಸಮೆದೊಂದೋಲಗದ ಶಾಲೆಯೊಳ್ ಸುರಿವ ಜೇಂಬನಿಯ ಸಾರಣೆಗೈದುಮುದಿರ್ವ ಚೆಂಬೊಗರಲರ್ವುಡಿಯ ಬಣ್ಣವಳ್ಳಿಗಳಂ ಬರೆದುಮಸುಗೆಯ ಮಾಮರನ ಚೆಂದಳಿರ ಗದ್ದುಗೆಯಂ ನೇರ್ಪಡಿಸಿಯುಂ
೩೦ ಬಿರ್ದುವರ್ಪ ಪೊಳ್ತುಂ ಪಾರುತುಮಿರಲೊಡಂ—ಆವೇಳೆಗೆ ತನ್ನಾಗಮನಮಂ

ನೆಱೆ ತಿಳಿಪಲ್ಕೆಂದು ಪೂಗಣೆಯನಟ್ಟಿದ ದಕ್ಷಿಣಾನಿಲಂ ಮುಂತೆವಂದು ಸೊಗದ
ಸುಗ್ಗಿವೆಸಱೋಲಗಸಾಲೆಯ ಬಾಗಿಲ್ವಾಡದೊಳೆ ನಿಂದಿರ್ಪಾ ಬಸಂತನಂ ಕಂಡೆ
ಱಗಿ ತಮ್ಮಾಣ್ಮನಟ್ಟಿದ ಪಾವುಡಮನೊಪ್ಪಿಸಿ—ಜೀಯ! ಈನೆಲೆಯೊಳೊರ್ವಂ
ಪಗೆ ಜೋಗಿ ಬೈತಿರ್ಕುಂ ಗಡ! ಆತನಂ ಬಾೞ್ದಲೆವಿಡಿವೊಡೀಗಳೆಮ್ಮಾಕಾವ
ರಾಯುಂ ದಂಡೆತ್ತಿ ಬರ್ಕುಮಂತದಱನೀಯೊಸಗೆಯಂ ನಿಮ್ಮೊಳಾಡುವು
ದೆಂದೆನ್ನಂ ಕಳಿಪಿದನೆಂದಱಿಕೆಗೈದಂ.

ಆನುಡಿಗೆ ಬಸಂತಂ ಸಂತಸದೊಂದು ಕೌವರೆಯೊಳ್—ಬಂದನೆ! ಲೇಸು!
ಲೇಸು! ಅಂತೆಂದೆ ಏಪೊೞ್ತುಂ ಪಾರ್ದು ನಿಂದಿರ್ದೆಂ. ನಿಮ್ಮಾಳ್ದಂಗೆ
ಮೇಲಕ್ಕೆ! ಎಂದು ಬಣ್ಣನೆಯೆರೞ್ನುಡಿಯಿಂ ಮನ್ನಿಸಿ ದೂದುವಂದಾಗಾಳಿಗೆ
ಪಡಿಬೀಡಾರಮಂ ಕುಡಿಸಿದನಿತಱೊಳೆ ಮುಂದೆಸೆಯ ಪಡಿಯೊಳ್—ಇದೆ! ೧೦
ಬರ್ಪಂ! ಎಂಬೊಂದುಲಿ ಕೇಳಿಸಲೊಡಂ; ಸಸಂಭ್ರಮಂ ಲತಾವನಿತೆಯರ್
ಪೂವಲಿಗೆದಱೆ, ಬಲ್ವಕ್ಕಿಗಳ ತೋರದನಿಯೊಸಗೆವಱೆಯೆತ್ತಂ ಮೊೞಗೆ,
ಮಯೂರಿಗಳ ಲಾಸ್ಯಮೊಂದೇೞ್ಗೆವೆತ್ತಿರೆ ಮಾಧವಂ ತನ್ನ ಗಿಳಿಗಳ ಮಱಿ
ಗೋಗಿಲೆಗಳ ಪಸಾಯ್ತರಿಂ ಕೂಡಿ ಭೋಂಕನೆೞ್ದು ಇದಿರ್ವಂದು ಗಾಡಿಯಿಂ
ಬರ್ಪ ಚೆನ್ನ ಪೊಂಗನಂ ಕೈಗೊಟ್ಟು ಕೂಡಿವಂದೋಲಗದ ಸಾಲೆಯಂ ಪುಗಿಸಿ
ಎಳೆದಳಿರ ಸಲ್ವಾಸಿನೊಳ್ ಕುಳ್ಳಿರಿಸಿ ತಾನುಮೊತ್ತಿನೊಳ್ ಮಂಡಿಸಿ ಸೊಗಂ
ಗೇಳ್ದು ಕಿಱಿದಾಸುಂ ಪೊೞ್ತುಪಚರಿಸುತಿರ್ದಂ.

ಇಂತಿರ್ಪುದುಂ ತನ್ನ ನಲ್ಗೆಳೆಯನೊಂದು ಸಪರ್ಯೆಯಿಂ ಸಂತುಷ್ಟನಾಗಿ
ದಪ್ಪಗಂ ಪಡೆವೆರಸುೞಿದ ಕಡೆನಗಲಸಿರುಳಂ ಪುಸಿಗಾಳೆಗದುಜ್ಜುಗದೊಂದೆಣಿ
ಕೆಯಿಂ ಕೞಿದು ಪೊೞ್ತಱೆ ತನ್ನಂಕದ ತುೞಿಲಾಳ್ಗಳ ಬಲ್ಗೈಬಂಟನಪ್ಪ ೨೦
ತೆಂಗಾಳಿಯಂ ಕರೆದು—ಅಯ್ಯಾ! ಇದೆ ಕೆಲದ ಬನದೊಳೊರ್ವಂ ತವಸಿ
ಎಮ್ಮೊಳಾದ ಪಗೆಯಿಂ ಮೂಗುವಟ್ಟು ಕೆಮ್ಮನಿರ್ಕುಂ. ಅಂತದಱಿಂ ನೀಂ
ಪೋಗುತುಮೆಮ್ಮಾಳ್ತನದಗ್ಗಳಿಕೆಯನೆಮ್ಮೀಪಡೆಯ ಪವಣನಣಿಯಱವೊರೆದು
ಎಮ್ಮೊಳ್ ಪಗೆಗೊಂಡು ನಿರ್ನಿಮಿತ್ತದಿಸಲರಂಬಿಂಗೆ ತಲೆಯುಂ ಮಾಱು
ಗುಡದೆ ಮಱೆವಾೞ್ವುದೊಳ್ಳಿತೆಂದು ನಯಂಬೇೞ್ದು ಬಾರೆಂದು ನಿರವಿಸಿ
ದೂದಟ್ಟಿದಂ. ಆನುಡಿಗೊಪ್ಪಿ ದೂದುಗಾಱನಲ್ಲಿಂ ತಳರ್ದು ಓರೊಂದು
ನೆಲೆಯ ಕಾತ ನೇಱಿಲೆಂಬ ತಿಟ್ಟನೇಱಿಯುಂ, ತಳಿರ್ತ ಚೆನ್ನಸುಗೆಯೆಂಬ
ಜಾದುವೆಟ್ಟನಿೞಿದುಂ, ಪೂತ ಬಳ್ಳಿವೊಡಱೆಂಬ ಸೆಱುವೊಳ್ ಸುಸುಳ್ದುಂ,
ಕಱಂಗಿದ ತಮಾಲಮೆಂಬ ಕಾಡ್ಪೊಜ್ಜಮಂ ಪಾಯ್ದುಂ, ತೂಗಿ ತೊನೆವ
ಪೂಗೊಂಚಲೆಂಬ ಬಳಿಯುಂ ಕೊಂಡು ಮೆಲ್ಲಮೆಲ್ಲನೆ ತವಸಿಯ ಪೊರೆಗೈತಂದಂ. ೩೦

ಅಂತು ಬಂದು ಕಟ್ಟಿದಿರ ಜೋಗಿಯಂ ಕಂಡು ಭುಗಿಲೆಂದುಂ ಭೋಂಯೆಂದುಂ ರಯ್ಯೆಂದುಂ ಸುಯ್ಯೆಂದುಂ ತಮ್ಮೊಡೆಯನಾಣತಿಯಂ ಪೇೞಲೊಡಂ; ಯೋಗಿ ತಾಂ ಮಱುನುಡಿಯುದೆಯುಂ ತನ್ನಂ ಮನ್ನಿಸದೆಯುಂ ಮಿರ್ಪುದಂ ಕಂಡು, ಕಿನಿಸಿಂ—ಆಃ! ನುಡಿಯಂ ಗಡ! ಬಿಗುರ್ಪು ಗಡ! ಏನೆಂಬ ಪೆಂಪೊ! ನೋಡುಗೆ ಎಮ್ಮೊಂದು ಬಲ್ಮೆಯಂ! ಈಗಳೆ ಸೆಱೆವಿಡಿದು ಕೊಂಡುಯ್ದು ಕಾವಂಗೊಪ್ಪಿಸುವೆನೆಂದೊಡನೆಯೆ ರಾಜಯೋಗಿಯಂ ಮೇಲ್ವಾಯ್ದಂ. ಅಂತು ಬಿಜ್ಜಿನೆ ಮೇಲ್ವಾಯ್ದುದಂ ಕಂಡರುಂಟು; ತಪದೊಂದು ಬೇಗೆಯ ಸೂಡಿಂ ನಾಡೆ ಪೊತ್ತಿ ಸೀಕರಿವೋದುದಂ ಕಂಡರಿಲ್ಲ; ಪಲವೇಂ. ಇಂತು ಬಂದ ತೆಂಗಾಳಿ ನಡೆಗೆಟ್ಟು ಕಾಣದಪ್ಪುದುಮಿತ್ತಲ್
೧೦ ಕಾವನನಿನಿವಿರಿದುಂ ಪೊೞ್ತು ಊಟಿಗದೊಂದು ನೆವದಿಂ ಪೋಗಿಯುಂ ಬಾರದ ಗಾಳಿಯಿರವಂ ಬಗೆದು, ಎಂತು ಬಡಕಿತ್ತಡಿಯ ಲಂಚದ ಸಂಚಿಂಗೊಡಂಬಟ್ಟು ಮಾಣ್ದನೆಂದು ತಱಿಸಂದು—ಆಃ! ಈಪಡೆಯಿನೇವುದೆಂದು ಕಾಯ್ಪಿಂ ತಾನೆ ಕೈದುವೊತ್ತು ನೆರೆಯ ಬನಕ್ಕೈತಂದು ಸಮಾಧಿಯೊಳಿರ್ಪರಾಯನಂ ಕಂಡಂ.

ಇಂತಿರೊಂದು ಮಾಡ್ಕೆಯಿಂ ಗಟ್ಕನೆ ಬಂದು ನಿಂದಿದಿರ ಜರೆಯ ನರೆಯ ಮಡಲ್ತ ಸೆರೆದುಱುಗಲ ಸುರ್ಕುಂದೊವಲ ಅಸಿದೊಡಲ ಬಱುವಂ ಜೋಗಿಯಂ ಮಾಲಿಸುತುಂ—ಆ! ಈಯೆಲ್ಲೂಡಿಂಗೇಕೊ ಎಮ್ಮೊಳ್ ಪಗೆ ಮಾಡ್ಪೊಂದು ಬೆಸನಂ? ಓ! ಆನುಮೇನೆಂದು ಪುರ್ಚುಗೊಂಡು ಕೈದುವೊತ್ತು ಕಾದುವೆನೋ? ತೊಂಡುಗೆಡೆವ ಪುರುಳಿ ಸಾಲದೆ? ಒಚ್ಚತಂ ಕುಕಿಲ್ವ
೨೦ ಕೋಕಿಲೆ ಸಾಲದೆ? ತಣ್ಣನೆ ತೀಡುವ ಬನಗಾಳಿಯೊಂದು ಸಾಲದೆ? ಎಂದು, ಮತ್ತಂ ಪರಿಭಾವಿಸಿ—ಒಲ್ಲೆನೊಲ್ಲೆನೀಲಂಚವಣಿಗರಂ. ಆಗಳೆ ಸಂಧಿಗೆಂದು ಬಂದ ತೆಂಗಾಳಿ ಏಂ ಗೆಯ್ಗುಂ. ಉಗುರಿಂ ಚಿವುಡಲ್ತಗುವೊಂದು ಕಜ್ಜಕ್ಕೆ ಕೊಡಲಿಯೊಂದು ನೆರಮಂ ಪಾರ್ವರೆ? ಸಂದೊಂದಂಬಿನೊಳೆ ನೋಯಿಸದೆ ಬಿಡೆನೆಂದು ಮಱೆಯೊಳೆ ನಿಂದು ಬಾಣಮನಿಸಲೊಡರ್ಚಿದಂ. ಅಂತು ಬಗೆದಱಿತು ಕಾವಂ ಕರ್ಬುವಿಲ್ಲಂ ತುಡುಂಕಿಯುಂ, ತುಂಬಿವೆದೆಯನೇಱಿಸಿಯುಂ, ಪೂಗೋಲ್ಗೆ ಕೈನೀಡಲೊಡಮೆನಗೆ ತನಗೆಂದು ಮೂಡಿಗೆಯಿನೊಂದಱ ಬೆಂಬೞಿಯೊಳೊಂದು ತಲೆದೋಱಿದುವು. ಪಿಡಿವಾಗಳೊಂದು; ಪಿಡಿಯಿಂ ತುಡುವಾಗಳೆರಡು; ತೊಟ್ಟನೆ ಸಿಡಿವಾಗಳ್ಮೂಱು; ಗುಱಿಯಂ ಕೆಡೆವಾಗಳ್ ನಾಲ್ಕು; ಪಂಚಾಯುಧನ ಪೊಸಮಸೆಯ ವಿಶಿಖಂಗಳ್. ಮುನ್ನಮೋರೊಂದು ಮತ್ತ
೩೦ ಮೀರೆರಡು ಮೇಣ್ ಮೂಮೂಱು ಬೞಿಕ್ಕಂ ನಾಲ್ನಾಲ್ಕು ಕಡೆಯೊಳೈದೈದು

ತಾವರೆಯ ಕರ್ಣಿಯಿಂದಿಲ ಮಲ್ಲಿಗೆಯ ಮಾವಿನ ಪೊಸಅಸುಗೆಯ ಕೂರಂಬುಗಳ ಳುಂಬಂ. ಆದೊಡಮೇನೊ! ದೈವದ್ರೋಹಿಗಾವುದು ತಾಂ ಸಲ್ಗುಂ. ಈ ಮಾಷ್ಕೆಯಿನಾರ್ದೆಚ್ಚ ಮಲರಂಬುಗಳ್ ಗೋಱುಗಲ್ಗೆ ತೆತ್ತಿಸಿದ ಕಲ್ಲಂಬುಗಳ ಪ್ಪುದುಂ ಮಯಣದ ರೂಪೊಂದು ಕಿಚ್ಚಿನಿದಿರ್ಚಿ ಮೆಯ್ಯುಟಿವಂತಿರೆ ಮದನಂ ಪೋಗಿ ಯೋಗಿಯಂ ಕೆಣಕಿ ಕಡೆಯೊಳ್ ತಪದುರಿಯಿನಳವಟಿದಂ.

ಆವೇಳೆಯೊಳೀತಂಗೆ ನೆರವಾಗುತುಂ ಬೀಡಿಕೆಯಿಂ ಕಟ್ಟುರದಿಂ ಪೆಣ್ಬಡೆಯು ನೀಱುವೆಣ್ಗಳ್ ಬಂದೊದವಿದರ್.

ಎಸೆವಲತಗೆಯಿಂ ಪೊರೆದ ಮೆಲ್ಲಡಿಯ ನಡೆಯ ಬೆಡಂಗಿನೊಂದು ಬಾವದಿಂ ನೆಲೆವಟಿಯ ಕಲ್ಗಳ್ಗೆ ರಾಗಮನೊಡರ್ಚಿಯುಂ, ಸೂಡಿದ ಮುಡಿಯಿನಡಿಗಡಿಗೆ ಸೂಸುವ ಬಿಡುಮಲ್ಲಿಗೆಯ ಕಂಪಿನೊಡವರ್ಪಾಱಡಿಗಳ್ಗೆ ನಡೆವಳ್ಳಿಯ ಬೆಮೆಯಂ ಪುಟ್ಟಿಸೆಯುಂ, ಪೆಱನೊಸಲೊಳ್ ಕಱೆಯ ಪಾಂಗಿನಿಂದಲೆವ ಮುಂಗುರುಳಂ ನೂಂಕೊತ್ತುವೊಂದು ನೆವದಿಂ ತೋಳ ಮೊದಲಂ ತೋರ್ಪಡಿಸಿಯುಂ, ಕೆಕ್ಕೆಯ ಕತ್ತುರಿಯ ಮಕರಿಕೆಗಂಡಲೆದು ಮುಸುಱಲವ್ವಳಿಸುವ ಮಱಿದುಂಬಿಯ ಕೂಟಮಂ ಮುಱಿಮುಱಿದು ನೋಟ್ಪ ಭಂಗಿಯಿಂ ತಮ್ಮ ಕೊನೆಗಣ್ಗಳ ಕಾಂತಿಯಿಂ ದೆಸೆಯನೆತ್ತಂ ಬೆಳಗಿಯುಂ, ಬಿಣ್ಪುವೆತ್ತ ಬಟ್ಟ ಮೊಲೆಗಳೆರ್ದೆ*ಯನೇಱೊತ್ತಿ ನಿಗುರೆ ಘನನಿತಂಬಂ ಕದಕ್ಕದಿಸೆ ಪುಸಿನಡು ಬಳ್ಕೆ ಬಂದು ತಪದೊಳಿರ್ಪ ರಾಯಂಗೆ ಕಟ್ಟಿದಿರೊಳಾದರ್. ಆಪೊಟ್ತು ಕಾಮಂ ತನಗೆ ಬೆಂಬಲಮಾಗೆ ನಡೆತಂದ ದಂಡಂ ಕಂಡಳವಿಯೊಳಾರ್ದು ಸಾರ್ದು ಬಿಲ್ಮೊಱುವನ್ನಂ ತುಂಬಿವೆದೆ ಕಡಿವನ್ನಂ ನಿಷಂಗಂ ಮುಗಿವನ್ನಂ ಐವಡಿಗಣೆಯಿಂ ಮಱುವಕ್ಕದೊಳಿದಿರ್ಪಾರಾಯನನಿಸುತಿರ್ದಂ. ೧೦ ೨೦

ಇತ್ತಲ್ ಮುಂದೆಸೆಯೊಳ್ ಬಂದ ಸಂದ ಸಿಂಗಾರಿಯರುಂ ಸಂದಣಿಸಿ ಕಾದಿದರದೆಂತೆನೆ :—

ಅವರೊಳೊರ್ವಳ್ ಸೋರ್ಮುಡಿಯ ಸೊರ್ಕಿನ ಮಂಜುಘೋಷಿಯೆನಸುಂ ದೂರದೊಳಿರ್ದ ರಾಯಂಗೆ—ಎಲೆ ಮಾರಾಯ! ಇದೇತಱ ಮಾಟಮೊ! ಮಡದಿಮಕ್ಕಳಂ ಪೊಡವಿಯೈಸಿರಿಯುಸುಟಿದೀಕಾರಡವಿಯೊಳ್ ಮೂಗುವಟ್ಟಿರ್ಪೊಂದು ಹದನೇಂ! ಕಲಿ ಸೋಂಕಿದಂತಿರೀಕರ್ಮಲೆಯಂ ಸೆಱೆ ಪೊಕ್ಕು ಬಾಟ್ವ ಬವಣೆಯದೇನಯ್? ಪುಲಿಯಿರ್ಕುಮಾನೆಯಿರ್ಕುಂ ಚಲದಂಕರ ಲೆಂಕ! ನೀನೆ ಮಂಕಡನಾಗ! ಎಂಬುದುಂ;

ಅನಿತಱೊಳ್ ಮತ್ತಮೊರ್ವಳ್ ಕೊಂಕುಗುರುಳ ಬಿಂಕದ ರಂಭೆ ತನ್ನ ಮೇಲುದಂ ಬರೆಸೆಳೆಯುತುಂ ತಮ್ಮವರ್ಗೆ ಸುಟ್ಟಿಸಿ—ನೋಡಿರೆ! ಕಾಯ್ಪು ೩೦

ಬೇಸಗೆಯ ನೇಸಱ ಸೂಡೆನ್ನದೆ ತೀಡುವ ಕುಳಿರ್ಗಾಳಿಯ ಕೋಡೆನ್ನದೆ
ಕಱೆವ ಕಾರ ಸೊಟ್ಸರಿಯ ಜಿನುಂಗೆನ್ನದೆ ಮರವಟ್ಟು ಮೋನದಿಂ ಪುರ್ಚು
ಗೊಂಡಸಂತುಮಿರ್ಪ ಕಾಡಾಡಿರಾಯನೊಂದು ಗೆಯ್ಮೆಯಂ! ಎಂದು;
ಮುಂದೆ ನಿಂದು ಸುಮದರಾಜಂಗೆ—ಪೋ! ಮಾಣೆಲೆ ಜೋಗಿ! ಏವುದೊ
ನಿನ್ನೀತಪಮೇವುದೊ ಜಪಮೇವುದೊ ಜಾನಂ? ಮುದಿರ್ದ ಕಣ್ಣೆವೆಯಂ
ಬಿದಿರ್ಚಿ ನೋಡೆಮ್ಮಂ. ಇದೆ! ಬರ್ದಿಲ ನಾಡಿಗರ್ಗಂ ನೋಡಲ್ಬಾರದಚ್ಚ
ರಸಿಯರ ನಲ್ವೆಂಡಿರ್ ನಿನ್ನ ನಾರಯ್ವೊಡೆಂದು ಬಂದು ನಿಂದಿರ್ಪರ್. ನೀನಿಂತು
ಗುಮ್ಮಸಂತಿರೆ ಕಣ್ದೊಳಿಸಿಂ ದಿಟ್ಟಿಸದಿರ್ಪುದೇಂ? ಆವ ಸೊಗದ ಭೋಗದ
ಬಿಪ್ಕೆಯಂ ಕಿಪ್ತ್ರತ್ತ್ರಲಾಟಿಪೆಯೊ? ತಿರೆಯೊಳ್ ಬಲ್ಲರ್ಗೆ ಕಾಟದ ಜೇಟದ
೧೦ ಕೂಟದೆಳವೆಂಡಿರೊಡನಾಟದಿಂ ಪೆಱತು ಭೋಗಮುಂಟೇ? ಬಳ್ಳಿಯೊಳೆ ಪಣ್ತು
ತೊಂಗಲ್ದೊಂಗುವ ತೊಂಡೆಯ ಕಟಿವಣ್ಗೆ ದೊರೆವರ್ಪಾತುಂಬುಂಜವ್ವನದ
ನಲ್ವೆಂಡಿರ ಚೆಂದುಟಿಯಂ ಮಾಣ್ಮಾಣೆಂಬೊಂದು ನೆವದಿಂದೊಚ್ಚತಮು
ಣ್ಮುವ ಕಾಮಿನಿಯ ಕಂಠರುತಿಯ ಹೂಂಕೃತಿಯುಪಚಾರವಾಗೆ ತುಂಬುಂ
ಗೊಡನೊಳಿಟ್ಟೊಂದು ನುಣ್ಮಟಿಲ್ವರಲಿಂ ಪುಟ್ಟುವ ಕುಳ್ಕಳೆಂಬ ಮೆಲ್ಲುಲಿಯ
ಪಾಂಗಿನಿಂ ಕಂಠಮೂಲದೊಳಡಿಗಡಿಗೆ ಕಳಕಳನಾದನೊದವೆ ಮುಂಬಲ್ಗಳಿಂ
ಮೆಲ್ಲನೆ ಕರ್ಚಿಯುಂ, ತನಿರಸಂ ಸೋಱುವನ್ನಂ ನಾಲಗೆಯೂಱಿ ಸೀಯೆಂದು
ಚುಂಬಿಸಿಯುಮಂತಂತಾಗಳಾಗಳೊಸರ್ವ ಅಧರಾಮೃತಮಂ ನಿಚ್ಚಂ ತಣ್ಣನೆ
ಸವಿವ ಬರ್ದುಳ್ಳರ್ಗೆ ಬರ್ದಿಲರೇಂ ಪಾಸಟಿಯೆ? ಅಂತುಮಲ್ಲದೆಯುಂ ತನ್ನ
ಏಱುಂಜವ್ವನದ ಕುಱುಪಿದೆಸೆ ಏಱಿಟ್ದು ಮೇಲುದುವಂ ಪಾಱೆ ನೂಂಕುವ
೨೦ ಕಾವನಾಟದ ಸೆಂಡೆಂಬಂತು ತೋರ್ಪ ಜೋಡೆಯ ಬಟ್ಟ ನೆಲೆಮೊಲೆಗಳಂ
ತಳ್ತು ಪಿಡಿದೌಂಕಿಯುಂ ಮತ್ತಂ ತನ್ನಂ ಸೋಂಕಿ ಪಾಯ್ವ ಕಾದಲೆಯಂ
ಬರೆಸೆಳೆದೊಳಅಟ್ಟಿ ನುರ್ಗುನುಱಿಯಪ್ಪಿನಂ ಮಿಡಿದೊಡೊಡೆವಮಳ್ಮೊಲೆ
ಯೊಡೆದು ಪಾಲ್ ಸುರಿವಿನಂ ತನ್ನೆರಡುಂ ನಿಡುದೋಳ್ಗಳಿನಮರ್ದು ಬಿಗಿದು
ತಳ್ಕೈಸಿಯುಂ, ಮೇಣ್ ಕಾಡುವ ಕಾವಂ ಕೋಡುವ ಕಮ್ಮೆಲರ್
ಮೂಡುವ ಚೆಂದವಂ ನೇಹಿಗರಾಗೆ ನೆಲೆವಾಡದ ತೂಗುಂಮಂಚಮೆತ್ತಂ
ಅಂಚೆದುಪ್ಪುಟ ನಲ್ಲಾಸೆತ್ತಂ ಬಸದ ಬಳ್ಳಿವಾಡಮೆತ್ತಮೆಳದಳಿರ ಮೆಲ್ಲಾ
ಸೆತ್ತಂ. ಮತ್ತಂ ಜತೆಗೊಂಡು ಸಾರ್ದು ಇನಿವೊಬ್ತಂ ಲಲ್ಲೆವಾತಿನ ಸೊಲ್ಲ
ಸೊಗದೊಳಿರ್ದು ಮೆಲ್ಲಮೆಲ್ಲನೆ ಮೈಸಾರ್ಚಿ ನಡುವಂ ಸಡಿಲ್ಚಿ ನಿಱಿಯಂ
ಬಿದಿರ್ಚಿ ಬಗೆಬಗೆಯಿಂ ತನುತನುವನೊಂದುಗೂಡಿ ಸೆರೆವ ಜಾಣ್ಮೆಯ ಹೆರಳಿಗರ
೩೦ ಭೋಗಮೆ ಭೋಗಮಲ್ತೆ! ಅಂತಿರೆ, ಗಾವಿಲ! ನಿನ್ನೀ ಮೂಱುಂದೆವಸದ

ಬಾೞ್ಕೆಯಂ ಸೊಗದೊಳಾಗಿಸದೆ ಜೋಗದೊಂದು ಬೆಮೆಯಿಂ ಬಾರ್ತೆಗೆಟ್ಟೀಕಾಡಂ ಪೊಕ್ಕು ನಿರ್ಜರಂ ಚಿಃ! ಸರಿಕರಡಿಗಳ ಬಾಯ್ಗೆ ತುತ್ತಪ್ಪೆಯ? ಬಾ! ಬಾರೆಂದು ಕರೆದಳ್.

ಮತ್ತಮಾಪೊತ್ತಿಂಗೆ ಬಡನಡುವಿನ ಮೇನಕೆ ಸಂಚುಗೆಯ್ವ ರಂಭೆಯಂ ಮಾಣಿಸಿ ತಾಂ ಮುಂಬರಿದುಮಾರಾಯಂಗೆ—ಎಲೆಲೆ ಕಾಮರಾಜ! ಇಂತೊಂದುಂ ಬೆಸಮೇಂ! ನಿನ್ನನ್ನರಪ್ಪ ಸಡುವರಯದ ಜವ್ವನದ ಗಂಡುಗಲಿಗಳೀತೆಱನೊಂದು ಬನ್ನದೊಳ್ ಬಾೞ್ವರೆ? ನಿನ್ನನುೞಿದೆವಿಮ್ಮಾ ಪೆಣ್ಗಳ ಮನಮಾರಂ ಸೇರ್ಗುಂ! ಎಲೆ ಚೆನ್ನಿಗರಾಯ! ಎನ್ನೊಳ್ ಮುನಿಸೇನಯ್? ತನ್ನಾಣೆ! ಅರೆಗಳಿಗೆಯೊಳೆ ಕಾವನಾಟದೊಂದು ಮಾಟದಿಂ ನಿನ್ನಂ ಸಂತಸಂ ಬಡಿಪೆಂ. ಇಂತು ನಿನ್ನನೆ ನಂಬಿ ಸೋಲ್ತು ಬಂದಳೊಂದು ಜವ್ವನದ ಗಾಡಿಯ ಮೋಡಿಯಂ ಬಗೆಯದೆ ಸವಿನುಡಿಯಿಂ ನುಡಿಯಿಸದೆನಸುಂ ಕಟಾಕ್ಷಿಸದೆ ದೆವ್ವ ಮಾಳ್ಪಂತಿರೆ ಗುಱುಗುಮ್ಮನೆ ಬೆಕ್ಕಸಮಾಗಿರ್ಪರೆ! ತಪಮಂ ಸುಡು! ಮೋನಮಂ ಬಿಡು! ಬಳ್ಳಿವನೆಗೆ ನಡೆ! ಕಾಮಸಾಮ್ರಾಜ್ಯದೊಡೆತನಮಂ ಪಡೆ! ಇದೆಕೊಳ್ ನಱುದಂಬುಲಂ! ಹಾ! ಹಾ! ಇನಿವಿರಿದುಂ ಕಾಲಂ ಬಿಸಿಲೊಳಿರ್ಪಿನಂ ಪಿತ್ತಂ ನೆತ್ತಿಗೇಱಿತಕ್ಕುಂ; ಬಾರಯ್ ನೀರೆಱೆವೆಂ ಮೀಯಿಸುವೆಂ, ಪೂಸುವೆಂ, ಬಾವನ್ನದಿಂ ತಿಮಿರ್ವೆಂ, ತಿಲಕಮನಿಡುವೆಂ, ತನಿವಣ್ಗಳಂ ತಿನಲೀವೆಂ, ನಿನ್ನನಗಲದಾವಗಂ ಸೇವಿಸುವೆಂ. ಎನ್ನ ಪ್ರಾಣೇಶ್ವರಾ! ನಿನಗಿಂ ಶಶ್ವತ್ಸುಖದ ಬಟ್ಟೆಯಂ ತೋಱುಪೆಂ ಎಂದಳ್.

ಆಗಳ್ ಕಿಕ್ಕಿಱಿದ ಕಕ್ಕಸವೊಲೆಯ ತಿಲೋತ್ತಮೆ ಮೇನಕೆಯ ನುಡಿಯನನುಕರಿಸಿ ಜತಿರಾಯನೊಳ್—ಏನೆಲೆ ಸಂಡ! ಪೆಂಡಿರ್ವಂದು ಕರೆಯೆ ಆಱೆನೆಂಬ ನಿನ್ನ ಗಂಡುಗಲಿತನಮಂ ಸುಡು! ಪಂದೆಯುರ್ಗೆಂತೆಂತು ನೀಂ ಕುಱಿ, ಪೆಣ್ಗಂಜುವೆಯಾ! ಆಃ ನಿನ್ನೀಪುಟ್ಟಿಂಗೇನೆಂಬೆನೊ? ಚಿಃ! ನಿನಗೀ ಜವ್ವನಮೇಕೆಯೊ? ಆಣ್ಬರಿಜೇಕೆಯೊ? ಏನೆಮ್ಮಂ ಕಂಡು ಬೆದಱಿ ಮಱವಟ್ಟೆಯ್! ಎಂದು ಕೊಱಚಾಡಿದಳ್.

ಇಂತೆಂದಾಡುವ ತಿಲೋತ್ತಮೆಯನಾಕ್ಷೇಪಿಸಿ ಕುಡುನೋಟದ ಕುಱುವುರ್ವಿನೂರ್ವಶಿ—ಪೋ ಪೋಗಿರೆ! ಬೂದಿಯ ಬಱುಜೋಗಿಯನುೞಿದತ್ತಂ. ಪೆಣ್ಗಳಿರ್ದುಂ ನಾಣೞಿದು ಗೞಿಸಾಳಿವೆಣ್ಗಳೊಂದು ಮಾೞ್ಕೆಯಿನಿಂತು ನುಡಿವರೆ! ಎಂತೆಂತೊ ಬೊಮ್ಮನಂದಂದುಡಿದ ಕಡಿಯೆಲ್ಗಳಿನಟ್ಟೆಯೊಂದಂ ಬಿಗಿದು ತೊವಲಂ ಪೊದೆಯಿಸಿ ಪುಸಿದಸಿದಸುವೊಂದಂ ತುಂಬಿ ಬಿನದಕ್ಕೀವನದತ್ತಣ್ಗಟ್ಟಿರ್ಕುಮಲ್ಲದೀಜೇವಿಯೊಳ್ ಮಾನಸರ ಲಕ್ಕಣಮುಂ ಪುರುಳು

ಮುಂಟೆ! ಪೋ! ಮಾಣ್! ವಿಹಾರಂ ಸೇರವಾಯ್ತು, ನಡೆ ಪೋಪಂ,
ಎಂದಿೞಿದು ನುಡಿದಳ್.

ಕೇಳ್ ದೇವಾಂಗನೆಯರಿಂತು ಪೊಗೞ್ದುಂ ತೆಗೞ್ದುಂ ಬಯ್ದುಂ ಭಂಗಿಸಿ
ಯುಂ ನುಡಿಸಿದೊಡಂ ಮೋಸಮನೊಡೆಯದ ಕಣ್ದೆಱೆಯದ ಕದಲದ ರಾಯನ
ಕಟ್ಟಾಯಸದ ತಪದ ಬಲ್ಮೆಯುಂ ಕಂಡು ದೂರದೆ ಕೈಮುಗಿದು ಬೆಂಗೊಟ್ಟರ್ ;
ಕಾವನಾವ ನಾಡಸೊ ಪೊಕ್ಕಂ.

ಇತ್ತಲಿಂತಾಗೆ ರಾಯನ ನಿಚ್ಚಟದ ಭಕ್ತಿಗೊಲ್ದು ಕೆಲವಾನುಂ ದಿನಕೆ
ದೇವಿ ಮೈದೋಱಿದಳ್. ಇಂತು ತನ್ನ ಕಣ್ಗಿದಿರೊಳ್ ಮೂರ್ತಿಗೊಂಡ
ಆದಿಮಾಯೆಯುಂ ಕಣ್ಣಾಱೆ ಕಂಡಾನಂದಾಬ್ಧಿಯೊಳೋಲಾಡಿಯುಂ ಪಾಡಿ
೧೦ ಯುಂ ಪೊಗೞ್ದುಂ ಮಣಿದುಂ ದೈನ್ಯದಿಂ—ಎಲೆ ಮಾತೆ! ನೀಂ ಭಕ್ತವತ್ಸಲೆ
ಸಾಜಂ! ಧ್ಯಾನಗಮ್ಯೆ ಸಾಜಂ! ಸಕಲೇಷ್ಟಪ್ರದಾಯಿನಿ ಸಾಜಂ! ಆದಿಶಕ್ತಿ
ಯೆನಿಸಿರ್ದುಂ ಮೂಗವಲಿಂ ಹರಿಹರಬ್ರಹ್ಮರ್ಕಳಂ ಮೋಹಿಸಿದ ನಿನ್ನೀ
ಮಾಯಾವಿನೋದಮನಾರಱಿಗುಂ! ಎನ್ನನುದ್ಧರಿಸೌ! ಎಂದು ಬಗೆವಗೆಯೊಳ್
ತುತಿಸುತುಮಡಿಗೆಱಗಿದಂ.

ಆಗಳಾತನಂ ನಾಲ್ಕುಂ ಕೈಗಳಿನೆತ್ತಿ—ಮಗನೆ! ಪಿರಿದಾಯಸಂಗೊಂ
ಡಯ್! ನಿನ್ನಿಷ್ಟಾರ್ಥಂ ಸಿದ್ಧಿಪುದು ದಿಟಂ, ಎಂಬ ಶುಭರೂಪಿಣಿಯುಂ
ಕಾಮಾಕ್ಷಿಯುಂ—ನಿನ್ನಂ ಕಂಡೆನಗೆ ಪೆಱತಾವುದೊ ಇಷ್ಟಂ, ಎಂದು
ಬಿನ್ನಯಿಸಿದಂ. ಈ ನುಡಿಗೆ—ಹಾ! ಸೊಗಂಬಾಡ್ಯೆ! ಶತ್ರುಹೃತಮಾದ
ನಾಡುಂ ಸಕಲಸಂಪದಮುಂ ನಿನ್ನೊಡಮೆಯೊಳಕ್ಕೆ! ಪೋಗೆಂಬುದುಂ;
೨೦ ಸುಮದರಾಜಂ—ಅಬ್ಬೆ! ನಿನ್ನಡಿಗಳನುೞಿದು ಮಾಂ ಪೋಗಲ್ಕುಂಟೆ! ರಾಜ್ಯದಿ
ನೇಂ, ಭಾಗ್ಯದಿನೇಂ? ಆನೊಲ್ಲೆನೀಕ್ಷಣಭಂಗುರದ ಭೋಗಂಗಳಂ.
ನೀನೊಲ್ವುದು ನಿಕ್ಕುವಮಪ್ಪೊಡೆನಗಾಸ್ಥಿರಪದವಿಯುಂ ತೋಱಿಸ, ಎಂದು
ಬೇಡಿದಂ. ಮತ್ತಮಾರಾಯನ ಬಿನ್ನಪಕ್ಕೆ ಕಾಮಾಕ್ಷಿ—ಅಂತಾಗದಯ್,
ನಿನಗಿಹದ ಭೋಗಂಗಳಿನ್ನುಂ ತೀಱಿತಿಲ್ಲದಱಿನದು ಸಮೆವನ್ನಂ ನಿನ್ನ ರಾಜ್ಯ
ಪದದೊಳೆ ಇರ್ದು ಬಾೞ್. ಮೇಣೆಂದಿಂಗೆ ಶ್ರೀರಾಮನ ಜನ್ನದ ತುರಗಂ
ನಾಡಂ ಪುಗುತರ್ಪುದಂದೆ ಧರಣಿಯನಾತನ ಚರಣಕ್ಕರ್ಪಿಸಿ ನೀನಾ
ತನ ಸೇವೆಯೊಳಿರ್ದೊಡೆ ಮುಂತೆ ಲೇಸಕ್ಕುಮನ್ನೆಬರಂ ನಿನಗಂ ಪೊೞಲ್ಗಂ
ರಕ್ಷೆಯಿರ್ಪಂತಾಂ ನಿನ್ನ ನಾಡೊಳ್ ನಿಲ್ವೆನೆಂದನುಗ್ರಹಿಸಿ ಮೈಗರೆದಳ್.

ಲಾಲಿಸು! ಅಂತು ತನಗಾಣತಿಯಿತ್ತುಂ ಮಾಯಮಾದ ಆದಿಮಾಯೆ
೩೦ ಯಡಿಗಳಂ ನೆನೆಯುತ್ತೆ ತಪೋವನದತ್ತಣಿಂ ತಳರ್ದು ಪುರಕ್ಕೈತಂದು ಪಗೆ

ರಾಯರನೆಬ್ಬಟ್ಟಿಯುಂ ತಾನರಸುಗೈಯುತುಮೀಗಳುಂ ನಿಮ್ಮಾಗಮನಮಂ ಪಾರುತುಮಿರ್ಪಂ.

ಅಂತು ರಾಯಂ ತನಗೊಲ್ದ ಕಾಮಾಕ್ಷಿದೇವಿಗೆಂದೇರ್ಪಡಿಸಿದ ದೇಗುಲ ಮೈಸೆ ಆಗಳುಂ ತನ್ನಂ ಮಱೆವುಗುವರಂ ಕಾಪೊಂದು ಮೈಮೆವೆತ್ತೀ ದೇವಾಗಾರದೊಳ್ ನೆಲಸಿರ್ಪಳೆಂದು ಸುಮದರಾಜಚರಿತಮಂ ಸಮಂತು ಕಾಮಾಕ್ಷಿಮಾಹಾತ್ಮ್ಯಮುಂ ಶತ್ರುಘ್ನಂಗೆ ಮಂತ್ರಿಪಂ ಕೇಳಿಸಿದಂ.

ಮುದ್ದಣ—ಎನ್ನರಸಿ! ಶತ್ರುಘ್ನನಿಂತೇರ್ಪಟ್ಟೊಂದು ಮೈಮೆಯಂ ಕೇಳ್ದು ಸಂತುಷ್ಟನಾಗೆ ಮಂತ್ರಿವೆರಸು ತಾಂ ದೇವೀದರ್ಶನಾರ್ಥಂ ದೇಗುಲಮನೊಳವೊಕ್ಕು ಮೂರ್ತಿವೆತ್ತ ಕಾಮಾಕ್ಷಿಯುಂ ಪ್ರಾರ್ಥಿಸುತುಮಿರ್ದಂ.

ಅನ್ನೆಗಮತ್ತಲ್ ಯಥೇಚ್ಛಂ ಪೋಪ ಜನ್ನಗುದುರೆ ಮುಂತೆಸೆವಹಿಚ್ಛತ್ರಪುರಮಂ ಪುಗುತರ್ಪುದುಂ ನಗರಪಾಲಕರ್ ಪಿಡಿದು ರಾಯಂಗೊಪ್ಪಿಸಿದರ್. ಸಾಲ್ಗುಮೀ ಬಿತ್ತರಂ. ರಾಯಂ ಹಯದ ಪಣೆಯ ಲಿಖಿತಮನೋದಿಸಿ ಇಂದಿಂಗೆ ಪಾವನನಪ್ಪೆನೆಂದು ತಱಿಸಂದು ಶತ್ರುಘ್ನನಂ ಬರಿಸಿ ತನ್ನ ಪೊೞಲಂ ರಾಘವನ ಪೆಸರೊಳರ್ಪಿಸಿ ಆತನ ಸೇವೆಯೊಂದು ಬಗೆಯಿಂ ಸೇನಾಸಮೇತಂ ಲವಣಾಂತಕನೊಡನೆ ಪೊಱಮಟ್ಟಂ. ರಾಘವಾನುಜನುಮಾತನ ಕುಮಾರಂಗೆ ಪಟ್ಟಂಗಟ್ಟಿ ರಾಜ್ಯಪದದೊಳಿಟ್ಟು ಕಾಣ್ಕೆಗೊಂಡು ಕುದುರೆಯಂ ಬೆಂಬತ್ತಿ ಮುಂ ತೆರಳ್ದಂ.

ಎಂಬಲ್ಲಿಗೆ ಶ್ರೀರಾಮಾಶ್ವಮೇಧದೊಳ್
ಕಾಮಾಕ್ಷಿದರ್ಶನಂ ಅಷ್ಟಮಾಶ್ವಾಸಂ ಸಂಪೂರ್ಣಂ.

---

## ನವಮಾಶ್ವಾಸಂ

# ಚ್ಯವನಾಶ್ರಮವರ್ಣನಂ

ಸುಂದರೀ! ಇಂತು ಶತ್ರುಹಂ ತುಂಬಿದೆಳೆಗೆ ನಿನ್ನೀಪೊೞಲೆಂಬೊಂದು ಜಸದಿಂ ಪೆಸರ್ವೆತ್ತು ಪುದಿದ ಬಾೞ್ವ ಪಾರ್ವರ ಬಂಚದಱಸ ಬಾೞ್ವನೆಯೆಂಬೊಂದು ನೆಗೞ್ತೆಗಡರ್ಪಾಗಿ ಸಂದ ಅಹಿಚ್ಛತ್ರಪುರವರದ ರಾಯನ ಮನ್ನಣೆಯ ಬಿರ್ದಂ ಕೈಕೊಂಡು ಮೂವಗಲಿರ್ದು ಒೞಿಕ್ಕಮಾತನನೊಡಂಗೊಂಡು ತನ್ನಂಕೆಯಂಕದ ದೞಂಬೆರಸು ವಾಜಿಯ ಬೆನ್ನೊಳೆ ನಡೆದು ಪಲವುಂ ನಾಳ್ಕಳಂ ಕಳಿಕಳಿದು ಪೋಗೆವೋಗೆ, ಮುಂತೆ ಮುಂತೆ—

ಭೂರಮೆಯ ನೇವಾಳಮೆಂಬಿಸಂ ಪೊಸಲ್ವರಿವ ಪಯೋಷ್ಣೀನದಿಯ ಕೂಲದೊಳಗ್ಗಿ ಮೊಗರ್ಗೆ ಬಾಣಸುಗ್ಗೈದು ನಿಚ್ಚಮುಯ್ವ ಜನ್ನದುರಿಯ ಸಡುಬೀದಿಯೆನೆ ಮುಗಿಲುದ್ದಮೊಂದಿದ ಕರ್ವೊಗೆಯಿಂ, ಅಗ್ಗಿಗೊಂಡದೊಳ್ ಪೊತ್ತುವ ನಱುನೆಯ್ಯ ನೆಲ್ಲರಳ ಬಲಿಗೂೞ, ಸಿರಿಕಂಡಸಕ್ಕೆಯ ಸವುದೆಯ ಕಮರಿಂ ಪೊರೆದೆಲ್ಲೆಡೆಯೊಳೆತ್ತಂ ಪಳಂಚಲೆವೆಲರಿಂ, ತೋರಮರಂಗಳ ಪಾಱುಗೊಂಬನೇಱಿ ರಯ್ಯಮಾಗೆ ಮೊರೆವ ಕುಕಿಲ್ವ ಪಾಡುವ ಬಾಸೆವಕ್ಕಿಗಳ ಗಜಬಜದಿಂ, ಸಿರ್ವೈರಂ ಕೂಡಿ ಬಾೞ್ವ ಮೃಗಂಗಳದೊಂದು ನೆರವಿಯಿಂ, ತಾಂ ತಮಗಣಂ ಭಯಮಿಲ್ಲೆನೆ ಸ್ವೇಚ್ಛೆಯಿಂ ಮೇದು ಮುನಿಗಳ್ಗೆ ಏವೊೞ್ತುಂ ಪಾಲನೀವ ಸಗ್ಗದಾವನಿಟಿಕೆಯ್ವಾಶ್ರಮದಾಕಳಿಂ, ತೋರ್ಪ ತಪೋವನ
೧೦ ಮೊಂದು ಕಣ್ಗೊಳಿಸಲೊಡಂ ; ರಾಜಂ ಸುಮತಿಯೊಳಿದೇಂ ತಪೋವನಮಾವ ಮುನಿಪುಂಗವನಾಶ್ರಮಂ ಪೇೞೆಂದು ಬೆಸಗೊಳ್ವುದುಂ ; ಶತ್ರುಹಂಗೆ, ಇಂತೀತಪೋವನಮಶ್ವಿನೀದೇವತೆಗಳ್ಗೆ ಸುರಪಜ್ಞೆಯೊಳಿಡೆಗೆಯ್ದು ಹವಿರ್ಭಾಗಮುಂ ಸಲಿಸಿದ ಚ್ಯವನಋಷಿಗಳಾಶ್ರಮಮೆಂದಂ. ಏಗಳೆಂತೇಂ ? ಆರಾ ಮುನಿಪಂ ? ಜಂಟಿದೇವರ್ಗೆ ಎಂದು ಸುರರೊಳ್ ಪಂತಿಗೊಟ್ಟನೇಕೆ ? ಆನಱಿವಂತು ಬಣ್ಣಿಸಿ ಪೇೞೆಂಬುದುಮತ್ತೆಯಿಂ ಕಥಿಸಿದನದೆಂತೆನೆ :—

ಈಪೊಡವಿಯೊಳ್ ನಿಂದ ಪೞನುಡಿವೆಂಡಿರ್ಗೆ ಗಂಡನೆನಿಸಿ ಬಂದ ಹೊಸ್ತಕ್ಕೆ ಮೊದಲಿಗನಾಗಿ ಸಂದ ಜೋಗಿಗಳ ಪಿರಿಯನೊರ್ವಂ ಭೃಗುವೆಸರ ರಿಸಿಯುಂಟು. ಆತನೊರ್ಮೆ ಮೊಗಸಿದ ಗರವಟ್ಟಕ್ಕೆ ಸಮಿತ್ಕಾರಂಗಳಂ ತಿರಿತರ್ಪೊಂದುಜ್ಜುಗದಿಂ ಬೈಗುವೊೞ್ತಿಂಗೆ ತನ್ನಾಶ್ರಮದತ್ತಣಿಂ ಪೊಱಮಟ್ಟಂ.
೨೦ ಆಗಳ್ಗಾಪೊೞ್ತೇಪೊೞ್ತುಂ ಪೊೞ್ತುಂ ಪಾರುತಿರ್ದ ದಮುನನೆಂಬೊರ್ವ ನಱಿರಕ್ಕಸಂ ಉಟಜಮಂ ನೋೞ್ದು ನೊರ್ಕಿನುರ್ಕಿಂ ಪೊಡೆವ ಸಿಡಿಲ ಜಿಱುದನಿಯೊಳ್— ಮುನಿಕಾಂತೆಯಾವಳೆತ್ತವೋದಳಾರೇನೆಂದು ಗದಱಿ, ಅತ್ತಮಿತ್ತಂ ಕಂಡು ಕಾಣದೆ ಮತ್ತಂ ಕುಂಡದಗ್ನಿಯಂ ಜರ್ಬಿದಂ. ಅಂತಪ್ಪುದುಂ ವೈಶ್ವಾನರಂ ಈ ಮರ್ಬಿನೊಂದು ಜಂಕಣೆಗೆ ಬೆದಱಿ ನಡುಗಿ ಮುನಿಪತ್ನಿಯನಂತರ್ವತ್ನಿಯಂ ಪತಿಪರಾಯಣೆಯುಂ ತೋಱಿಸಲೊಡಂ ; ಕೂೞಂ ಪತ್ತೆಸಾರ್ದು ಕೊಡನ ಮಱಿಯ ಪಡೆಯುಂ ತುಡುಕುವೆಗ್ಗನಂತಿರೆ ನರೆಯ ನಿಡುಜಡೆಯಂ ಪಿಡಿದೀೞ್ದುಯ್ಯುತುಮಿರ್ದಂ. ಆಃ ! ಮಱುಗದರಾರೊ ! ಕಟುಕನ ಬಂದಿಯೊಳಾದ ಆವಿನಂತಿರೆ ಮುನಿಕಾಂತೆ ಬೆಕ್ಕಱಿ ಸಿಡಿಮಿಡಿಗೊಂಡು ದೆಸೆಗೆಟ್ಟು ಬಾಯ್ವಿಟ್ಟು ಪಿಂದೆಸೆಯನೆ ನೋಡಿನೋಡಿ—ಹಾ ಮುನಿ ! ಹಾ ಗುರು ! ಹಾ ನಾಥ ! ಹಾ !
೩೦ ನಾಯಕ ! ದಾನವನೊಂದು ಸೆಱೆಯಿಂ ರಕ್ಷಿಸಯ್, ಎಂದು ಕೀಱಿದಳ್.

ಆವೇಳೆಯೊಳಿಂತು ಭಯತ್ರಸ್ತೆಯಪ್ಪ ಹದಿಬದೆಯ ಬಸಿಱಿಂ ಗಬ್ಕನೆ ಗರ್ಭಂ ಸೋರ್ದು ನೆಲನನಿಟಿಯೆ ಪಿಂಡದಿನೊಂದು ಮೂರ್ತಿಯೊಗೆತಂದು ಮೈವೆತ್ತು ಕೊಲೆಗನಂ ತಡೆದು, ಪೊಲ್ಲದ ಕಜ್ಜಮನೊಡರ್ಚಿದ ನೀಂ ಪೊತ್ತಿಬೂದಿವೊಲಾಗೆಂದು ಶಪಿಸಲೊಡಂ; ದಮನಂ ಸುಟ್ಟುರಿದು ಕರಿಮುರಿವೋದಂ. ಅನಂತರ ಮಾಕಾಮಿನಿ ತಾಂ ಪೆತ್ತ ಕಿಱುಗೂಸಂ ತೋಳಿನೆತ್ತಿ ಮೆಲ್ಲಮೆಲ್ಲನಾಶ್ರಮಕ್ಕೆ ನಡೆತಂದಾಗಳೆ ಬಂದ ಕಾಂತಂಗೆ ತನಗೊದವಿದೊಂದು ಸಂಕಟಮಂ ಕೇಳಿಸಿದಳ್. ಆಗಳ್ ಮುನಿಪನಗ್ನಿಯೊಂದು ಗೆಯ್ಮೆಗೆ ಕಱುತ್ತುರಿದು—ನೀಂ ಪಿಱಿತಿನಿಯ ಪಾಂಗಿನಿಂ ಎಲ್ಲಮಂ ತಿಂದು ಸಾವುದೆಂದು ಬೈದಂ. ಅಂತಿರೆ ಬೈಗುಳಿಂ ನೊಂದು ಬೆದರ್ಕೆಯಿಂ ನಡುನಡುಗಿಯುಂ ಹುತವಹಂ ರಿಸಿಗೆಱಗಿ—ರಕ್ಕೆಯಕ್ಕೆ ! ಪುಸಿಯೋತದ ಮಾತಿನೊಂದು ಭೀತಿಯಿಂ ಮಾತೆಯಂ ತೋಱಿದೆ ನಾಣ್ಮನೊಳ್ ದ್ರೋಹದೆಣಿಕೆಯಿನಲ್ತು, ಎನ್ನನೋವ ಕಾವ ಪೊಱೆ ತಮ್ಮಡಿಯೊಳೆಂದು ಕಣ್ಣೀರಿಡುವುದುಂ; ಕೂರ್ಮೆಯೊಡೆಯನಗ್ನಿಯಂ ಅಂತು ಪಿಡಿದುದಂ ಗಿಡಿದುಂ ಮಡಿಯೆನಿಸೆಂದು ಸೈತಿಟ್ಟು ಬೀಳ್ಕೊಟ್ಟಂ. ಇತ್ತಲ್ ಬಸಿಱಿಂ ಜಾಱಿದಂಗೆ ಚ್ಯವನನೆಂಬೊಂದು ಸಕ್ಕದದೊಳ್ಪೆಸರನಿಟ್ಟು ಕೊಂಡಾಟದಿಂ ಪೊರೆಯುತಿರೆ ಮುದ್ದಿನ ಪುಟ್ಟಕುವರಂ ಬೆಳ್ವಕ್ಕದೇಱುಂಬೆಱೆಯಂತೆ ದಿನದಿನಕ್ಕೆ ಕಳೆಯೇಱಿ ಬಳೆಯುತಿರ್ದಂ. ಇಂತು ಬಳವಿಯ ಕಂದಂ ಸಾಂಗವೇದಂಗಳಂ ಕಲ್ತು ಗುರುವಂತಿರೆ ತಾನುಂ ಹರಿಯೊಲ್ಮೆಯಂ ಪಡೆಯಲ್ಕೆಂದು ತಪಂಬೊಕ್ಕಂ. ನೆಲೆಗೊಂಡ ನಿಚ್ಚಟದ ಜೋಗದೊಂದು ಜಾನದಿಂ ಮೈಮಱೆದೊಳನೋಟದೆ ಪಲವುಂ ಬರಿಸಂ ಸಮಾಧಿಯೊಳಿರ್ದುದುಂ; ಮೆಯ್ಯೊಳ್ ಪುತ್ತುಮೂಡೆ ಮುಯ್ಪಿನೇಱಿನೊಳ್ ದಟ್ಟಗೊಂಬಿನ ಬಲ್ಮರಂಗಳ್ ಪುಟ್ಟೆ ಕೆಂಜಡೆಮುಡಿಯ ಮಡಿಯೊಳ್ ಮಡಲಿಱಿದ ಬಱಲ್ವಂದಱ್ ಪೊದೆಯೆ ಕಾಂಚನಲತೆಯಂ ತುಱುಗಿ ಜಂಬೂವೃಕ್ಷದಿನೆಸೆವ ಪೊಂಬೆಟ್ಟದಟ್ಟದ ದಟ್ಟದಟ್ಟಲಂ ಗೆಲೆವಂದಂ.

ಅನ್ನೆಗಮಿತ್ತಲ್ ಶರ್ಯಾತಿವೆಸರ ಮನುಕುಲದ ರಾಯನೊರ್ವಂ ಸಕುಟುಂಬಂ ಬೆಂಬಟಿಯು ಮೆಯ್ಗಾವಲ ಚತುರಂಗಸೇನೆವೆರಸು ತೀರ್ಥಯಾತ್ರೆಗೆಂದು ಬಂದು ರೇವಾತೀರದೊಳಿಟಿದು ಪುಣ್ಯತೀರ್ಥದೊಳ್ ಮಿಂದು ಕ್ಷೇತ್ರವಿಧಿಯೊಳಿರ್ದಂ. ಆಪೊತ್ತಿಂಗಾತನಣುಗುಗುವರಿ ತನ್ನ ಣೆವರೆಯದ ಗೆಡೆಯ ಜೋಡುಕಾರ್ತಿಯರೊಡನಾಡುತಾಡುತೆ ಬಲನ ಬನಂಬೊಕ್ಕೋರೊಂದೆಡೆಯ ತಳಿರ್ಜೊಂಪಮಂ ಪಿಡಿದುಂ, ಪೂಗೊಂಚಲಂ ಮುಡಿದುಂ, ಪಣ್ಣೊಂಗಲಂ ಸವಿದುಂ, ಬಿನದದಿಂ ವಿಹರಿಸುತುಮಿರ್ದಳ್. ಇಂತಾಡುವ ಬಾಲೆ

(ಸಾಲುಗಳು ೧೦, ೨೦, ೩೦)

ತನ್ನಿದಿರೊಂದು ಪುತ್ತಂ ನಿರುಕಿಸಿ ಕೆಳದಿಯರ್ಗೆ—ಆಂ ಕಂಡೆಂ; ಏಂ ಕಂಡೆಂ
ಪೇಟಿಮೆಂದು, ಮತ್ತಂ ಬಾಲೆಯರ್ ಪಡಿಸುಡಿಗುಡದಿರೆ ನಕ್ಕು—ಎನ್ನೀ
ಸೈಪಿಂಗೇಸಂಜಿಪೆಂ. ಇದೆ ಪುತ್ತಿನೊಳ್ ತೆತ್ತಿಸಿದ ಕರ್ಮಣಗಲ್ಲೆರಡಂ ಕಂಡೆನೀ
ಗಳೆ ಕಿಟ್ಟುತ್ತಕೊಳ್ವೆನೆಂದು ಕೆಯ್ಯೊಳಾಟದ ಕವಲ್ಗೋಲಿಂ ಮಣಿಯೆಂದೆ ಬಗೆದು
ನಿಶ್ಚಲಂ ಮಿಸುಗುವ ಮುನಿಯ ಕಣ್ಗಳಂ ಕುರ್ಕಿದಳ್. ಅಕ್ಕಟಾ! ಪೊನಲಿಡುವ
ಕೆನ್ನೀರ ಕಾಲಂ ಕಂಡು ಬಾಲೆ ಭಯದಿಂ ಮನದೆ ತಳಮಳಂಗೊಂಡು
ಆರೊಳಮೆನ್ನದೆ ತನ್ನೆಡೆಗೆ ಸರಿದಳ್. ಆಕಾಲದೊಳೇನೆಂಬೆನೊ! ಪಗಲೊಳೆ
ಉಲ್ಕಾಪಾತಂಗಳಾಗೆ, ಧೂಮಕೇತುಗಳ್ ದೆಸೆದೆಸೆಗೆ ಮುಸುಂಕೆ, ನೆತ್ತರ
ಸರಿ ಸುರಿಯೆ, ಆಗಳಾಗಳ್ ಪೊಡವಿ ನಡುಗೆ, ರಾಯನ ಸೇನೆಯೊಳ್ ಕುತ್ತಂ
೧೦ ಕುಱುಪಿಡೆ, ಕುದುರೆ ಕಣ್ಣೀರಿಡೆ, ಗಜಂ ಮಣ್ಣಂ ಗೋರೆ, ತೇರ್ ಮುಱಿಯೆ,
ಉತ್ಪಾತಮಾಯ್ತು. ಇಂತೆಡೆವಿಡದೆ ತಲೆದೋಱುವ ದುರ್ನಿಮಿತ್ತಂಗಳ್ಗೆ ರಾಜಂ
ಪಿರಿದುಂ ಕೊರಗಿ ಏನಾಸುವೊಂದಡಿಯಿರ್ಕುಮೆಂದು ತಱಿಸಂದು ಸುತ್ತಂ
ಬನದೊಳ್ ಚರಿಸುತಿರೆ; ತನ್ನಿದಿರೊಳ್ ಬಿಂಜವೆಟ್ಟೆನಿಟಿತರ್ಪ ಶೋಣಾನದ
ದೆರಡುಂ ಪೊನಲೆಂಬಂತಿರೊಂದು ಪುತ್ತಿನತ್ತಣಿಂ ಕವಲ್ವರಿವ ನೆತ್ತರ ಮುರಿಯುಂ
ದಿಟ್ಟಿಸಿ ಕಟ್ಟಚ್ಚರಿಯೊಳೆ ಮುಟ್ಟಯಿಸಿ ನೋಟ್ಪುದುಂ; ತಪದೊಳಿರ್ಪ ಮುನಿಪಂ
ಗೋಚರನಾದಂ. ಆಗಳಾತನಡಿಗಳ್ಗೆಱಗಿ ರಾಜಂ—ಶಾಪಾನುಗ್ರಹಸಮರ್ಥರ್
ನೀಮೆ ವಲಂ. ಪರಿವ ನೆತ್ತರೇನೊ! ಎಂತಱಿವೆನೀವೈಮೆಯುಂ ಕುಱಿವಾನಿ
ಸನೆಂ. ತೀರ್ಥಯಾತ್ರಾರ್ಥಂ ಬಂದೀತೊರೆಯೊತ್ತಿನೊಳೆ ಬನದೆ ಬೀಡಂ ಬಿಟ್ಟೆಂ.
ತಪೋವನಮೆಂದಱಿತೆನಿಲ್ಲಂ. ಎಮ್ಮಾ ಸೇನೆಯೆಂತುಮಾಧಿವ್ಯಾಧಿಕ್ಷಾಮ
೨೦ ಡಾಮರಂಗಳ್ಗೆ ಕೋಳುವೋಯ್ತು. ಎನ್ನೊರ್ವನಯೆ ಕತದಿಂ ವನಮುಂ
ಪಾಟಾಯ್ತುಕ್ಕಟಾ! ಮುನಿರಾಯ! ಈಗಳ್ ನಿನ್ನನೆ ಮಱೆಗೊಂಬೆಂ. ನೀಂ
ಕರುಣಿಸಿ ಕಾವುದೆಂದು ಪ್ರಾರ್ಥಿಸೆ; ಚ್ಯವನಂ ರಾಯಂಗೆ—ಎಮತಿನ್ನಾವ
ವೈಮೆಯೊ! ಆವ ತಪಮೊ! ಕಣ್ಗುರುಡರಾದೆವೈಸೆ! ಕೇಳ್ ನಿನ್ನಯೆ ಕುವರಿ
ತನ್ನಾಟದೊಂದು ಗಮಕದಿಂ ಸಲ್ಗೆಯಿನೆನ್ನ ಕಣ್ಗಳಂ ಕುರ್ಕಿ ನೋಯಿಸಿದಳ್.
ಇಂತಿದು ನೆತ್ತರ್. ಏವೇಳ್ವೆನೊ! ಎನ್ನೊಂದು ನೋವಿಗಿಂತು ಉತ್ಪಾತಂ
ಗಳೆಂದಂ. ಆ ನುಡಿಗೆ ರಾಜಂ ನೊಂದು, ಮೇಣ್ ಶಾಂತಿಯೇನೆಂಬುದುಂ;
ಮುನಿಪಂ—ನಿನ್ನ ಕನ್ನೆಗುವರಿಯನೆ ಎನ್ನ ಸೇವೆಗೀವುದಱಿಂ ನಿನಗಂ ಸೇನೆಗಂ
ಸುಭಿಕ್ಷಮಕ್ಕುಮೆಂದು ಮಾರ್ನುಡಿಯುಲೊಡಂ; ಶರ್ಯಾತಿ ತಾಂ ತಲೆವಾಗಿ
ರಾಣಿಯೊಳ್ ನಿಧಾನಿಸಲ್ಕೆಂದು ತನ್ನಾವಾಸಕ್ಕೆ ನಡೆತಂದು ಅರಸಿಗೀಕತೆಯುಂ
೩೦ ಪೇಟ್ದಂ. ಆಗಳಾತನ ರಾಣಿ ಪೆತ್ತ ಬಸಿಱಿನೊಂದುರಿಯಿಂ ನೊಂದು

ಪಳಯಿಸಿ—ಹಾ! ಎನ್ನೀ ಮುದ್ದುಗುವರಿಯನೆಂತಗಲ್ವೆನೊ! ಎಂತೀಪೆತ್ತೊ
ಡಲಂ ಪಿಡಿವೆನೊ! ದೈವಮೊಂದೀ ಬಾಲೆಯೊಳ್ ಕಣ್ಣಿಟ್ಟುದೇ! ಅಕ್ಕಟಾ!

ಎತ್ತಣ ಬನಮೆತ್ತಣ ಮುನಿ|
ಯೆತ್ತಣ ತಪಮೆತ್ತಣಾಟಮೆತ್ತಣ ನೋಟಂ ||
ಎತ್ತಣ ಶಲಾಕೆ ಪೋ ಮಾ|
ಣೆತ್ತಣ ಪಗೆಯೆತ್ತಣಾಧಿಯೆತ್ತಣ ದಾನಂ ||

ನಡೆಬಾರದ ನುಡಿಬಾರದ|
ಗೆಡೆಬಾರದ ಕೂಡುಬಾರದಂದದ ಸೈತೊಂ ||
ದುಡೆಬಾರದ ಮುಡಿಬಾರದ|
ಬಿಡಬಾರದ ಪಸುಳೆ ಮಗಳನೆಂತಾಂ ಕುಡುವೆಂ || ೧೦

ಎಲೆ ರಾಯ! ನೀನುಮೊಡಂಬಡುವಯ್! ಜಾವಳದವಸಿಯ ಕವಡುಮಾಯೆ
ಗೊಳಗಪ್ಪರೇಂ! ಆಃ! ಎನ್ನೀಕೊಡುಗೂಸಿಂಗೇವೂರ ಕೊಳ್ಕೊಡೆ! ಮನು
ಕುಲದೆ ಪುಟ್ಟಾಗಿರೆ ಚೆಲ್ವಿನ ಬಲ್ಪಿನ ರಾಯಗುವರನ ಕೊರಲ್ಗೆ ಮಾಲೆಯಿಕ್ಕಿ
ತುಂಬುವಳಗದೊಳ್ ಬಾಪ್ಪೆನ್ನೀಬಾಲೆ ತಿರೆ ಪಱಿವಿನಂ ತಪದ ಮುದು
ಗೂಗೆ ಕುರುಡಂಗಿತ್ತು ಕೊರಲಂ ಕೋಱುವಾ! ಎಂದು, ಒಱಿಕ್ಕಾಟದ ಮಗಳಂ
ಕೊರಲೊಳ್ ತಪ್ಕೈಸಿ ಕಣ್ಣೀರ್ಸುರ್ಱಿದು—ಹಾ ಗುಣಮಣಿ! ಹಾ ಮುದ್ದಿನ
ಕಣಿ! ಹಾ ಕುಲರತ್ನಮೆ! ಹಾ ಸಿಂಗರದ ಮುದ್ದೆ! ಎಂತು ನಿನ್ನನಗಲ್ದಾಂ
ಬಾಪ್ಪೆನೌ! ಅನುದಿನಂ ನೋಂತು ನೋಂತು ತನು ತವಿಯೆ ಕರಮುಪವಾಸ
ಮುಱಿದುಂ ಕಱಿದುಮೊಡಲತಿಣ್ಣದೊಂದು ಬೇನೆಯಿಂ ನೋವೆ ಪೊತ್ತುಂ
ಪೆತ್ತಿನ್ನೆಬರಂ ಪಾಲಿಸಿ ಲಾಲಿಸಿ ಮುದ್ದುಗೆಯ್ದೀಗಳೆ ತಾಂ ಪಱುವಾನಿಸಂಗೆ ೨೦
ಕುಡುವೆಂ ಮಗಳೇ! ಅಸಿದೊಡಲ ಬಾಲೆ! ನೀಂ ಪಸಿದು ಸಸಿನಂಬಡ
ದಂತಾರಯ್ವರಾರ್! ಸೋರ್ಮುಡಿಯುನಾಗಳ್ ಪಿಕ್ಕಿ ಪೂದೊಡಂಬೆಯುಂ
ಮುಡಿಯಿಸುವರಾರ್! ದಿನದಿನಕಿಂ ಮೀಯಿಸುವರಾರ್! ನಿನ್ನನೊಡಂಬಡುವ
ರಾರ್! ನಲ್ಲುಡೆಯನುಡಿಸುವರಾರ್! ನಲ್ದೊಡವಂ ಕುಡುವರಾರ್!
ಕೊಂಡಾಡುವರಾರೋವರಾರ್ ಬೇನೆಗೆ ನೋವರಾರೆಲೆ ಕುವರೀ! ಆಃ!

ಆರೊಡನುಣ್ಬೌ ಬೇಸ
ತ್ತಾರಂ ನಡೆನೋಡಿ ಕೂಡಿ ನುಡಿವೌ ಪಡುವೌ ||
ಆರೊಡನಿರ್ಪೌ ಮೇಣಿ|
ನ್ನಾರಂ ಪೆತ್ತಬ್ಬೆಯೆಂದು ಕರೆವೌ ಮಗಳೇ ||

ಅಕ್ಕಟಾ! ಕಂಗಳನಾದೊರ್ವನಂ ಮುದುಪಾರ್ವನಂ ಕೈವಿಡಿವೊಂದು ಯೋಗಮುಂ ಬಿದಿ ಮಾಡಿದನೇ! ಲೋಕದೆ ಲೋಗರ್ ಕಾಡ ಬೇಱಂ ತಂದು ಊರ ಮರನೊತ್ತಿಗಿಡುವರುಂಟು. ನೋಡೆ ನಾಡೆಳೆವಳ್ಳಿಯಿಂ ಸಮಂತು ಕಾಡ ಕರ್ಮುರನೊಳ್ ಪತ್ತುಗುಡುವರೊಳರೇ! ನೂಱೇಂ ಪಲವೇಂ. ನೂಳದ ದೊಂದು ದಂದುಗಕ್ಕೆ ಕೆಯ್ಗುಮರ್ದ ಚಿಂತಾಮಣಿಯನೊತ್ತೆಯಿಟ್ಟುಬಾಳ್ವ ಕೈನೆಯು ಕೈಮೆಗೊಳಗಾದೆನಕ್ಕಟ! ಎಂದು ಮಱುಮಱುಗಿ ಹಮ್ಮ ದಂಬೋದಳ್. ಆಗಳಾಕಿಱುವರೆಯದ ರಾಯಗುವರಿ ಮಾತೆಯಂ ನೃತ ರಿಪೊಂದು ನುಡಿಯ ಬಿನ್ನಣದಱುವಿನ ಜಾಣ್ಮೆಯಿಂ—ಅಬ್ಬೆ! ಏನೆಂದಟಲ್ವೆ! ಪೆತ್ತರೊಳ್ ಪೆಣ್ಣೊಡಮೆಯಿದು ನ್ಯಾಸಮಲ್ತೆ. ಎಂತುಂ ಕುಲಕ್ಕೆ ಪೆಱಳಪ್ಪ
೧೦ ಮಗಳೊಳೇಂ ಮಱುಕಂ! ಮನುವಾದೊಡಂ ಮುನಿಯಾದೊಡಂ ಏಂ! ಕೊಡಗೂಸಿನೊಂದು ಭಾಗ್ಯಮೆ ಭಾಗ್ಯಂ, ಸೈಪೆ ಸೈಪು. ಪೆಱತಾವ ಭೋಗಂ ಸಲ್ಗುಂ? ಮುನ್ನೊಡಲೊಂದುಗೆಯ್ಮೆಯ ನೋಂಪಿಯೆಸಕ ಮೊಡರ್ಚೆ ತಿರಿಕುಳಿಯೊಳಮರವೆಂಡಿರ ಭೋಗಮನುಣ್ಗುಂ. ಮೇಣ್ ಕೈನೆ ಯಾಗೆ ರಾಯನ ಕೈವಿಡಿದುಂ ತಿರಿದುಣ್ಗುಂ. ಮೇಣ್ ಅದುಕಾರಣಂ ನೀಂ ಸಂತಮಿರೆಂದು ತಾಯ್ಗೆ ನಯಂಬೇಱ್ದು ಅಯ್ಯಂಗೆ—ಅಯ್ಯ! ಮುನಿಯೆಡೆಗೆ ಪೋಪಂ ಎಂದು ಕರೆದುಯ್ದಳ್. ಅಂತು ಬಂದಾ ಕನ್ನೆ ವೆಣ್ ತವಸಿಯಂ— ಒಡೆಯ! ಅಪ್ಪುದಪ್ಪುದಾನಾಟದೋಟದೊಳ್ ತಮ್ಮಡಿಗಳ್ಗೆ ತಪ್ಪನೆಸಗಿದೆಂ. ಇದೆ! ಅಯ್ಯನೆನ್ನಂ ನಿಮಗರ್ಪಿಸಲ್ಕೆಂದು ಬಂದಿರ್ಪನದಱಿನಾದಾನಪುನೊಲ್ದು ಕೈಕೊಂಡು ಕೂರ್ಮೆಯಿನೆಮ್ಮ ಜಾತ್ರೆವಯಣಿಗರ್ಗೆ ನೇರಿಟ್ಟಾಧಿವ್ಯಾಧಿಗಳಂ
೨೦ ಪರಿಹರಿಸಿ ಪೊರೆಯ್ಯೆ ಎಂದು ಕಾಲ್ಗೆಱಗಿದಳ್. ಇಂತಪ್ಪುದುಂ ಚ್ಯವನಂ ಕನ್ಯೆ ಸುಕನ್ಯೆಯ ಜಾಣ್ಮೆಯ ಮೆಲ್ನುಡಿಗೊಱಲ್ದು, ಸಮಾಧಿಯನುಟಿದು, ರಾಯಂ ಶಾಂತಿಗೆಂದಿತ್ತ ದಾನದ ಬಾಲೆಯನೊಪ್ಪಿ, ಪಯಣಗರ್ಗಂ ನಾಡಿ ಗರ್ಗಂ ಸೊಗಮಪ್ಪಂತು ಕರುಣಿಸಿ, ಶರ್ಯಾತಿಯಂ ಪರಸಿ ಬೀಳ್ಕೊಟ್ಟಂ.

ಇತ್ತಲ್ ಶರ್ಯಾತಿರಾಜತನೂಜೆ ನಿಜಪತಿಯಂ ತನಗೊಲ್ದ ದೈವಮೆಂದೆ ಬಗೆದು ಮುನಿ ಮನಂ ಮೆಚ್ಚುವನ್ನಂ ಸಂದ ಸೇವೆಯೊಳೆ ಬಟ್ಟಳ್. ಚ್ಯವನ ರ್ಷಿಯುಂ ಮಾನವಿಯೊಂದಾರೈಕೆಯಿಂ ತನ್ನ ಕುರುಡಿನ ಬೇನೆಯಂ ಮಱೆದು ಎಡೆಯೊಳೆ ಆಶ್ರಮಮನೊಂದಂ ನೇರ್ಪಡಿಸಿ ದೈವಭಕ್ತಿಯೊಳೆ ಸಂದು ತಾನುಂ ಸಂತಮಿರ್ದಂ. ಇಂತು ಕೆಲವಾನುಂ ದಿನಮತಿಕ್ರಮಿಸಲೊಡಮೊರ್ಮೆ ಬರ್ದಿ*ಲ ವೆಜ್ಜರಾಬಟ್ಟೆ ಮುಟ್ಟೆವಂದು ಮುನಿಯೆಲೆವನೆಗೆ ಪುಗುತರ್ಪುದುಂ; ಸುಕನ್ಯೆ ಅತಿಥಿಗಳಂ ಯಥಾವಿಧಿ ಉಪಚರಿಸಿ ಮನ್ನಿಸೆ; ಬರ್ದುವಂದ ದೇವರ್ ಹದಿಬ

ದೆಯ ನಡೆವಳಿಗಂ ಭಕ್ತಿಗಂ ಮೆಚ್ಚಿ ಸಂತಸದಿಂ ಮುನಿಪತ್ನಿಯುಂ ವರಮಂ
ಬೇಡೆಂದರ್. ಅದರ್ಕಾಕಾಂತೆ—ಆಂ ಪೆಱತಾವ ವರಮಂ ಬೇಡ್ಪೆನೊ! ಎನ್ನೀ
ಪತಿಯ ಕುರುಡಂ ಪೋಗೊಳಿಸಿ ಕಾವುದೊಂದೆ ಎಂದು ಮಾರ್ನುಡಿದಳ್.
ಮೇಣಾದೇವತೆಗಳ್—ನಿನ್ನ ಮುನಿ ಎಮಗೆ ಸುರಪನ ಪಂತಿಗುಡುವೆನೆಂದು
ಪೂಣ್ದೊಡೆ ಕಣ್ಗಳನೀವೆವೆನೆ; ಮುನಿಪಂ—ಇದೆ ಬಾಸೆಯೀವೆಂ, ತಡೆಯೇಂ.
ಆಂ ಪುರೋಹಿತನಿರ್ದು ಬೇಳಲಿರ್ದ ಜನ್ನದೊಳ್ ನಿಮಗೆಯೆ ಮುನ್ನಮೆಡೆ,
ಬಟಿಯುಮಿಂದ್ರಂಗೆಂದು ಕೈವೊಯ್ದಂ. ಆನುಡಿಗೆ ಸುರವೈದ್ಯರೊಪ್ಪುಗೊಟ್ಟು
ಮುನಿಯೊಡನೆ ತಡೆಯದೊಂದು ಬೆಂಚೆಯೆಡೆಗೈತಂದು ತಾಂ ಮೂವರುಂ
ಮೈಯಟ್ಟಲೊಡಂ ಬಗೆಯಲ್ಬಾರದ ಪಡಿವರಿಜುಗಳೆನೆ ಒಂದಚ್ಚಿನೊಳೆಱಕಂ
ಬೊಯ್ದ ಮೂಱುಂ ಪೊಂಬಾಪೆಯೆನೆ ಮೂವರುಮೊಂದೆ ರೂಪಿನೊಳೊಗೆದು
ಮರಲ್ದಿಟಜದೆಡೆಗೆಯ್ತಂದರ್. ಇಂತು ಬಂದ ಸುಕುಮಾರಗಾತ್ರರಪ್ಪ
ಮೂದೇವರೊಳ್ ಮುನಿಯಾಱುಂದಾರಯ್ವೊಡಾಱದ ಬಾಲೆ ಸ್ವರ್ವೈದ್ಯರಂ
ಮೇಣುಂ ಮಱುವುಗೆ ತಾವೊಲ್ದು ತೋಱೆ ಪತಿಯುಂ ಮೆಚ್ಚುಗೊಟ್ಟು ತಮ್ಮೆ
ಡೆಗೆ ಬಿಜಯಂಗೆಯ್ದರ್.

ಕೇಳಯ್! ಶತ್ರುಘ್ನ! ಮೂಲೋಕಮುಮಂ ತನ್ನೊಂದು ಜೋಗದ
ಜಾಣ್ಮೆಯ ವೈಮೆಯ ಬಲ್ಮೆಯಿನೊರ್ವೊದಲೊಳೆ ತೆಮಳ್ದಿ ಬಿಚ್ಚಟಿಸಿ ನೋಡ
ಲಾರ್ಪ ತನ್ನೊಳಗೇಟ್ಮಡಿಯೆಟ್ಟರದಿಂ ಪೊಱನೋಟವೊದವೆ ಕರುವಿಟ್ಟ ಕಡ
ವರದ ರೂವೆನೆ ಮೆಯ್ಸಿರಿ ಪೊಗರೇಱೆ, ಮಱಿಸಿಂಗನೊಳ್ಗೋಣ್ಣವಿರನಿಟಿಕೆ
ಯ್ವೊಂದು ತೇಜಮನೊಳಕೊಂಡು ರಾಜಿಪ ಜಡೆಮುಡಿ ಸೊಗಯಿಸೆ, ಪೊಂಬೆ
ಟ್ಟಿನ ಕೋಡುಗಲ್ಲಂ ತಳ್ತು ಪುದಿದು ಪೊಡೆದ ಬೈಗಿನ ಕೆಂಬಿಸಿಲ ಬೆಳಗಿಂಗೆ ದೊರೆ
ವರ್ಪ ಪೀತಾಂಬರದುಡೆ ನಡುವಿನೊಳ್ ವಿರಾಜಿಸೆ, ಅರಸಿಂಗನ ಒಲ್ಲೆರ್ದೆ*ಗೆ
ಪಾಸಟಿಯೆನಿಪ್ಪ ಪೇರಗಲದೆರ್ದೆ* ಮನಂಗೊಳೆ, ಯೂಥನಾಥನ ದಟ್ಟೆ
ಸೊಂಡಲಂ ಗೆಲೆವರ್ಪ ತೋರತೋಳ್ಗಳೆಸೆಯೆ, ಸಿರಿ ಸೋರ್ವ ಮುಖಪದ್ಮಂ
ಚಳಚಳಿಸೆ, ಚ್ಯವನಂ ಜವ್ವನದೇಳ್ಗೆಯಿಂ ಸಂತಂ ಪತ್ನಿವೆರಸಿರ್ಪನ್ನೆಗಮೊರ್ವ
ಶರ್ಯಾತಿರಾಜಂ ತಾಂ ಮೊಗಸಿ ನೆಗಟ್ಚಲಿರ್ಪ ಜನ್ನಕ್ಕೆ ತನ್ನಳಿಯನನೆ ಪುರೋಧ
ಸನಾಗೆ ಬರವೇಟ್ದಟ್ಟಲೊಡಮೋಲೆಕಾಱರ್ ಬಂದು ಮುನಿಗೆಱಗಿ ಪಾವುಡೆ
ಯುಮಂ ಕಟ್ಟೋಲೆಯುಮನೊಪ್ಪಿಸಿದರ್. ಚ್ಯವನನೋಲೆಯೊಕ್ಕಣೆಯ
ನೋದಿ ರಾಜನಿಂಗಿತಮನಱಿತು ಸಂತಸಂಗೊಂಡೂಟಿಗದಾಳ್ಗಳಂ ಮನ್ನಿಸಿ,
ಬರ್ಪೆವೆಂದು ಮಱುನುಡಿಯುಂ ಬರೆದು ಕಳುಪಿದಂ. ಬಟಿಕ್ಕಂ ಮುನಿದಂಪತಿಗಳ್
ತಮ್ಮಾಶ್ರಮದಿಂ ಪೊಱಮಟ್ಟು ಪಯಣಂಬಂದು ಮಾವನ ನಾಡಂ ಪುಗುತಂದು

ರಾಯನರಮನೆಗೈದಿವಂದು ಕುಳ್ಳಿರ್ಪುದುಂ; ರಾಯಂ ಮಗಳಂ ಬಟಿಯುಂ ಜವ್ವನದ ಚೆನ್ನಿಗನಂ ಕಂಡು ಕಱುತ್ತು ಮುರಿಮುರಿಮುರಿದು—ಆಃ! ಮನುಕುಲದೆ ಪುಟ್ಟಿ ನಿಟ್ಟುರದ ಬೊಡ್ಡಿತನಮಿಂತೇಂ ಸೂಟನನಾಯ್ತು ಬಾಡ್ದೆ ನೀಂ ಮಗಳೇ! ಕೆಲಸಾರೆಂದು ಗದಱೆ; ಅಯ್ಯನಡಿಗೆಱಗಿ ಕಿಱುನಗೆಯಿಂ—ಜೀಯ! ಆನಱಿಂ ಗೆಟ್ಟು ಬಟಿಗೆ ಪಟಿವೊರ್ದುವಂತು ನಡೆದೆನಿಲ್ಲ, ಈತನೆ ತನ್ನಾಣ್ಮನೆಂದು ಸಕಲಾಂಶಮಂ ತಿಳಿವಂತಾಡಿ ತೋಱಿದಳ್. ಇಂತಾಗೆ ನಲ್ಗವರಿಯ ನೆಗಟ್ಕೆಯುಂ ಕರವೊಲ್ದು ಬಂದಾಮುನಿಯುಂ ಪೊಗಟ್ದು ಪಾಡಿದಂ.

ಇಂತಿರ್ಪುದುಂ ಬಟಿಕ್ಕವೊಂದು ಶುಭದಿನದೊಳ್ ಚ್ಯವನಂ ಪುರೋಹಿತನಾಗೆ ರಾಜಂ ಯಾಗಮಂ ತೊಡಂಗಿ, ನೆರೆರಾಯರ್ ಪೊಗಟ್ವನ್ನಂ,
೧೦ ಭೂಸುರರ್ ತಣಿವನ್ನಂ, ದೇವತೆಗಳ್ ಸಂತುಷ್ಟರಪ್ಪನ್ನಂ ಬೇಳ್ದಂ. ಆಗಳ್ ತನ್ನೊಂದು ಪೂಣ್ಕೆಯಂ ನೆನೆದು ಪುರೋಧಸಂ ಹವಿಪ್ರದಾನದೊಳ್ ಮುನ್ನಂ ಮುನ್ನಮಿದು ಬೋಣಿಯರ ಬೆಜ್ಜರ್ಗೆ, ಇಂತಿದಮಳ್ದೀವರ್ಗೆ, ಮೋಣಿದಶ್ವಿನೀಸುತರ್ಗೆಂದು ಕರೆಕರೆದೆಡೆಗೊಟ್ಟ ಬಟಿಯುಮಿದು ದೇವೇಂದ್ರಂಗಿದು ಸುರಪಂಗಿಂತಿದು ಮೆಯ್ಗಣ್ಣಂಗಿದು ಎಂದು ಹೋಮಿಸಿದಂ. ಇಂತು ತನ್ನನೇಳಿಸಿಯುಂ ಪಂತಿಗೆ ತಗದ ಅಶ್ವಿನೀದೇವರ್ಕಳಂ ಮನ್ನಿಸಿ ಮುನ್ನೆಡೆಗೆಯ್ದನೆಂಬೊಂದು ಕತದಿಂ ಕಱುಂಬಿ ಸುರಪಂ—ಈ ಅಟಿವಾರ್ವನಂ ತಲೆಗಡಿವೆನೆಂದು, ತನ್ನ ಬಜ್ಜರಗೈದಂ ಜಳಪಿಸುತೆ ಮಾರ್ಮಲೆತಿಸಲೊಡರ್ಚಿದಂ. ಅನಿತಱೊಳೆ ಚ್ಯವನಂ ತನ್ನೊಂದು ಬಲ್ಮೆಯಿಂ ಸುರಪನುಮಂ ಕೈದುವುಂ ತಡೆಗೆಯ್ದಂ. ಇಂತು ಮರವಟ್ಟಿರ್ಪುದುಂ ಸಕಲಮನುಗಳುಂ ಮುನಿಗಳುಂ
೨೦ ಸುರರುಂ ಮೈಮೆಯುಂ ಪೊಗಟ್ದು ಸುರಪನನುದ್ಧರಿಸಲ್ಕೆಂದು ಚ್ಯವನನಂ ತುತಿಸಿದರ್. ಅಂತು ಸುರಪನಂ ಸೆಱೆವಿಟ್ಟುಂ ದೇವವೈದ್ಯರ್ಗೆ ಪಂತಿಗೊಟ್ಟುಂ ನೆಗಟ್ದನೀಮುನಿಯಿಳೆಯೊಳ್.

ಮೆಚ್ಚುಗಾರ್ತಿ! ನಾಡಿಂ ನಾಡಿಂಗೆ ಪಯಣಂಬಂದ ಬಟಲ್ಕೆ ಮುಡಿವನ್ನಂ, ಕೊಡಂಕೆ ನಲ್ಗತೆಯ ಪುರುಳಿಂ ತುಂಬುವನ್ನಂ, ಮನದ ಬಯಕೆಯಟಿವನ್ನಂ, ಶತ್ರುಹಂ ಸುಮತಿಯೊರೆದ ಕತೆಯುಂ ಕೇಳ್ದು ಸಂತಸಂದಾಳ್ದಿ ಅಂತಿರ್ಪನಂ ಮುನಿಯುಂ ಕಾಣಲ್ವೇಟ್ಕುವೆಂದು ನಿಚ್ಚದ ತುಟಿಲಾಳ್ಗಳಿಂ ಬೆರೆದು ಪುಣ್ಯಾಶ್ರಮಕ್ಕೈತಂದು ಚ್ಯವನನಂ ಕಂಡೆಡೆಗೆಡೆದು—ತಾಂ ಶ್ರೀರಾಮನನುಜನೆಂ, ಶತ್ರುಘ್ನನೆಸರ ಬಾಲಕಂ, ಜನ್ನಗುದುರೆಯುಂ ಬೆಂಬಟಿವೋಪ ಬಟ್ಟೆಯೊಳ್ ತಮ್ಮಡಿಯುಂ ಕಂಡು ಪರಕೆಗೊಳ್ವೊಡೆಂದು ಬಂದೆ
೩೦ ವೆಂದು ಕೇಳಿಸಿದಂ. ಮುನಿಯೆಂಗುಂ—ನಿಡುಗಾಲಂ ಜಗದಱಿಕೆಯೊಳೆ

ಬಾಪ್ಪೊಂದು ನೃಪಂ ನಿನ್ನೊಳೀಶನೊಡರ್ಚುಗೆ! ಶ್ರೀರಾಘವಂ ಬೇಳಲಿರ್ಪ
ನೆಂದು ಜಾನದೊಳೆ ಬಗೆಯಱಿತು ನೀಂಗಳಿತ್ತಂ ಬರ್ಪೊಂದು ಪೊಲ್ತಿನೆ
ಪಾರುತುಮಿರ್ದೆಂ; ಚೆನ್ನಾಯ್ತು, ಕುಳ್ಳಿರೆಂದು ಯಥೋಚಿತಂ ಸತ್ಕರಿಸಿದಂ.
ಮತ್ತಮೆನಸುಂಬೊಲ್ತು ಧರ್ಮಕಥಾ ಕಥನದೊಳಿರ್ದಿಂಬಳಿಯಂ ರಾಘವನಂ
ಕಣ್ಣಾಱೆ ನೋಡಲೆಣಿಪ ಮನದಿರವನಱಿಪಿದಂ. ಶತ್ರುಹನೆಂಗುಂ—ಮುನಿ
ಯಿಷ್ಟಮಿಂತಿದು; ಬಯಸುವೆಯಪ್ಪೊಡೆ ಈಗಳೆ ಕೊಂಡುಯ್ವಂತೀರಾಮ
ದೂತನಂ ನೇರ್ಪಡಿಸುವೆಂ. ಮುನಿಯೆಂಗುಂ—ಲೇಸು! ಲೇಸು! ಈ ಪೊಲ್ತೆ
ರಾಮನಡಿದಾವರೆಯಂ ಕಂಡು ಸಕುಟುಂಬಂ ಧನ್ಯನಪ್ಪೆಂ. ಆರವಂ ರಾಮನ
ನಚ್ಚಿನ ಬಂಟಂ? ಶತ್ರುಹಂ ಹನೂಮಂತನಂ ಸುಟ್ಟಿಸಲೊಡಮಣುವಂ
ಮುನಿಗೆ ತಲೆವಾಗಿ—ಆಣತಿಯೊಳಿರ್ಪೆ ನೀಗಳೆ ಅಯೋಧ್ಯೆಗೆ ನಿಮ್ಮನುಯ್ದು    ೧೦
ಮಖಶಾಲೆಯೊಳ್ ಬಿಟ್ಟು ಮರಳ್ದಪೆನೆಂದೊಡನೆಯೆ ಚ್ಯವನಂ ತನ್ನಾಶ್ರಮಮಂ
ಮಿಕ್ಕುಳಿದ ಋಷಿಗಳ್ಗೊಪ್ಪಿಸಿ ಬೆಸನಂಗೊಂಡು, ತಾನುಂ ಸುಕನ್ನೆಯುಂ
ವಾಯುಸುತನ ಪೆಗಲನೇಱೆ ವಾಯುವೇಗದಿನಯೋಧ್ಯೆಗುಯ್ದಿಟಿಪಿ, ಇನ್ನೆ
ಬರಂ ತಮ್ಮ ವಿಜಯಯಾತ್ರೆಯಂ ರಾಘವಂಗಱಿಪಿ, ಮತ್ತಮಾತನಾಣತಿ
ಯಿಂ ಬೆನ್ನನೆ ಶತ್ರುಹಂಗೆ ಬೆಂಬಲವಾಗಿ ಬರುತುಮಿರ್ದಂ.

ಎಂಬಲ್ಲಿಗೆ ಶ್ರೀರಾಮಾಶ್ವಮೇಧದೊಳ್
ಚ್ಯವನಾಶ್ರಮವರ್ಣನಮೆಂಬ ನವಮಾಶ್ವಾಸಂ ಸಂಪೂರ್ಣಂ.

---

## ದಶಮಾಶ್ವಾಸಂ

# ನೀಲಾಚಲದರ್ಶನಂ

ಎನ್ನ ನಿಚ್ಚದ ಪೂಜೆಯ ಕಟ್ಟಚ್ಚಿನ ಪ್ರಾಣಲಿಂಗಮೆ! ಎನ್ನ ಕೈಮರ್ಚಿನ    ೨೦
ಗೆಡೆಯಾಟದ ಮುತ್ತಿನ ಸೆಂಡೆ! ಎನ್ನ ಚೆನ್ನ ಪೊನ್ನರಸಿ!

ಇಂತು ಹಯಂ ಪಯೋಷ್ಣೀನದಿಯಂ ದಾಂಟಿ ಬಲ್ದೂರಂ ನಡೆನಡೆದು
ಪೋಗೆ ಪೆರ್ವೆಟ್ಟಂ ಮುಂ. . . . .

ಮನೋರಮೆ—ಎನ್ನರಸ! ನೀನೋರ್ವನಪೂರ್ವಂ ಬಣ್ಣಗಬ್ಬಿಗರ ಬಲ್ಲಹಂ
ಗಡ! ಪೋಪೋಪ ಬಟ್ಟೆಯೊಳ್ ಅಡವಿವೆಟ್ಟುಗಳನೆ ಬಣ್ಣಿಪಯ್. ಅಶ್ವ
ಮೆತ್ತಾನುಂ ನಾಡಂ ಪುಗದೆ?

ಮುದ್ದ—ಓ! ಆಗಡೆ ವಾಜಿ ವಾಜಿಪುರಮಂ ದಾಂಟಿ ಪೋದುದು.

ಮನೋ—ಏಂ ಬಲ್ಪುಳ್ಳ ರಾಯಂ ಕಟ್ಟಿ ಕಾದನೆ!

ಮುದ್ದ—ದಿಸಪತಿಯ ಪೆಂಕುಳಿರಾಯನೇಂ ಕಟ್ಟುಗುಂ! ಏತಱ ಬೀರಂ! ತಾನೆ ಕೈಗಟ್ಟಿದಂ.

ಮನೋ—ಶತ್ರುಹಂಗೆ ಕಾಣ್ಕೆಯಿತ್ತು ಮಱುವೊಕ್ಕನೇಂ?

ಮುದ್ದ—ಅಪ್ಪುದಪ್ಪುದು; ತಾಂ ತನ್ನ ನಾಡಂ ತನ್ನಂ ತನ್ನ ಬೀಡಂ ರಾಘವನ ಪೆಸರೊಳ್ ಶತ್ರುಹಂಗೊಪ್ಪಿಸಿದಂ.

ಮನೋ—ಆಃ! ಶತ್ರುಘ್ನಂ ಬಲ್ಗಡುಸುಗಾಱಂ.

ಮುದ್ದ—ತಡೆಯೇಂ! ಅಂತು ಮಱುವೊಕ್ಕು ಬಂದ ರಾಯನಂ ನಾಡಂ ಒಪ್ಪುಗೊಂಡು ಮುಂತೆ ಬರ್ಪಾಪಥದೊಳ್—

ಅಡಿಗಡಿಗೆ ಬದ್ದಬದಸಿಂ ಪಗೆದು ಪತ್ತುವಿಡಿಸಿ ದೆಸೆಗಿಡಿಸಿದೊಂದು ಬಗೆಗೇಡಿಂ ದೆಸೆದೆಸೆಯ ಕಟ್ಟಲೆಯ ಬಿಂದವೊಂದುಗೂಡಿ ಗುಂಡುಗೊಂಡು ತಮ್ಮ ಪಗೆಯ ಬೆಂಗದಿರನ ಬೊಂದಿಯಂ ಬಂದಿವಿಡಿವೊಂದುರವಣೆಯಿಂ ಬಾಂದಳಮನೇಱ ಪೋಪುವೆನೆ—ಸೆರೆದ ನೀರ್ವೊಟ್ಟಣದೊಳ್ ಬೆಳ್ಚಂತಿರೆ ವೈವೆರ್ಚಿ ನಿಗುರ್ದದೊಂದು ನೀಲಪರ್ವತಂ ಮಾಕಾಳಿಯ ಎಡವೊಲೆಯಂತೆ ವಿರಾಜಿಸಿದತ್ತು. ಅಂತದು ದಟ್ಟಯಿಸಿ ಮುಗಿಲ್ಮುಟ್ಟೆ ಬೆಳೆದ ಕರ್ಮರಂಗಳ ಱುಂಬಿನ ಬನಗಟ್ಟಲೆಯನೊಳಕೊಂಡೇಪೊಟ್ಟುಂ ಚರಿಪ ಖಗಮೃಗಂಗಳ್ಗೆ ತಣ್ಗೊಳನೊಂದು ಭ್ರಾಂತಿಯಂ ಪುಟ್ಟಿಸಿ ಒರ್ತರದಿಸಿಂಬುಗೊಂಡ ಕರ್ಮಣಿಯ ಪಾಸಱೆಯಿಂ, ಅಂದು ಚಂಡಿಕೆಯ ಕೂರ್ವಾಳಿಂ ಪೋಟ್ಗಡಿವೋದ ಮಹಿಷಾಸುರನ ಬಿರಿವೊಡೆಯಿಂ ಸುರಿದ ದಂಡೆಗರುಳ್ಗೆ ಪಾಸಟಿಯಪ್ಪ ಅರೆಜರಿದ ಜಾದಿನ ಕೋಡುವೆಟ್ಟನೊತ್ತುಗೊಂಡು ಸಿಂಧೂರವಿಲಿಪ್ತಮದಸಿಂಧುರಗಂಡ ಮಂಡಲದೊಂದು ಪಾಂಗಿನಿಂ ತೋರ್ಪ ತಪ್ಪಲಿಂ, ಪಗಲ್ಗೆ ಪಡಿನೇಸಱನೆ ಇರುಳ್ಗೆ ಪಡಿದಿಂಗಳೆನೆ ತೊಳಗಿ ಬೆಳಗಿ ಬೆಟ್ಟುವಗೆಯಂ ಪಗೆಯಿನಿಟ್ಟ ಕುಳಿಸದ ಕಡಿಕಂಡದಂತೊಪ್ಪುವಚ್ಚಪಳಿಕಿನ ಗಂಡಶೈಲದಿಂ, ನಿಚ್ಚವಯಣಂ ಬರ್ಪ ಜಾತ್ರೆಯ ಜನರ ಬಿರ್ದಿನ ಪಗಲೂಟದ ಬಾಣಸಿನಾವಿಗೆಯ ತಸಿಗೆಂಡ ದೋವರಿಯೆಂಬಂತು ತಟತಟನೆ ಪೊಳೆವ ರಂಗುಮಾಣಿಕದಗಪ್ತೆಯಿಂ, ಪುರುಷೋತ್ತಮನ ನಿಡುವಣೆಯ ತ್ರಿಪುಂಡ್ರದೊಂದು ಮಾಡ್ಕೆಯಿಂ ಮೂಱುಂ ಕೆಲನೊಳಿಟಿತರ್ಪ ಬೆಳ್ಳಂಬರಿವರ್ಬಿಯಿಂ, ಉಣ್ಣದರುಣ್ಬಮರ್ದುಮರ್ದಮರ್ದ ಪೊಂಬಾಜೆದೋಂಟದೊತ್ತಿನ ಪೇರುಚ್ಚದಿಂ, ಸಿದ್ಧರಸದ ಮಡುವಿಂ, ಪರುಸಗಲ್ಗಳಿಂ, ಮನೋಜ್ಞಂ.

ಮತ್ತಮಲ್ಲಿ ರನ್ನಗಲ್ಲೆಡೆಯ ಪುಲ್ಲ ನಲ್ಪಾಸಿನೊಳ್ ಚೆಲ್ಲದಿಂ ನಲ್ಲಳ್ವೆರಸು ನಿಲ್ಲದೆ ಕುಳ್ಳಿರ್ದು ಮೆಲ್ಲಮೆಲ್ಲನೆ ಲಲ್ಲೆಗಱೆವ ಬಲ್ಲತನದ ಸೊಲ್ಲಸೊಗದ ಭುಲ್ಲಣೆಯ ಕೊಲ್ಲಣದೊಳೆಸೆದುಮಲ್ಲಿಗಲ್ಲಿಗೆ ಮಲ್ಲಟಿದಿರಿವ ಪಲ್ಲ ಬಲ್ಲುಲಿಗೆ ಕಲ್ಲದಾಡುವ ಶೆಲ್ಲಯಿಸಿದ ಮಲ್ಲಗಿಳಿಯ ಸವಿನುಡಿಗೆ ಪಲ್ಲಟದ ಘಲ್ಲಣೆಯಲ್ಲಣೆಯ ಗಂಡುಗೋಗಿಲೆಯಿಂಚರಕ್ಕೆ ಪಲ್ಲಣಿಯ ಬೆಳ್ಳಿಂಗೋಲ್ವಿಲ್ಲನ ಮಲ್ಲಿಗೆಸರಲ ಜಲ್ಲಣೆಗೆ ತಲ್ಲಣಂಗೊಂಡು ಸಾವಗಿಸುವ ಸೋವನೋವದೆ ಬಾವೆಯೊಡನೆ ಪೂವ ಸೇವತಿಗೆಯ ಕಾವಣದೋವರಿಯುಂ ಸಾರ್ದು ಕಾವನಾಟದೊಳೇ ಪೊಟ್ತುಂ ಸೇವಿಸುವ ಬಿಜ್ಜೋದರರುಂ, ಮತ್ತಮೊಂದೆಡೆಯೊಳ್ ಕಡೆ ಗಣ್ಣೋಟಂ ಕುಡಿವರಿಯೆ ಕುಡುವುರ್ವು ಸೆಡೆಯೆ ಬಿಡುಜಡೆ ಜೀಡುವಿಡೆ ನಡು ಪೊಡೆಯೆ ನಿಡುಮೊಲೆ ಜಡಿಯೆ ತೊಡೆಯೊಳಿಟ್ಟೆಡೆಯೊಳಾನಿಸಿ ಜತೆಗೂಡಿ ೧೦
ದೇಱುಂ ಸರದ ಮೆಲ್ದನಿಯೋಜೆಯಿಂ ನುಡಿವಂತು ಮಿಡಿದು ಮಿಡಿದಂತು ಪಾಡಿ ಬಿನದಿಪ ಕಡುಬೆಡಗಿನಚ್ಚರಸಿಯರುಂ, ಮೇಣುಂ ಪೆಱತೊಂದು ತಾಣದೊಳ್ ತಮ್ಮ ನಿಚ್ಚವಸದನದ ಸಿಂಗರಕ್ಕೆಂದು ಸಿಂಗನೆಱಗಿ ಮಿದು ಱುಂಡು ಕೆಲಕೊಕ್ಕ ಮುತ್ತಾನೆಯ ಆಣಿಮುತ್ತುಗಳಂ ಮತ್ತಂ ಬಟಿಯೆಡೆ ಯೆಡೆಯ ಕೆಂಬರಲಿನೋರನ್ನಮಾಗೆ ಕಂಪುಗುವ ಪಾರಿಜಾತದ ಮಂದಾರದ ದುಂಡುಮಲ್ಲಿಗೆಯ ಸೆಂಡುಮಲ್ಲಿಗೆಯ ಜಿರಿಮುಗುಳಂ ತಿಱಿದೊಟ್ಟಿ ಮಾಣಿಕದ ಡಕಿಲ್ವಟ್ಟೆಯೊಳ್ ತುಂಬಿ ಮೊಱೆದು ಬಟಿಸಲ್ವ ಮೇಳದ ಮೇಳಂಬಂಗಳ್ ಮುಸಱದಂತು ಮೇಲುಡಱ ಕಿಪ್ಸೆಱಂಗಂ ಬಾಸಣಿಸಿ ಬೆನ್ನನೆ ಬರ್ಪ ಜೋಲೆಗರ ಬರವಂ ನಿರುಕಿಸುತುಂ ನಿಲ್ವ ಪೋಪ ದೇವಾಂಗನೆಯರುಂ, ಕಣ್ಗೆವರ್ಪರ್. ೨೦

ಇಂತು ಕರಮೊಪ್ಪುವ ಕಾರಾನೆಯ ಕಾಳಸಿಂಗನ ಕರ್ಗೋಡಗನ ಕರ್ವಕ್ಕಿ ಯಿಕ್ಕೆಯಾದ ಕರ್ಮುರನ ಕಕ್ಕೆಯ ಕರ್ದಾಟೆಯ ಕರ್ಮಣಿಯ ಕರ್ಗಲ್ಲ ಕರ್ವೆಟ್ಟಮನಿಟ್ಟೆಡೆಯೊಳ್ ದಿಟ್ಟಿಸಿ ಸುಮಿತ್ರಾತ್ಮಜಂ ಸುಮತಿಯಂ—ಎಲೆ ಅಜ್ಜಮಂತ್ರಿ! ಮುಂತಿದೆ ಕಾಳರಕ್ಕಸಿಯ ಪಾಳೆಯದ ಕರ್ವಟ್ಟೆಯ ಗೂಡಾರ ಮೆಸೆ ಕಟ್ತಲೆಯ ಜೀಡಾರದೊಂದಿರವಿಂ ತೋರ್ಪ ಕಾರೊಡಲ ಬಲ್ವೆಟ್ಟಂ ಏನೆಂದು ಪೇಟಿಯ್, ಎಂಬುದುಂ; ಸಮಸಂದ ಮುದುಪಿನಱಿವಿನೊಂಪೆತ್ತರ ಮಂಗೈನೆಲ್ಲಿಯಾಗೆ ತಾನಿಂತು ಪೇಟ್ದನೆಂತೆಂದೊಡೆ :—

ಬಲ್ಲಾಳ್ಗಳ ಜಿರುದರ ಮನ್ನೆಯರರಸ! ಸರಸಿಜಾಕ್ಷನ ಬಿತ್ತರಂಬೆತ್ತ ಪುತ್ತೆನೆ ಆತೋರ್ಪುದೆ ನೀಲಾಚಲಂ. ಪರರೊಡಮೆಯನಟಿಪುವ ಬವಸಿನ ಕೂಟರ್ಗೆ, ಪೆಱವೆಂಡಿರ್ಗೆಳಸುವೊಂದು ಬೆಸನದ ಸೂಳರ್ಗೆ, ತನ್ನಱಮಂ ೩೦

ಮಾಱುಗೊಟ್ಟು ಪಸುವಾಳ್ವ ಗೊಂದೆಬೊಂದಿಗೆ, ಸಂದುಗೊಂದಿನೊಳಡಂ
ಗಿರ್ದು ಬೞಿವೋಕರಂ ಕೊಲ್ವ ಕಳ್ವ ದುಱುದುಂಬಿಕೊಲೆಗಂಗೆ, ಪೆತ್ತ ಕೊಡ
ಗೂಸಂ ಪಣಕೆ ಮಾಱುವಾಡಿ ಒಡಲಂ ಪೊರೆವೞಿಬಡಲಿಂಗೆ, ಪೞನುಡಿಯಂ
ಪೞಿದು ಮೀಹಜಾನಂಗಳನುೞಿದ ಬೊಮ್ಮವೊಲೆಯಂಗೆ, ಬೆಸಲಾದ ಮಡ
ದಿಯಂ ಬಡಿವ ಮಾನಸರಕ್ಕಸಂಗೆ ಕಣ್ಗೆ ಕಾಣಲ್ಬಾರದೊಂದು ವೈಮೆವೆತ್ತು
ನಿಂದಿರ್ಕುಂ. ಮತ್ತಮೀಪೆರ್ವೆಯ ಪೆರ್ವೆಟ್ಟಿನ ತುತ್ತತುದಿಯ ತಪ್ಪಲೊಳ್
ತನ್ನಂ ಮಱೆವೊಕ್ಕು ತುೞಿಲ್ಗೆಯ್ದು ಸೇವಿಸುವಱುಕೆಯ ದಾಸರ್ಗೆ ಮಱು
ವುಟ್ಟಂ ಪೋಗೊಳಸಿ ಸಾರೂಪ್ಯಮನಿತ್ತು ತನ್ನಂತು ಮಾಳ್ಪ ನಾಲ್ದೋಳಿನೆಸೆವ
ಪುರುಷೋತ್ತಮನೊಂದು ವಾಸದ ಗುಡಿಯಿರ್ಕುಂ. ಆವನಾನುಂ ಭಕ್ತಿಯಿ
೧೦ ನಾಕ್ಷೇತ್ರದೊಳ್ ಸೇವಿಸುತ್ತುಮಿರೆ ತನ್ನಿಂ ತಾನೆ ಚತುರ್ಭುಜನಕ್ಕುಂ.
ಸಂಕಿನ ಬಟ್ಟಗೈದಿನಗಜೆಯ ತಾವರೆಯ ಸೊಬಗಿನ ಪೊರ್ದುಗೆಯಿನೆಸೆಗುಂ.
ಇದರ್ಕೊಂದಿತಿಹಾಸಮಂ ನೇರ್ಪಡೆ ಪೇೞ್ವೆನೆಂತೆನೆ:—

ಈ ಜಂಬುದೀವಿಯೊಳ್ ತೆಂಕಲ್ಗೆ ಅಲ್ಲಿಗಲ್ಲಿಗೆ ಸಂಚರಿಪ ಕೇರಳಿಯರ
ತಳಿರಡಿಯ ಲೆಪ್ಪದಲತಿಗೆವೊನ್ನಿಂ ಕೊರ್ವಿ ಬೆಳೆದ ಕೆಯ್ವೊಲನಿನತ್ತಲಿತ್ತಲೆಡೆ
ಯಾಡುವ ಚೋಳಕಾಮಿನಿಯರ ಕೆಂಪಡರ್ದ ಕಡೆಗಣ್ಣ ಸವಿನೋಟದಮರ್ದಿನ
ಪೊಯ್ನೀರಿಂ ತಳ್ತು ಪರ್ಬಿ ಸಳನಳಿಸುವ ಪೂದೋಂಟದಿಂ ಒಡನೊಡನೆ
ಜತೆಗೂಡಿ ನಡೆದಾಡುವ ಪಾಂಡ್ಯನಾರಿಯರ ಮೆಯ್ಯಪಚ್ಚದ ಪೊಸವೊಗರಿಂ
ಬಣ್ಣವೆರ್ಚಿ ಮಿಱುಗುವ ಸೌಧಂಗಳಿಂ ರಂಜಿಸಿ ಸೌಭಾಗ್ಯಲಕ್ಷ್ಮಿಯ ಕಾಂಚೀ
ದಾಮದ ಪೊನ್ನಕೀಲೆನೆ ತೋರ್ಪ ಕಾಂಚೀಪುರಮುಂಟು.

೨೦ ಮುನ್ನಮಾಪೊೞಲಂ ರತ್ನಗ್ರೀವನೆಂಬೊರ್ವಂ ಕೈಯ್ದುಕಾಱರ ದೇಪಂ
ಮಾರ್ಮಲೆದು ಕೆಯ್ಗೆಯ್ವ ಪಗೆರಾಯರ ಅಟ್ಟೆಯ ಕೆನ್ನೀರ ಬೆನ್ನೀರಿಂ
ಬೀರಸಿರಿಯಂ ಮೀಯಿಸುತುಮಾವಗಂ ಮಱೆವಾಳ್ವ ಸಾವಂತ ಪೆರ್ಗಡೆಯರ
ನಾಡಿನ್ನೈಸಿರಿಗಣಿಯರಂ ಸೆಲೆವೀಡನಾಗಿಸುತುಂ ತನ್ನೊಂದೇಱುಂಜಸದೆಸಕದಿಂ
ದೆಸೆವಳರ್ಗೆ ಪೊಸಮಾಡಮುಂ ನೇರ್ಪಡಿಸುತುಂ ಪಲವುಂ ಪಗಲರಸಾ
ಳುತಿರ್ದಂ.

ಇಂತು ಕೆಲವಾನುಂ ಕಾಲಂ ಪೋಗೆ ಮಾರರಾಯಂ ಸಿರಿಪೊೞ್ತಿನೊಳೊರ್ಮೆ
ಜಾನಂಬೊಕ್ಕು ಬೞಿಯಂ ಬೞಿಯರಸಿಯ ಮೊಗಮಂ ನೋಡಿ ಬೇಸಱೊಂದು
ಮಾತಿನೊಳೆಂಗುಂ:—ಎನ್ನರಸಿ! ಸಂಸೃತಿಯೇನಪಾರಮೊ! ಎನಿವಿರಿದೊ!
ಇನಿಗಾಲಂ ಸವೆದೊಡಂ ಸವೆಯದೆ! ಪಂಜರನೊಂದು ಪಕ್ಕಿ ತಾಂ
೩೦ ಸಂತಂ ಸೊಗಂ ಬಾೞಲಿರ್ಪಾ ವನರಾಜ್ಯದಱಿಸಂ ಮಱೆದು ತನ್ನ ಬಂದಿವಾೞ್ಗೆ

ಯೊಳೆ ದಿನದಿನದ ಪಾಲ್ಪಣ್ಗಳಸಿನಿದಿನಿದಾಗಿ ಸವಿಯುತುಂ ನಿಶ್ಚಿಂತಮಿ
ರ್ಪಂತಿರಿದೆ ಮಾನಸಂ ಪ್ರಪಂಚದೊಳ್ ಮಾಯೆದಾವಿಂ ಕಟ್ಟುವಡೆದು
ಬಗೆವಗೆಯ ನಶ್ವರಭೋಗಂಗಳ್ಗಾಸೆವಡುತುಮೆಣಿಸುತುಂ ಪರಮಂ ಮಱೆ
ದಿರ್ಕುಂ. ಆಃ! ಲೋಗರ ಲೋಕದ ತೃಷ್ಣೆಗೆ ತಡಿಯುಂಟೆ! ಸಾಜಂ. ತಾಂ
ತನಗೆಂಬೊಂದು ಬಿಮೆಯಿಃಂ ನರನಟಿಗುಂ. ಹಾ! ಜೋಲ್ದುಂ ಸಡಿಲ್ದುಂ
ನರೆತುಂ ಬಱತುಂ ಸುರ್ಕಿಯುಮಿಱುದುಮಟಿದುಂ ಪೋಪೀಮೆಯ್ಯಂ ನಿಚ್ಚ
ಮೆಂದೆ ನಂಬಿ ಸೊಮ್ಮಿಂ ಪೆರ್ಕಳಿಸುವಂ ಗಾಂಪನಲೇ! ಏಂ ಬಯಲಾಸೆಯೊ!
ಆವಗಂ ಸೊಗಮುಂಟೆ! ಪೋಕೆ! ಒಲ್ಲೆನೊಲ್ಲೆನೀರಾಜ್ಯಭಾರದೊಂದು ದಂದುಗ
ದೆಡರಂ. ಅದಱನೀಪೊಱೆಯಂ ಎನ್ನ ತೋರದ ಬೀರದ ಮಗನೊಳೇಱರಿಸಿ
ಮನಂ ನೆಮ್ಮುಗೆಗೊಂಡು ನೆಲೆನಿಲ್ವಿನಂ ತೀರ್ಥಾಟನಂಬೋಗಲೆಣಿಪೆಂ. ೧೦
ನೀನುಮಾನುಂ ಪೋಪಂ. ಪುರುಳೇಂ ಬಱುವಾಪ್ಕೆಯ ಬರ್ದು*ಂಕಿನೊಳ್!

ಸೌಮಿತ್ರಿ! ಇಂತರಸನರಸಿವೆರಸು ಸಂಸೃತಿಯೊಂದು ಬಾಧ್ಗೇಡಂ ಕುಱಿತು
ಮಾತುಗುಟ್ಟುತಿರ್ದುಂ ಬಿರ್ದುಣಿಸಂ ಮರ್ದುಣಿಸೆಂಬಂತಿರುಂಡು ಸೆಜ್ಜೆವನೆಗೆ
ಪವಡಿಸಲ್ಕೆಂದು ಪೋದಂ. ಅಂತು ಬಗೆಯ ಬಗೆವಗೆಯ ನೆನೆಪಿನ ಕಳವಳದಿಂ
ನಿದ್ದೆವೋದ ರಾಯಂ ಕಡೆಯಿರುಳೊಳೊರ್ವಂ ಪಾರ್ವಂ ಬಂದು ತೀರ್ಥ
ಯಾತ್ರಾಫಲಮುಂ ತದುಕ್ತವಿಧಿಯುಂ ನೆಱೆತಿಳಿಪಿ ಮಾಯುಮಾದೊಂದು ಕನಸಂ
ಕಂಡು ಪೊಟ್ತುಱೆಯೊಳೆಟ್ದು ನಿತ್ಯಕರ್ಮಂಗಳಂ ಗೆಯ್ದೋಲಗಮುಂ ಪುಗುತಂದಂ.

ಆಪೊಟ್ತಿಂಗೆ ಮೂಡಿವರ್ಪ ನೆಗಳೆಗದಿರನ ತೇಜಮುಂ ಪಡಿತಳಿಸಿ ಕಡೆಗಣ್ಮುವ
ಸಿರಿವೊಗದ ಕಾಂತಿಯಿಂ, ಗಂದರಗಿವಿಯನ ನಡುನೆತ್ತಿಯಿಂ ತಿರೆಗೆ ಭೋರೆಂದು
ಧೀಂಕಿಡುವ ಸುರಗಂಗೆಯೊಂದು ಬೆಳ್ಪೊನಲ್ಗೆ ದೊರೆವರ್ಪ ಬಿಡುಜಡೆಯ ೨೦
ಬೆಳಗಿಂ, ತಳ್ತೈಕಿಲ ಪುಡಿಗಪ್ಪುರದ ಮಲ್ಲಿಗೆಯ ಪಾಲ್ಗಡಲ್ನೊರೆಯ ಸಮಸಂ
ದೊಂದು ಬೆಳರ್ಪಿಂ ರಾಜಿಪ ಮೆಯ್ಯಿಂ, ಅತ್ರಿಪುತ್ರನ ಕೈಗುಂಡಿಗೆಯಂ
ಕೀಱ್ಮಾಡುವೊಂದು ಪಳಿಕಿನ ಕರವತಿಗೆಯಿಂ, ನಾರಾಯಣನ ನಾಲ್ಕುಂ ತೋಳ್ಗೆ
ಪಡಿವರ್ಪ ನಾಲ್ದೋಳಿಂ, ಚೆಲ್ವಾದ ಭೂಸುರಂ ಚಾವಡಿಗೆ ಪಡಿವೊಗನಾಗಿ
ಬರುತುಮಿರ್ಪುದಂ ಕಂಡು ರಾಯನಿದಿರೆಟ್ದು ವಂದು ತಲೆವಾಗಿ ಕೈಗೊಟ್ಟು
ನಡೆಯಿಸಿ ತಂದು ಪೊನ್ನಗದ್ದುಗೆಯೊಳ್ ಕುಳ್ಳಿರಿಸಿ ಯಥೋಚಿತಂ ಪೂಜೆಸಿದಂ.
ಮೇಣುಂ ಸುಖೋಪವಿಷ್ಟನಾದಾಭೂಸುರನಂ ಒರ್ದೊಂದು ನುಡಿಗುಟ್ಟಿ ಕುಶಲ
ಪ್ರಶ್ನೆಯಂ ಬೆಸಗೊಂಡು ಮತ್ತಂ—ದೇಸಿಗರಾಣ್ಮ! ಬೆಳೆರ್ಮೆಯ್ಯನಾಂತ
ಪಕ್ಕಿದೇರನಂತುಂ ನಾಲ್ಗೈವೊತ್ತ ಚಾಂಬೊಜ್ಜದಲೆಯನಂತುಂ ಒರ್ತಲೆಯ
ಪೊಂಬಸಿಱನಂತುಂ ನಿನ್ನಂ ಕಾಣ್ಬೆಂ. ಇಂದಿಂಗೆನ್ನೀಪುಟ್ಟು ಕಟ್ಟುಗೆಟ್ಟುದು. ೩೦

ಆಃ! ನಿನ್ನನೆ ಕಱುಪಿಟ್ಟು ಪೇೞ್ದುದಕ್ಕುಂ ನಿನ್ನಿನೊಂದು ಕನಸು. ದಿಟ್ಟಂ!
ಪುಟ್ಟುಟಿವಟಿವೆಂಬ ಕಟ್ಟುಬ್ಬಸದುರ್ಬಿನ ಕಡಲೊಳೊಡಲೋಡಮಂ ಪೋವಿಟ್ಟಿ
ನಗೆ ನೀನೆ ಪುಟ್ಟು. ಇನ್ನೇಂ? ಮಱುಮೆಯ್ಯೊಳೀಬನ್ನಮಂ ಕಾಣಲ್ಬಾರದಂತು
ಕರುಣಿಸಯ್! ಮರ್ತ್ಯರ್ ತೀರ್ಥಯಾತ್ರಾದಿಸತ್ಕರ್ಮಂಗಳಿಂ ಪಾವನರಪ್ಪ
ರೆಂಬರಲ್ತೆ. ಅಂತಿರ್ಪಿನಂ ತೀರ್ಥಯಾತ್ರೆಗಾವ ಕ್ಷೇತ್ರಂ ಮೊದಲ್, ಆವುದು
ಪೆರ್ಮೆಯ್ಮೆಗೆಡೆ? ನೀಂ ಜಾತ್ರೆಗನಲೆ! ಕೂರ್ಮೆಯಿಂ ನಿರವಿಸೆಂದು ಕೈಮುಗಿ
ವುದುಂ; ಭೂಸುರಂ—ರಾಜಕಂಠೀರವ! ನೀಂ ಶುದ್ಧಾತ್ಮಂ. ಪೂರ್ವಜನ್ಮ
ವಾಸನಾವಿಶೇಷದಿನಿಂತೊಂದು ಬಯಕೆ ಪುಟ್ಟುಗುಂ ಜನರ್ಗೆ. ಕೇಳೈ!
ಸಮಸ್ತಕ್ಷೇತ್ರಂಗಳೊಳಂ ಶ್ರೀರಾಮನೆ ಪಾವನನಾತನಯೆ ಕೀರ್ತಿ, ಆತನಯೆ
೧೦ ಮೂರ್ತಿ, ಆತನಯೆ ಮೈಮೆ, ಆತನಯೆ ಪೆರ್ಮೆ. ಇವಱೊಳೊಂದು ಪುಣ್ಯ
ಕ್ಷೇತ್ರಮೆನೆ ಪ್ರಸಿದ್ಧಕ್ಷೇತ್ರದಿರವನೊರೆವೆಂ :—

ಮುನ್ನಂ ಗಾವಿಲನಾಂ ಸೈಪಿನೊಂದೆಡೆಯನಾಯ್ವೆನೆಂದು ಪೆಸರ್ವೆತ್ತ
ತೀರ್ಥಕ್ಷೇತ್ರಂಗಳೊಳ್ ಸಂಚರಿಸುತಿರ್ಪನ್ನಂ ನಡುವಟ್ಟೆಯೊಳ್ ಪಲಂ
ಬರಂ ಕರ್ವೇಡರಂ ಕಂಡೆಂ. ಕೊರಲ ತೊಳಚಿಯ ಮೆಲ್ಗುಡಿಯ ತೋರದಂಡೆ
ವಿರಾಜಿಸೆ ಪಣೆಯ ಮೂಱುಂಗವಲ ನಿಡುನಾಮಮೆಸೆಯೆ, ಮೆಯ್ಯ ಕರ್ಬೊಗರ್
ಮುಗಿಲ್ಗೆ ಪಾಸಟಿಯಾಗೆ ಆಳವಟ್ಟ ನಾಲ್ಗೈಗಳೊಳ್ ಪೊತ್ತ ಕೈದು
ತೆಱಂಬೊಳೆಯೆ ವಿಷ್ಣುದೂತರೆನೆ ಬಲ್ಲಿದರಪ್ಪ ಶಬರರಂ ದಿಟ್ಟಿಸಿ ಕಟ್ಟಚ್ಚರಿವಟ್ಟ
ವರೊಂದು ವೃತ್ತಾಂತಮಂ ಬೆಸಗೊಂಡೆನದರ್ಕಾ ಪುಳಿಂದರೊಳೊರ್ವನಿಂತು
ಬಿತ್ತರಿಸಿದಂ :—

೧೫ ಚಿತ್ತವಿಸಯ್ ಗಹನರೊಡೆಯ! ಇದೆ ಪೊಂಬೆಟ್ಟದೊಡನೆ ತೂಗೆವರ್ಪ
ಕರ್ವೆಟ್ಟು. ಮುತ್ತ ಕಾಲದೊಳೊರ್ಮೆ ಬೇಂಟೆಯೊಂದು ಬೆಸನದಿಂ ಆತೋರ್ಪ
ನೆರೆವೆಟ್ಟಿನೆಮ್ಮ ಪಕ್ಕಣದಿಂ ತಳರ್ದು ಬಳಗಂಬೆರಸೀ ಅಂಜನಗಿರಿಯೆಡೆಯ
ಕಿಬ್ಬರಿಯ ಪಱುವೊಳ್ ಸರವಿವೋಪುದುಂ ಎಮ್ಮ ಬಾಲರ್ಕಳೊಳೊರ್ವಂ
ತನ್ನಣೆವರೆಯದ ಗೆಣೆಯರ ಕೂಡಾಡುತೆ ಕಣ್ಮಱೆಯಾಟಕ್ಕೆ ಮೆಯ್ಗರೆದಡಂ
ಗಿರಲ್ಕೆಂದು ಮೆಲ್ಲಮೆಲ್ಲನೆ ತುತ್ತುತುದಿಗೆ ಪೋಪೋದಂ ಗಡ! ಅಂತು ಪೋದ
ಬಾಲಕನ ಕಣ್ಗೊಂದು ಬೆಲೆವಣಿಗಟ್ಟಿನ ದೇವಾರಂ ತೋಱುವರ್ಪುದುಂ, ತನ
ಗದು ಮಱೆಯೊಂದು ತಾಣಮೆಂದೊಳಪೊಕ್ಕಂ. ಆಗಳೊಳಗೊಳಗೊಂದೆಡೆ
ಯೊಳ್ ಪರುಟವಣೆಯ ಗಾನದ ನಚ್ಚಣೆಯ ಬಾಜಣೆಯ ಬಿಜ್ಜೋದರರ
ಗಂದರರಚ್ಚರರ ಗಜಬಜಿಂ ತೇರೈಸಿದ ಕುಂಚದ ಕಂಚುಗನ್ನಡಿಯ ಬಿಜ್ಜಣಿ
೨೦ ಗೆಯ ದೇವಾಂಗನೆಯರ ಗೊಂದಣಂ, ಸೇವಿಪ ಭಾವಿಪ ಸಂದ ದೇವರ್ಕ

ಳೊಂದೊಗ್ಗರಂ, ಓಲೈಪ ಸೂೞುತೆಱಗುವ ಬೇಡುವ ನೋಡುವ ದೆಸೆಗೊಡೆಯ
ರೋಳಿ, ಎತ್ತುವಾರತಿಯ ಪೊಗೆವ ದೂಪದ ಬೆಳಗುವ ದೀಪದ ಪೊಸನೋಟಂ
ತನ್ನಂ ಬೆಮೆಗೊಳಿಸಲೊಡಂ; ಪಸುಳೆಗುವರಂ ತನ್ನ ಕಟ್ಟಿದಿರ ಪುರುಷೋತ್ತಮ
ಮೂರ್ತಿಯನೆವೆಯಿಕ್ಕದ ನಡುನೋಟದಿಂ ದಿಟ್ಟಿಸುತೆ ಕುಳ್ಳಿರಲೊಡಂ; ಭು
ಭೂ ಭೂ ಎಂದು ಪೂರಯಿಪ ಶಂಖದ ಧೞಂ ಧೞಂ ಧೞವೆಂದು ಮೊೞಗುವ
ಭೇರಿಯ ತುತ್ತುತ್ತುರೆಂದು ಸೂಳಯಿಪ ಪೆಗ್ಗಾಳೆಯ ಬಲ್ಲುಲಿಯೊಳ್ ಮಾಪೂಜೆ
ಸಮಸಂದುದು. ತಱುವಾಯಿಂ ಪರಿವಿಡಿಯೊಳೆಡೆಗೊಂಡ ಪಂತಿಗೆ ತೀರ್ಥಪ್ರಸಾ
ದಂಗಳನೋರಣದಿಂ ಪಚ್ಚುಗೊಟ್ಟುಂ ಸವಿದುಂ ತಂತಮ್ಮೆಡೆಗೆ ಪೋದಿಂಬ
ೞಿಯುಂ ತನ್ನ ಪಾಲ ಸಿಕ್ಥಕಮನುಂಡೆಮ್ಮಳಿಯನುಂ ಪೊಱಮಟ್ಟಂ. ಇನಿಪೊ
ೞ್ತುಂ ತಡೆದೆಂ, ತೆತ್ತರೇಂ ಬೈವರೊ ಕಾಣೆನೆಂಬೊಂದು ತಳಮಳದಿಂ ಬಿಮ್ಮನೆ　೧೦
ಬರ್ಪಾಹೂನ್ಯದೊಂದು ರೂಪಿನೆಮ್ಮ ಮುದ್ದುಗುವರನಂ ಕಟ್ಟಿದಿರೊಳ್
ಕಂಡು ನೊಂಡಿಲೊಂದು ಚೆಲ್ವಿನ ಪಲ್ಲವೞಿ ಬಗೆಯೊಳೊಡರ್ವಂತು ಪೊತ್ತ
ನಾಲ್ದೋಳ ಶೋಭೆಯು ಕಂದನೊಂದಿರಂ ಮನಂಬುಗಲೊಡಂ ಸಂತಸದಚ್ಚರಿ
ಯೊರ್ಮೊದಲೊಳೊಗೆತರ್ಪುದುಮೀಕತೆಯನಾತನಂ ಕೇಳ್ದೆವು. ಆಗಳ್ ತಾಂ
ಪೋದುದಂ ಕಂಡುದಂ ಕೊಂಡುದನುಂಡುದಂ ಮತ್ತಂ ಬರ್ಪಾಬಟ್ಟೆಯೊಳೆ
ಪೊಸತೋಳ್ ಕವಲೊಡೆದುದನೆಮಗೆ ತಿಳಿಯೆ ಪೇೞ್ದುಂ ನಡೆದುಂ ಬೞಲದೆ
ನುಡಿದುಂ ಬೇಸಱದ ತನ್ನವತೆಯಂ ತೋಱಿಸಿದಂ. ಏೞುದರರಸ! ಪಾರದಂ
ಸಿದ್ಧರಸಮಾದೊಂದು ಸಂತಸಂ ಬಾಲನಿರವಂ ಕಂಡೊಡಪ್ಪುದುಂ ಆವೆಲ್ಲರುಮಾ
ನೀಲಗಿರಿಯ ಮುಗಿಲ ನಿಗರದ ಶಿಖರಮನೇಱಿ ಮೈವೆವೆತ್ತ ಶ್ರೀಪುರುಷೋತ್ತ
ಮನಂ ಕಂಡು ಇಂತು ಪಾವನರಾದೆವಯ್! ಎಮಗಾವಗಂ ಪಸಿವುನಿದ್ದೆಗಳ　೨೦
ನೋವಾಗದು. ನೀನುಮಾಕಾರುಣಿಕಮೂರ್ತಿಯಂ ಕಣ್ದಣಿಯೆ ಕಂಡು
ಪೋಗೆಂದೆನಗೆ ಬಟ್ಟೆದೋಱಿ ಬೇಡರ್ ತಮ್ಮಾವಾಸದತ್ತಲ್ ಸಂದರ್.

ಇಂತು ತನ್ನ ಮುನ್ನೊಡಲೊಗೆತನದ ಸುಕೃತವಿಶೇಷದಿನಾಬೇಡರೊಂದುಪ
ದೇಶಮನೊಪ್ಪುಗೊಂಡು ಪೆಸರ್ವೆತ್ತ ನೀಲಶೈಲಮನಡರ್ದು ಆದಿಮೂರ್ತಿಯ
ದರ್ಶನದಿನಾನುಮಾತನ ಸಾರೂಪ್ಯಪದವಿಯೊಳ್ ಸಂದು ಬಂದೆನರಸಾ!
ಈಗಳಾನುಂ ನಿಶ್ಚಿಂತಂ. ನಿನಗಮೀ ಬಗೆವಗೆಯ ಪೊಱೆ ತಿಣ್ಣಮಾಗೆ ಸಿಕ್ಕುವ
ಮಾದೈವದೊಂದು ನೆರಂ ಪಾರಲಪ್ಪುದೆಂದು ಕಥಿಸಿದಂ.

ಲವಣಾಂತಕ! ಇಂತು ತನ್ನೊಂದಿರವಂ ಕೇಳಿಸಿದ ಬ್ರಹ್ಮಬಂಧುವಂ
ರನ್ನಗೊರಲಂ ಮತ್ತಮುದೊರ್ಮೆ—ಲೇಸುಲೇಸಯ್! ನೀಂ ಧನ್ಯಂ ಸಾಜಂ,
ನಿನ್ನೊಂದು ದರ್ಶನಮಪ್ಪಿನಮಾನುಂ ಧನ್ಯನೆಂ. ಆದೊಡಮಂತೇರ್ಪಟ್ಟ　೩೦

ಕ್ಷೇತ್ರಮಂ ಕಣ್ಣಾರೆ ಕಂಡು ಬಂದ ಭವದ ಬವಣೆಯೊಂದದಂತುಂ ಮುಂದಣ
ಭವದ ಭಾವಂ ಬಾರದಂತು ತಡೆಗೆಯ್ವುದೇ ಮೇಲ್. ಅಂತದುಕಾರಣಂ
ನೀನೆ ನಾಯಕನಾಗಿ ಕೊಂಡುಯ್ದಾ ಕ್ಷೇತ್ರಮನೆಮಗಂ ತೋಱಿ, ಎಂಬುದುಂ;
ವಿಪ್ರಂ—ತಪ್ಪೇಂ! ಬರಲಪ್ಪೆಸೆಂದು ಸಂತವಿಡೆ, ಜಾತ್ರೆಯ ಪಯಣಕ್ಕೆ
ಪವಣಾದ ಸನ್ನಣಮಣಿಯಾದುದು. ಆ ಪೊತ್ತಿಂಗೆ ಪೊೞಲ ಕೇರಿಕೇರಿಯ
ಬೀದಿಬೀದಿಯೊಳೆತ್ತಂ—ಓವೊ! ಒಗೆತನದ ದಂದುಗೆಯ ಬೇಸೆಯ ಸೂಡಿಂ
ಬೇವರ್, ಸಂಸೃತಿಯ ಕಣ್ಣಿವಲೆಯೊಳ್ ಕಟ್ಟುವಡೆದು ನೋವರ್, ಮುಂಚಿ
ಬಂದ ಸಂಚಿನ ಪ್ರಪಂಚದ ಕೊಲೆಗುತ್ತದ ಬೇಸಗೆ ನರಲ್ವರ್, ಅಱುವಗೆಗಳ್ಗೆ
ತಮ್ಮಂ ಮಾಱುಗೊಟ್ಟ ತೊತ್ತಿರ್! ಇದೆ ಮಾರಾಯಂ ತೀರ್ಥಯಾತ್ರೆಗೆ
೧೦ ಪೊಱಮಡುಗುಂ; ಮನಮುಳ್ಳರ್ ಬರಲಕ್ಕುಮೆಂದು ಡಂಗುರಮಂ ಸಾಱುವಂತಿ
ರಂಕವಱೆ ಮೊೞಗಲೊಡಂ, ತಮಗೀಬಾೞ್ಕೆಯೇಂ ಬಾೞ್ತೆಯೆಂದು ಪೌರ
ರೆಲ್ಲರ್ ಪೊಱಮಯಣಕನುವಾದರ್.

ಇಂತು ಕೊಂಗರ ಕೊರವರ ಮಡಿವಳರ ಕಮ್ಮಱರ ಕುಂಬಱರ ಕಂಚು
ಗಾಱರ ದೂಸಿಗರ ಪೂವಡಿಗರ ಸಮ್ಮಗಾಱರ ಬಲೆಗಾಱರ ಪರದರ ಕ್ಷತ್ರಿಯರ
ಪಾರ್ವರ ನಾಡಿಗರೊಂದು ಜಂಗುಳಿ ಶ್ರೀರಾಮನ ನಾಮದ ಜಾಸದೆ ನಾಡಂ
ಬೀಡಂ ಕಡೆಗೊತ್ತಿ ಪೊಱಮಟ್ಟರಪ್ಪುದುಂ ರಾಜಸೇಟ್ಟಿರದಟ್ಟೆಯಿಂ ತನ್ನ
ವರ್ವರಸು ಸಬಳದ ಕೊಂತದ ಕೂರ್ವಾಳ ಬಿಲ್ಲ ಬಾಣದ ಮೈಗಾವಲರೊಡನೆ
ಮಂಗಳಯೋಗದೊಳ್ ಶ್ರೀರಘುಪ್ರವರನಡಿಯ ತುಟಿಲ್ವಾಡಿನ ಬೀಣೆಯ
ಜವಳಿಮದ್ದಳೆಯ ಕಂಸಾಳೆಯ ಸಂಕಿನ ಕಾಳೆಯ ಮೇಳದವರ್ ಕೂಡೆ
೨೦ ಬೀಡಿಂ ತಳರ್ದು ದಿನವಯಣದೊಳ್ ಜಾತ್ರೆವೋಗುತುಮಿರ್ದಂ.

ಲಾಲಿಸು! ಶತ್ರುಘ್ನ! ಈ ಬಗೆಯಿಂ ರತ್ನಗ್ರೀವಂ ತನ್ನೊಂದಿಗರೊಡನೆ
ನಿಚ್ಚವಯಣದೊಳ್ ಪಲವುಂ ದಿನಂಬರಂ ಬಟ್ಟೆವಟಿಯೋರೊಂದು ತಾಣದ
ಪುಣ್ಯಕ್ಷೇತ್ರಂಗಳ ದರ್ಶನಂಗೊಂಡು ಮುಂತೆ ಮುಂತೆ ಪೋಪೋಪುದುಂ;
ಪೊಂಬಸಿಱನ ಕೆಕ್ಕೆಯೊಳೊಸರ್ದ ಪುಣ್ಯಭೂಮಿಗಿೞಿತಂದು ಮೋದಂಬೆತ್ತು
ಮೋದಂಬಿಯನಟ್ಟಿ ಪಂಕಮುಂ ಸಂಕಮುಲುಂಜಿದ (?) ಸಂತರ್ಗೆ ನಿಚ್ಚಸಂ
ತಸದೆಡೆಯಂ ತೋಱಿ ಸೇವಕರ್ಕಳಿಂ ಸಂಭಾವ್ಯೆಯೆನಿಪ್ಪ ಗಂಡಕಿ ಕಾಣಿಸಿ
ಕೊಂಡಳ್.

ಈವೊಂದು ಮಾೞ್ಕೆಯಿಂ ಪೊನಲ್ವರಿವ ಕಣ್ಣಿದಿರ ಪುಣ್ಯವಾಹಿನಿಯುಂ
ದಿಟ್ಟಿಸುತರಸಂ ದಿನವಯಣಂ ಮಾಣ್ದೊತ್ತಿನೊಳೆ ಬೀಡುವಿಟ್ಟು ತಾನುಂ ವಿಪ್ರ
೩೦ ನುಮಿನಿವೊಟ್ತುಂ ಸಲ್ಲಾಪಂಗೊಂಡು ಮತ್ತಂ ಮುಂದೆಸೆಯ ತೊಱೆಯುಂ

ತೋಱು, ಇದೇತಱ ಪೊೞ್ಚಂ ನಿರವಿಸೆಂದು ಕೇಳಲೊಡಂ; ಭೂಸುರನಿಂತು ಬಣ್ಣಿಸಿದಂ.

ಕೇಳಯ್! ಜಗದೆ ದೊರೆವಡೆದ ಪಾಪದ ಕೋಡ್ಕೆಸಱ ಬೆಂಚೆಯೊಳ್ ಪಂದಿಯಂತಿರೆ ಪೊರಳ್ದು ನರಲ್ವೆಗ್ಗಿನ ಲೋಗರ್ಗೆ ಮೆಯ್ಗರ್ಚಲ್ಕೆಂದು ಬೊಮ್ಮಂ ಪೊಸತೆನೆ ಸಮೆದ ಗಂಡಕಿವೆಸರ ತೀರ್ಥಮೈಸೆ. ಆರಾನುಮೊರ್ವ ನೊರ್ಮೆ ದಿಟ್ಟಿಸಲೊಡಂ ಪಾವನಂ, ಮುಟ್ಟಲೊಡಂ ಶುದ್ಧಂ, ಸವಿಯಲೊಡ ಮಮರಂ, ಮುೞುಂಗಲೊಡಂ ಮುಕ್ತನಪ್ಪನೆನೆ ಈ ತೀರ್ಥದ ಮೈಮೆಯ ನಾವಂ ಬಣ್ಣಿಸಲಾರ್ಪನೊ! ನದಿಯೊಳಿರ್ಪ ಕಲ್ಲೆಲ್ಲಂ ಸಾಳಿಗ್ರಾಮಂ ವಲಂ. ಈ ಕಲ್ಗಳೊಂದು ಕಡುಪನೇಂ ಪೊಗೞ್ವೆಂ! ಭವರೋಗದೊಳಸವಳಿದು ನವೆವ ರೋಗಿಗಿಂತೊಂದು ಕಲ್ಲಂ ಕರ್ಚಿದ ನೀರಂ ಕುಡಿಯಿಸಲೊಡಮೊಡನೆಯೆ ೧೦ ಕುತ್ತಂ ಭೇದಂ ಬರ್ಕುಂ, ಮೇಣೆಂದುಂ ಮಱುಗೊಳಿಸದು. ಇಂತೇರ್ಪಟ್ಟ ಸಾಳಿಗ್ರಾಮದ ಮಾಹಾತ್ಮ್ಯಯಂ ಕುಱಿತೊಂದು ಕಥೆಯುಂಟು :—

ಮುನ್ನಮೊರ್ವನಱುಗುಲಿವೆಸರ ಕರ್ವೇಡಂ ನರಮೃಗಂಗಳಂ ತಲೆಯುನೊಡೆದುಂ ಬಡಿದುಂ ಕಡಿದುಂ ಪಿಡಿದುಂ ಬೇಂಟೆಯಾಡುತೆ ತನ್ನೊಗೆತನಕ್ಕೆ ಪೇೞ್ದಱನಂ ಬಳಿಸಂದು ರೂಪುಗೊಂಡ ಪಾಪದೊಂದು ಮೊತ್ತಮೆನೆ ಪಲಗಾಲಂಬರೆಗಂ ಜೀವಿಸಿರ್ದುಂ ಕಡೆಯೊಳೊಂದು ದಿನಂ ಕಾಲಧರ್ಮಮಂ ಕಾಣಲಿರ್ಪ ವಸರದೊಳ್ ತಾಂ ಗೆಯ್ದ ಕೊಲೆಯೆ ಪಲವುಂ ಮೆಯ್ವೆತ್ತು ಸಂದಣಿಸಿ ಬಂದಿದಿರ್ಚಿತೆಂಬಂತಿರೆ ಕೋಱೆದಾಡೆಯ ಕೊಂಕುಂ ಬಸೆಯ ಕುಳಿಗಣ್ಣ ಕೆಮ್ಮೀಸೆಯ ಜೋಲ್ವಾಯ ಪೊದರ್ದಲೆಯ ಕರ್ಮೊಗದ ತೇಪ್ದೇರಸೊಂದು ಪೊಡರ್ಪಿನ ಪರ್ಪರಿಕೆಯ ರೋಸದ ಬೀರದ ಜವನ ದೂಱುಗಾಱರ ಜಂಗುಳಿ ೨೦ ಸೇಣ ಶೂಲದ ಕರಗಸದ ಇಟ್ಟಿಯ ಕವೆಗೋಲ ಇರ್ಕುಳಿಯ ದಂಡದ ಗಂಡುಗತ್ತರಿಯ ಕೊಡಲಿಯ ಕೂರ್ವಾಳ ಪರುಟವಣೆಯ ಸಡಗರದ ದಳವುಳದಿಂ ಬಂದು ಮುತ್ತಿ ಮುತ್ತಿ ಅಱುಗಲಿ ಜೀವಾತ್ಮನಂ ಸೆಱೆವಿಡಿದತ್ತು.

ಇಂತು ಬಂದು ಬಂದಿವಿಡಿದುಂ ಸೇಣಿಂ ಜಿಗಿದುಂ ಮುಳ್ಳುಂಗೊಳ್ಕೆಯಿ ನೀಳ್ದು ಮಣಿದುಮಾರ್ದುಂ ಸಾರ್ದುಮೆಱೆದುಯ್ವಾಗಳ್ ಕೂರಂಕುಸದಿಱಿತರ್ಕಂ ನಟ್ಟೊತ್ತಿ ನಾಂಟುವ ಕಲ್ಮುಳ್ಗಳಿನೊಂದು ಬೇಸಗಂ ನೊಂದು ಸುರುಳ್ದುರುಳ್ದು ತಾಂ ಕೆಟ್ಟೆನೆಂದು ಗೋಳಿಟ್ಟಟ್ವ ಬಡವೊಂದು ಜೀವಿಯುಂ ದಿಟ್ಟಿಸಿ ಒರ್ವಂ ಸಚ್ಚರಿತ್ರನಪ್ಪ ಭಾಗವತಂ ಮುಟ್ಟಯಿಸಿ ಬಂದು ತನಗಾತನೊಳ್ ಮಱುಕಂ ಪುಟ್ಟಲೊಡಂ ಕೈಗರಡಿಗೆಯ ಕರ್ಗಲ್ಲಂ ಕರ್ಚಿ ತೀರ್ಥಮನಾತನ ಬಱಿತ ಬಾಯೊಳೆಱೆದಂ. ಇಂತೆಱೆದ ಸಾಳಿಗ್ರಾಮತೀರ್ಥದೊಂದು ಮೈಮೆಯಿ ೩೦

ನಾಪೊಲೆಯನ ಬಾಯ ತುದಿನಾಲಗೆಯೊಳ್ ಕಟ್ಕನೆ ಉಱದೆ ಶ್ರೀರಾಮಧ್ಯಾನಂ
ನೆವಮಿಲ್ಲದೊಂದು ಸಂದಿನಿಂ ನೆಗೞ್ದ ದಾಪದನೊಳ್.

ನಿಱಿವಿಡಿದುಟ್ಟ ಪೀತಾಂಬರದ ಮಿಱುಪ ದ್ವಾದಶನಾಮದ ಪೊಳೆವ ಕರ್ಣ
ಕುಂಡಲದ ನಳನಳಿಪ ತುಳಸೀದಾಮದ ತೊಳಪ ನಾಲ್ಕುಂದೋಳ್ಗಳ ಪಾಱುಂ
ಬಳೆಯ ಗಜೆಯ ಪದುಮದ ಸಂಕಿನ ಕುಱುಪಿನ ಸಿಂಗರದ ದಿವ್ಯಸುಂದರವಿಗ್ರಹರ್
ವಿಷ್ಣುದೂತರಿೞಿತಂದು ಶ್ರೀರಾಮನಡಿಯ ಜಾನದೊಳಿರ್ಪ ಬೇಡನಂ ಬೞಿಸಂದು
ಬೋಳಯಿಸುತಿರ್ಪುದುಂ; ಬೆಕ್ಕಸಂಬಟ್ಟು ಕಕ್ಕಸದ ಜವನಾಳ್ಗಳ್ ವೈಷ್ಣವರಂ
ನಿವಾರಿಪೊಂದು ಬಗೆಯೊಳ್—ಓ! ಪಿರಿಯರಿದೇತಱ ಗೆಯ್ಮೆಯೊ! ನೇರಿದರ್ಗಿಸಿ
ತೊಂದಱಿಯವೆ! ನೋೞ್ಪೊಡರಿದು ಗಡ! ಇಸ್ಸಿ! ಪೊಲೆಯನಂ ಕಿಟ್ಟುವ ದೇವ
ರುಂಟೆ! ನಿಮಗೀತನೊಳೇತಱ ಕಜ್ಜಂ! ನೀಂ ಬಱಿದೆ ಕೊಂಡುಯ್ದು ವೈಕುಂಠ
ಮಂ ಪೊಲೆಗಿಡಿಸದಿರಿಂ, ತೊಲತೊಲಗಿಂ. ಇದೆ! ಈ ದೋಷವ್ರತನೆಮ್ಮ ಪಾಲ್ಗೆ
ಸಂದವನ್ನೈಸೆ! ಇಂತೀಗಳೆ ಪಿಡಿದುಯ್ದು ಸೂಲದೊಳೊತ್ತಿಂ ಪೋೞ್ದುಂ, ಕಲ್ಲಾ
ಲೆಯೊಳಿಕ್ಕಿ ಸುಱಿದುಂ, ಕರಗಸದಮಳ್ಜಂತ್ರದೊಳ್ ಕೊಱೆದುಂ, ನೆಲ್ಲೊರ
ಲೊಳಿಟ್ಟವಲ್ದುಂ, ನೆರೆದ ನೆತ್ತರ ಕೀವಿನೊಂದು ಕೊಳನೆಳವುೞುಗಳ್ಗೆ ತಿನಬಡಿಸು
ವೆವು; ಅಲ್ಲದೊಡೆ ಕಿಮುಟ್ಚಿ ಸೊವಡುವಸೆಯಂ ಪಿಂಡಿ ಜವನೆರ್ಮೆವೋರಿಗೆಱೆ
ತಂಗುಡುವೆವು. ಅಂತದುಕಾರಣಮೆಮಗಮೆಮ್ಮೊಡೆಯನಾಣತಿಗಂ ತಡೆವಾರ
ದಂತುಂ ನಿಮ್ಮೊಂದು ಪೆರ್ಮೆಗಂ ನೆಗಪ್ತೆಗಂ ಪೞಿವನೊಡಗೂಡಿಸದಂತುಂ
ಪಿಂದೆಗೆದು ಪೋಪುದೆಂದು ಬಿನ್ನಯಿಸಿದರ್. ಅದರ್ಕಾವಿಷ್ಣುದೂತರ್
ಯಮಭಟರ ಕಾಮಕರಂ ಕರಂ ಕರಂಗುವಿನಂ ಮಾಂಕರಿಸುತೆ—ಪೋಪೋಗಿರೆ
ಬಡಿವಾರದ ಕೂೞರೆ! ಈಗಳೀತಂ ವಿಷ್ಣುಭಕ್ತನಾಗನೆ! ಸಾಳಿಗ್ರಾವದೊಂದು
ಕರ್ಚುನೀರಿಂ ಪರಿಶುದ್ಧನಾದೊಡಲವಂ ಕಿಟ್ಟದಿರಿಂ. ಕಡೆವೊತ್ತಿಗಾನುಂ
‘ರಾಮ ರಾಮ’ ಎಂಬೀ ನಾಲಗೆ ಪುಟ್ಟುವ ನಾಲಗೆಯ ಮಾನಸಂ ಪಾವನ
ನಾಗದೇಂ ಪೋಕುಂ! ಶ್ರೀಹರಿಗೆ ಕರ್ಗಲ್ಲ ಕಾಲ್ಮಣೆಯೆನಿಪ್ಪ ಸಾಳಿಗ್ರಾವದ
ಮಹಾತ್ಮ್ಯಯೇಂ ಕಿಱಿದೆ! ನೀಮಱಿಯಿರೆಂದು, ತಾಂ ಬಲ್ಲಂತು ಬಣ್ಣಿಸಿ
ತೋಱಿ ಯಮನ ದೂತರನೆಬ್ಬಟ್ಟಿದರ್.

ಆ ವೇಳೆಯೊಳ್ ದೇವಾಂಗನೆ ತಾಂ ನಿಚ್ಚಮೆಱೆವ ಪೊಯ್ನೀರಿಂ ಪೂತ
ಮಂದಾರದ ಬಿರಿಮುಗುಳ ಮಾಲೆಯಿಂ ಚೆಲ್ವಾಗೆ ಸಗ್ಗದ ಬೆಲೆವಣಿಸತ್ತಿಗೆಯಿಂ
ಸಿಂಗರಂಬೆತ್ತ ಸಿವಿಗೆಯೊಂದು ನೆಲಕ್ಕಿೞಿತರ್ಪುದುಂ; ವಿಷ್ಣುದೂತರಾವಿಷ್ಣು
ಭಕ್ತನನದಱೊಳೇಱಿಸಿ ತಾಮುಮುಡನಿರ್ದು ಪೋದರ್ ಗಡ! ಅಂತದುಕಾರಣಂ
ದೊರೆವಾರದ ದೊರೆವಡೆದೊಂದು ಮೈಮೆಯೀಗಂಡಕಿವೆಸರ ಪೊನಲ್ಗಂ ಕಲ್ಗಂ

ಸಲ್ಗುಂ. ನೀನೀನೀರೊಳ್ ಮಿಂದುಂ ಶಿಲೆಯಂ ಪೂಜಿಸಿಯುಂ ಕೃತಕೃತ್ಯ
ನಾಗೆಂದಱುಪಿದಂ.

ಪಗೆಗಾಱರ ಮೊನೆಗಾಱರ ಬೀರ! ಬೞಿಕ್ಕಂ ರತ್ನಗ್ರೀವಂ ವಿಪ್ರನೊಂದು
ಸೊಲ್ಲಿಂಗೊಡಂಬಟ್ಟು ಸಪರಿವಾರಂ ತೀರ್ಥದೊಳ್ ಮುೞುಂಗಿ ಸಾಳಿಗ್ರಾಮ
ಪೂಜೆಯನೊಡರ್ಚಿ ತಾನೊಂದು ಕ್ಷೇತ್ರಸಂಖ್ಯೆಯ ಕಲ್ಗಳಂ ಕೊಂಡು ಮುಂ
ತೆರಳ್ದಂ.

ಇಂತು ಸತ್ಯದ ನೆಲೆಯುಂ ನಿತ್ಯದ ಬೀಡಂ ನನ್ನಿಯ ಕಡಲಂ ಪುಣ್ಯ
ದೊಡಲಂ ಭಕ್ತಿಯ ಗುಂಪಂ ಮುಕ್ತಿಯ ಪೆಂಪಂ ಅಱನೊಗೆವ ಗೊತ್ತಂ
ಪರಸುಖದೊತ್ತಂ ಕೞಿದು ಮುಂತೆ ಮುಂತೆ ದಿನವಯಣಂಬೋಗುತಿರ್ಪಿನ
ಮಾಪಥದೊಳ್—    ೧೦

ಮೊತ್ತಮೊದಲ ಗೆಡೆಯ ಗೆಣೆಯ ಪೊಸಕೂಟದ ಕೂರ್ಪರ ಮೀಂಟಿದ
ಸಂತಸದುರ್ಕಿನ ಪೆರ್ಚುಗೆಯೊಂದು ಲೀಲೆಯ ಮಾಡ್ಕೆಯಿನಡಿಗಡಿಗೆ
ತಂತಮಗೆ ಬೆರೆವೊಡನಾಟದ ತೆರೆಗೈಯ ತಟ್ಕೆಯಿಂ, ಭೋರ್ಗರೆವ ಸಬುದದ
ಮನ್ನಣೆಯ ಬಣ್ಣನೆನುಡಿಯಿಂ, ಕರೆಗಣ್ಮುವ ಸಾಲ್ವರಿವ ಬೆಳ್ನೊರೆಯ
ಬೆಳ್ನಗೆಯಿಂ, ಕಣ್ಗೆಡ್ಡಮಾದ ಗಂಗಾಸಾಗರಸಂಗಮಂ ಮುಂಗಡೆಯೊಳೆಸೆ
ದತ್ತು. ಮತ್ತಮದು ಗುೞುಗುಟಿಸುತೇೞ್ವ ಬೀೞ್ವ ಮಱುಮೀಂಗಳೆಡೆಯಾಟದಿಂ,
ತಾಂ ತಮಗೆ ನೆಗೆನೆಗೆದುರುಳ್ವ ಮೀಂಗಳೊಂದು ಸೋವಿನ ಹೊಂಚಿನೋಟ
ದೊಳೆ ಎಡೆಗೆಡೆಗೆ ಪಾಱುವ ಕಡಲ್ವಕ್ಕಿಗಳ ಸುೞಿಯಿಂ, ಮುತ್ತಿ ಮಂಡಳಿಸಿದ
ನೀರ್ವಕ್ಕಿಗಳತ್ತಣೊಂದು ಭಯದಿಂ ನೀರೊಳೆ ಮೈಗರೆವ ಬಾಳೆಮೀಂಗಳಿಂ,
ಒಳಗೊಳಗಡಂಗಿ ಪರಿದಾಡುವ ಬಾಳೆಗಳಂ ಬೆಂಬೆಂಬತ್ತಿ ಸುೞಿಸುೞಿದು ತಳ    ೨೦
ಮಳಂಗೆಯ್ವ ತಿಮಿತಿಮಿಂಗಿಳಗಳ ದೞದುೞದಿಂ, ಕರಮೊಪ್ಪಿರ್ದುದು.

ಇಂತು ರನ್ನಬಂಡಾರಿಯೆನೆ ಆಯ್ದೊಱಲ್ದು ಬೆರೆದು ಬೆಱೆದಿರ್ಪ ನೀರವೆಣ್ಣ
ಕಡುಜಾಣ್ಮೆಗೆ ಸೋಜಿಗಂಗೊಂಡು ತಲೆದೂಗಿ ಮೇಣ್ ತಾಂ ಪೋಗಲಿರ್ಪ
ಕ್ಷೇತ್ರದೊಂದು ನೆನಪಿಂ ವಿಪ್ರನೊಳ್—ಆಚಾರ್ಯ! ಎನಿದೂರದೊಳಿರ್ಕು
ಮಾಸಂದ ನೀಲಾಚಲಂ. ಎಂದಿಗೆ ಕಾಣ್ಬೆಂ. ತಿಂಗಳೊಂದಾದುದಲೇ! ಎಂದು
ಬೆಸಗಲೊಡಂ; ಭೂಸುರಂ—ಏಂ ತೋಱದೆ? ಆಲರ್ವಕ್ಕಿಯ ಮುಗಿಲ
ಕರ್ಮುಣೆಯ ಮಾಕಾಳಿಯ ಒಡಲ ಕರ್ಪಿನಚಲಂ ಅಂದೀಯೆಡೆಯೊಳೆ
ನಾಲ್ಗೈಯ ಬೀಡರಂ ಕಂಡೆನೀ ಬಟ್ಟೆಯೊಳೆ ಪೋದೆನೀದೆಸೆಯೊಳೆ ಬೆಟ್ಟಮ
ನೇಱಿದಂ, ಇದೆ ಬೆಟ್ಟಂ ದಿಟ್ಟಿಸೆಂದು, ಸುಟ್ಟಿ ತೋಱಿದಂ. ಆಗಳರಸಂ ಕಣ್ಣೆತ್ತಿ
ನಾಲ್ಕುಂ ದೆಸೆಯುಂ ಸುತ್ತಿ ಕಂಡುಂ ಕಾಣಿಸದಿರೆ ದುಗುಡದಿಂ ಬೆಮೆ    ೩೦

ಗೊಂಡು,—ಪಾರ್ವಂ ಪೇೞ್ದ ಬೆಟ್ಟಮಂ ಕಂಡಿರೆ! ಎಂದು ತನ್ನ ಪರಿಜನರಂ ಕೇಳ್ವುದುಂ; ಕಂಡೆವಿಲ್ಲೆಂದು ಮಾರ್ನುಡಿದರ್. ಆ ನುಡಿಗೆ ರತ್ನಗ್ರೀವಂ ಕಟ್ಟಚ್ಚರಿವೆತ್ತು—ಏನಯ್ಯ! ನೀನೊರ್ವನೆ ಕಂಡೆಯ್! ಆಮಿನಿಬರುಂ ನೋಡಲಾಱದ ಪಾಪಿಗಳೆ? ಇದಱಿಡಿಯೇಂ? ಪೇೞೆಂದು ಕೇಳಲೊಡಂ; ತನ್ನ ಜಾನದ ಜಾಣ್ಗೆ ನೆರವಾಂತಱಿವಿಂ ವಿಪ್ರಂ—ಅಪ್ಪುದಪ್ಪುದು ಈಗಳಱಿತೆಂ. ತೋರ್ಪೀಸಂಗಮದೊಳ್ ಮೊದಲೊರ್ಮೆ ಮಿಾಯದಿರ್ಪ ಜಾತ್ರೆಗರ್ಗೆ ಬೆಟ್ಟಂ ದಿಟ್ಟಿಗೆ ಬಾರದೈಸೆ! ನೀಮದುಕಾರಣಂ ಗಂಗಾಸರಿತ್ಸಾಗರಸಂಗಮ ತೀರ್ಥದೊಳ್ ಮಿಂದು ಬರ್ಪುದೆಂದು ತಿಳಿಪಿದಂ.

ಕೇಳ್! ಆನುಡಿಯುಂ ಕೇಳ್ದೆೞ್ದು ಸರ್ವರುಂ ತೀರ್ಥಸ್ನಾನಂಗೆಯ್ದು ೧೦ ದಾನದಕ್ಷಿಣೆಗಳಿಂ ವಿಪ್ರಕುಲಮಂ ಸೈತುಗೊಳಿಸಿ ತವಕದಿಂ ಮುಂದೆಸೆಯಂ ನೋೞ್ಪುದುಂ; ಪುಣ್ಯದ ರಾಶಿಯಂತೆ ಬಗ್ಗಿನ ನೆಲೆಯಂತೆ ಮೈಮೆವೆತ್ತು ಚೆಲ್ವಾದ ಪರ್ವತಂ ತೋಱೆವಂದುದು. ಆಗಳಾಗಳೆ ಪೆಱವಂ ನಡೆ ಗೊಂಡಂತುಂ, ಕುರುಡಂ ಕಣ್ಬಡೆದಂತುಂ, ಷಂಡಂ ಪುರುಷನಾದಂತುಂ ಪೆರ್ಚಿದೊಂದು ಸಂತಸದಿಂ ಬೈಗಿನೊಳ್ ಕೆಲೆದುಂ ಮುಕ್ಕುಟಿಕ್ಕಿಯುಂ ನೆಗೆದಾಡಿಯುಂ ಚೆದಱಿ ಪೋಪಾಕಳ ಮಂದೆಯ ಮಾೞ್ಕೆಯಿಂ ನೆರೆದು ಬಂದ ಜಾತ್ರೆಯ ಪಯಣಿಗರ್ ಶ್ರೀರಘುವರನಂ ಪಾಡುತುಂ ನೋಡುತು ವೋಡುತುಂ ದೊರೆವಡೆದ ಕರ್ವೆಟ್ಟಮನೇಱಿ ಪೋದರ್.

ಕೇಳೆಲೆ ಚಿಕ್ಕರಸ! ಇಂತು ನೀಲಾಚಲಶಿಖರಮನಾರೋಹಣಂಗೆಯ್ದು ಶ್ರೀಪುರುಷೋತ್ತಮಮೂರ್ತಿಯಂ ಕಂಡುಂ, ಪ್ರಸಾದಮಂ ಕೊಂಡುಂ, ೨೦ ಸಿಕ್ಥಕಮನುಂಡುಂ ಕೆಲಕೆಲರ್ ವಿಷ್ಣುಸಾರೂಪ್ಯಮಂ ಪೊಂದಿದರ್; ಕೆಲ ಕೆಲರ್ ಪೊಂದಿ ವಿಷ್ಣುಲೋಕಕ್ಕೆಯ್ದಿದರ್; ಕೆಲಕೆಲರ್ ಪುರುಷೋತ್ತಮನ ಸೇವೆಯೊಳೆ ನಿಂದರ್; ಕೆಲರ್ ಬಂದರ್. ರತ್ನಗ್ರೀವಂ ನಿಜಸತಿಸುತಮಂತ್ರಿ ಪುರೋಹಿತರ್ ಸಹಿತಂ ದೇಹಂಬೆರಸು ಸಾಯುಜ್ಯಪದವಿಗೇಱಿದಂ ಕಣಾ! ಇಂತೆ ನೇರ್ಪಟ್ಟ ಮೈಮೆ ಈ ಬೆಟ್ಟೊಡೆಯಂಗೆ ಸಲ್ಗುವೆಂದು ನೀಲಗಿರಿ ಮಾಹಾತ್ಮ್ಯಯಂ ಮಂತ್ರಿಪಂ ಕಥಿಸಿದಂ.

ರಮಣೀಮಣಿ! ರಾಘವಾವರಜಂ ಇನಿತೊಂದು ಪೆರ್ಮೆಯ ಕ್ಷೇತ್ರ ದೊಂದು ಮೈಮೆ ದಿಮ್ಮಿತೆಂದು ಕೌತುಕಂಗೊಂಡು ದರ್ಶನಸ್ತುತಿಗೆಯ್ದು ತುರಂಗದ ಬೆಂಬಲದ ಸೇನೆಯ ಕಾಪಿನೊಳೆ ಪೋಗುತುಮಿರ್ದಂ.

ಎಂಬಲ್ಲಿಗೆ ಶ್ರೀರಾಮಾಶ್ವಮೇಧದೊಳ್
ನೀಲಾಚಲದರ್ಶನಮೆಂಬ ದಶಮಾಶ್ವಾಸಂ ಸಂಪೂರ್ಣಂ.

ಏಕಾದಶಾಶ್ವಾಸಂ

# ಸುಬಾಹು ಯುದ್ಧಂ

ಎನ್ನ ಸಿಂಗರದ ಸಿರಿಯೆ! ಆ ಅಂದಿನ ರಗಳೆಯ ಬಣ್ಣನೆಯ ದಿನಂಗಳ್
ಪಿಂಚಿದುವು. ಆಗಳುಂ ತನ್ನೊಡಲುರಿಯೊಂದು ಬೇವಿನಳುರ್ಕೆಯಿಂದೆಡೆವಿಡದೆ
ಪುಯ್ಯಲ್ಚುವ ಕಡಲೀಗಳ್ ಬೇಸಱಿನೆನಸುಂ ಸೈರಣೆಗೊಂಡುದು. ಪೊಸವೆಸ
ಲಾದ ಪೆಣ್ಗಳ ಜವ್ವನದ ಬಿಗುರ್ಪಿಟಿದು ತಿಳಿವಂತೆ ತೋಱುವೆಂಡಿಗರ್ಕಿ
ಸುಬ್ಬರಮಡಂಗಿ ತಿಳಿದುದು. ತಾನುಮುಣದ ಪೆಱವರ್ಗವೀಯದ ನೆಲಕಲನ
ಮಱೆಯ ಮುಚ್ಚಿನ ಭಂಡಾರದೊಳಗಣೊಂದು ಪಾಡ್ಗೇಡಿಂ ಪುರುಳ್
ಕುಂದುವಂತಿರೆ ಕೊಳಂಗಳ ಜಳಂ ಮೆಲ್ಲಮೆಲ್ಲನೊಳಗೊಳಗಿಂಗಿದುದು. ಬೈಗಿನ
ಮುತ್ತ ಪೊತ್ತಿನ ಚೆಂಬಿಸಿಲ ಪರ್ಬುಗೆಯ ಬೆಳಗಿನೊಂದಿರವಿಂ ತಾವರೆ
ಯಿರ್ದುವು. ಸಾವರ್ಗೆ ನೋವವರ ಜಾಳಿಗೆವೊನ್ನಂ ಕವರ್ವೊಂದು
ಬಗೆಯೊಳಾರಯ್ವ ನೆಂಟರ್ಗೆ ದೊರೆವಂದ ಬಂಡುಣಿಗಳ್ ನೀರ್ವೂಗಳಂ ೧೦
ಸೇವಿಸುತಿರ್ದುವು. ನೀರುಣದ ಮುಗಿಲ್ಗಳ್ ಬೆಳರ್ತು ಬೆಂಡಾದುವು.
ಪೆಱನೇಸರ್ಕಳ ಕೈಗಳ್ ನಿಡಿದಾದುವು. ಬಾಂಬೊಲಂ ಬಿತ್ತಿದಱಿಲಗೆಯಿಂ
ಸೊಗಯಿಸಿದತ್ತು. ಭೂರಮೆ ಕಱಂಗಿ ಬೆಳೆದಾರವೆಯೆಂಬ ಕಾಂಗಿನ ಸೀರೆಯ
ನುಟ್ಟು ನಳನಳಿಸುವ ಕೆಯ್ವೊಲಮೆಂಬ ಮಿಸುನಿಗಚ್ಚಿನ ಪೊಂಗುಪ್ಪಸಮಂ
ತೊಟ್ಟು ಕಣ್ಗೆಡ್ಡಮಾದಳ್.

ಇಂತು ಮುಂಚಿ ಬಂದ ಶರತ್ಕಾಲದೊಳ್ ರಾಘವನ ಜನ್ನದ ಬಣ್ಣಗುದುರೆ
ತೆಂಕಲ್ಗೆ ಮೊಗಮಿಕ್ಕಿ ನಡೆಯುತುಮಿರ್ಪುದುಮಿತ್ತಲಾವೇಳೆಯೊಳ್ ಚಕ್ರಾಂಕ
ಪುರದ ರಾಯುಗುವರಂ ಪ್ರಜೆಗಳೊಂದು ದೂಱಿಂಗೆ ತನ್ನೊಂದು ಬಿನದಕ್ಕೆ
ಮೇಲಾಳ್ತನದ ಸಡಗರದಿಂ ಬೇಂಟೆಗೆಂದು ಪಱುವಂ ಪುಗುತಂದಂ. ಆಗಳ್
ದಿಕ್ಕರಿಗಳ್ಗೆ ಗಿರಿಗಳ್ಗೆ ದೊರೆವರ್ಪ ಕರ್ವೇಡರ್ ಎಕ್ಕಡವಾವುಗೆಯ ತೊವಲು ೨೦
ಡೆಯ ತುಪ್ಪುಟಂಗಿಯ ಸೊಪ್ಪಿನ ಟೊಪ್ಪಿಗೆಯ ಸಿಂಗರದಿಂ ಕವಣೆಯ
ಮಿಂಟೆಯ ಪೆಂಟೆಯ ಅಂಟುವಲೆಯ ತಡಿಕೆವಲೆಯ ಬೀಸುಂಬಲೆಯ ಪಾಸುಂ
ಬಲೆಯ ಕಣ್ಣಿವಲೆಯ ಬೆಳ್ಳಾರ ಬಲೆಯ ಗುದಿಯ ಸಬಳದ ಕವಲ್ಗೋಲ
ಅಡಿಕಿಲ್ಗೊಡೆಯ ನೇಣ ಕಡಿಗತ್ತಿಯ ಬಿಲ್ಲಂಬುಗಳ ಬಲ್ವೊಱೆವೊತ್ತು ಪೀಲಿ
ಯುಡೆಯ ಜಂತದೋಲೆಯ ಪುಲಿಯುಗುರ ಬಾವುಲಿಯ ಗಂಜಿಯೆಕ್ಕಸರದ

ಎಲ್ವಿನ ಬಳೆಯ ಸಾದಿನಬೊಟ್ಟಿನ ತಮ್ಮ ಪುಳಿಂದಿಯರ್ವೆರಸು ಜಾಯಿಲಂಗಳಂ ಕೂಡಿ ನಡೆತಂದು ನೆರೆದರ್. ಅಂತು ಬಂದ ಬೇಡರ್ ಕಾಡಂ ಮುತ್ತಿಯುಂ, ಮಿಗದಿಕ್ಕೆಯಂ ಹೊಂಚಿಯುಂ, ಕೊಣಕುವ ಸಬುದಮನಾರಯ್ದುಂ, ಕರ್ಪನ ಗುಬ್ದುಂ, ಬಲೆಗಳನೊಡ್ಡಿಯುಂ, ಕುತ್ತುಱಿ ಸೋವಿಯುಮಿಡಿಕುಱೊಳ್ ನುಸುಳ್ದುಂ, ಸರುವೊಳ್ ಹುದುಗಿಯುಂ, ಸೀದಾರ್ಣದೊಳ್ ಕತ್ತರಿಗಂಡಿಯ ನೆತ್ತಿಯುಂ, ಮರನನಡರ್ದುಮಬ್ಬರದೆ ಬೊಬ್ಬಿಱಿದಱಿಚಿ ಬೇಂಟೆಯಾಡುತಿರೆ ; ನಟ್ಟ ಕೊಡಂಕೆಯ ಮೊಲನ, ಅಳ್ಕಿಯೊತ್ತುವ ಮರೆಯ, ಡಗೆವೊಯ್ದೆರಲೆಯ, ಪಚ್ಕೆಗೆಟ್ಟ ನರಿಯ, ಬೆದಱಿದ ಕಡವೆಯ, ಕೆರಳ್ದೆಕ್ಕಲನ, ಕೊಕ್ಕರಿಸಿದ ಕಕ್ಕಡ ಮಂದಿಯ, ಕಣ್ದೊಳಸಿನ ಕರಡಿಯ, ಮುಕ್ಕುಱಿಕ್ಕುವ ಕಾಡ್ಕೋಣನ,
೧೦ ಕೋಡಿಡುವಾನೆಯ, ಗರ್ಜಿಸುವ ಸಿಂಗದ, ಮೊರೆವ ಬಲ್ಪುಲಿಯ ಗಜಬಜದ ಸಂಚಾರಂ ಬಲ್ಪಿರಿದಾಯ್ತು.

ಆಗಳ್—ಇದೆ ಕಿಱುಬನನಿಸು! ಇದೆ ಕಾಱ್ಕುಱಿಯನಿಡು! ಇದೆ ಬಗ್ಗನ ನಿಕ್ಕು! ಮೇಣಿದೆ ಚಿತ್ತಗನಂ ತುಡು! ಇದೆ ಕಲ್ಲಾನೆಯಂ ಕುತ್ತು! ಇದೆ ಪೆರ್ವುಲಿಯಂ ಕುತ್ತು! ಎಂದೆಚ್ಚಱಿಸುತುಂ ಮುಟ್ಟಿವರುತುಂ, ಮೇಣೊರ್ಮೆ ಸೊಪ್ಪುಳಾಗದಂತು ಸನ್ನೆವೇಂಟೆಗೆಯ್ಯುತುಮಳವಿಗೆಟ್ಟ ಕೂಟ್ಮಿಗಂಗಳಂ ಸಂಹರಿಸಿದರ್. ನೊರೆಯಿಡಿದರೆಗರ್ಚಿದ ಪುಲ್ಲ ಪುಲ್ಲೆ, ಮುಱಿಗೋಣ ಮಱೆಯ ಮರೆ, ಕಟ್ಗಿದ ಮೊಗದ ಪೊಡೆಯೊಡೆದುಡು, ಮತ್ತಂ ಕೋಡುಡಿದಾನೆ, ನಟ್ಟಾಲಿಯ ಮೊಲಂ, ತಲೆಕಡಿವೋದ ಪೆರ್ಬುಲಿ, ಪಲ್ಲುಡಿದ ಪಂದಿ, ಕರುಳೊಕ್ಕ ಕಪ್ತೆ ಬೇಡರ ಬಗೆಗೆ ಬಂದುಂ ಬಾರದಾಯ್ತು.

೨೦ ಇಂತು ವನದೊಳ್ ಮೃಗಕುಲಂ ನಿರ್ಣಾಮಮಾಗಲೊಡಂ, ಸಂತಸಮಾಗೆ ಬೇಡರ್ ಸವಿಯುಡಗಂ ಬಸೆಯಂ ನೆತ್ತರಂ ತೊವಲಂ ಕೋಡಂ ಜಂತಮಂ ಮತ್ತಂ ಚವುರಿಯುಂ ಪೊತ್ತು ನಗರಿಗೆ ಮರಲ್ದುವರ್ಪಾನಡುವಟ್ಟೆಯೊಳ್ ಚಂಚಲಿಸುವ ಮಿಂಚಿನಂತಿರೆ ಮುಂಚಿವರ್ಪ ಮಿಂಚುವ ಪಂಚವರ್ಣದ ಕುದುರೆಯುಂ ಕಂಡು—ಎಲೆ ಅಣ್ಣ! ಎಲೆ ತಮ್ಮ! ಏವೂರ ನಿಗಳದೊಂದು ಬಣ್ಣಗುದುರೆ! ಎಮ್ಮೀಜಾಯಿಲಂಗೆ ದೊರೆವರ್ಕುಂ! ಕೊಂಕದ ಬಾಲಂ, ನಿಮಿರ್ದ ಕೊಡಂಕೆ, ಡಗೆವೊಯ್ವಳ್ಕೆ, ಗುಜ್ಜುಗಾಲ್, ಸಿಟ್ಟೊಡಲ್, ಕಟ್ಟಾಯದ ಮೆಯ್ಸಿರಿ. ಆಃ! ಕೀಟುಂ ಪಲ್ಲಣಮುಮೇನಾಯ್ತು. ಓ! ಸೊರ್ಕಿದ ದುಱುದುಂಬಿಗುದುರೆ! ಇಂತುಂ ಸಿಂಗರಮೇಂ ನೋಟ್ಪಂ ನೋಟ್ಪಮೆಂದು, ಮುಟ್ಟಿವಂದು ಪಿಡಿದು ತಮ್ಮೊಡೆಯಂಗೆ ವಾಹನಮಕ್ಕುಮೆಂದು ದಮನಂಗು
೩೦ ಯ್ದೊಪ್ಪಿಸಿದರ್.

ಆಗಳ್ ತನಗೆ ದೊರೆವಡೆದೊಂದು ಜವ್ವನದ ಪೊಸಕುದುರೆಯಂ ನಿಟ್ಟಿಸಿ ಯೞ್ಕಱಿಂ ಪೊಂಪುೞಿವೋಗಿ, ಬಾಳದ ಬಿರುದಿನ ಪಾಡಿಸೊಕ್ಕಣೆಯ ಓಲೆಯಂ ಕೈಯೊಳ್ ಕೊಂಡಿಂತು ವಾಚಿಸಿದಂ:—"ಕಡಲೆ ಕಡೆಯಾದೀಪೊಡವಿಯಂ ತನ್ನೊಂದು ಬೆಳ್ಗೊಡೆಯ ನೆೞಲೊಳಿರಿಸಿ ಮಾರ್ಮಲೆವ ಪಗೆರಾಯರ ಬಿಂಕಮ ನುರ್ದಿ ತಿರ್ದಿ ಸಮಕಟ್ಟಿ ಬಿರುದರ ಗಂಡಂ ಕೈದುವೊತ್ತರ ದೇವಂ ಶ್ರೀರಾಮ ಚಂದ್ರಮಂ ಅಯೋಧ್ಯೆಯೊಳರಸುಗೆಯ್ಯುತ್ತುಮಿರ್ದಪಂ. ತನಗೆ ಕೂಟರತ್ತಣಿಂ ಬಲ್ಪೊಱೆಯಾಗೆ ಬಣ್ಣವಿೞಿದು ಸೊಬಗೞಿದು ಸುೞುಂಟಿ ಮುೞುಂಟಿ ಮೆಯ್ಯುಗ್ಗಂದಿದೀ ಭೂರಮೆಯಂ ಪೊರೆವೊಂದು ದೂಸೞಿಂ ರಾವಣಾದ್ಯರಂ ಕೊಂದೊಂದು ಕೊಲೆಯ ಶಾಂತಿಗೆಂದು ಕುಂದದ ಜನ್ನಮಂ ಕೈಕೊಂಡು ದೀಕ್ಷೆಯೊಳಿರ್ಕುಂ. ಇಂತಿದಾತನಯೆ ಜನ್ನಗುದುರೆ; ತನ್ನಣುಗದಮ್ಮನ ಶತ್ರುಘ್ನನ ಮೊನೆಗಾಱನ ಬೀರಸಿರಿಯ ಗಂಡನ ಕಾಪುಂಟು. ಅಂತದಱಿ ನಾರಾನುಮೆತ್ತಾನುಂ ಮಿಡುಕುಳ್ಳ ಪೆಂಪಿನ ಕೊರ್ವಿನ ಜವ್ವನದ ಗಂಡುಗಲಿತ ನದ ರಾಯರಿರೆ ಹಯಮಂ ಕಟ್ಟಿ ಕಾದುವುದು. ಕೆಯ್ದುಗೆಯ್ದು ಸೋಲ್ತರ್ ಶತ್ರುಹನಂ ಕಂಡು ಮಱೆವೊಕ್ಕು ಕಪ್ಪಮನಿತ್ತು ಸಂತಂ ಬೞಿಸಂದು ಬಾೞ್ವುದು. ಶ್ರೀರಾಮನಾಣೆ!"

ಕಾಮಕಲ್ಪವಲ್ಲರೀ! ಇಂತು ದಮನಂ ಪರಿವಿಡಿಯಿನೋಲೆಯನೋದಿದ ನಪ್ಪುದುಂ; ಕೈಪೆಯನುಂಡಂತುಂ, ಕಲ್ಲೆಡವಿದಂತುಂ, ಮುಳ್ ಬೆಟ್ಟಿದಂತುಂ, ತೇೞ್ ಇಱಿದಂತುಂ, ಕಲಂಕುವಗೆಯೊಳ್, ಏಱುಗೊಂಡೆಕ್ಕಲನ ದಾಂಟು ಗೊಟ್ಟ ಪಾವಿನ ಪೊಸವಗೆಯೊಂದು ಮುಸಕದಿಂ ಕಿಡಿಕಿಡಿವೋಗಿ ಕುಡಿವರಿವ ಮೀಸೆಯಂ ತಿರ್ದುತೆ—ಆಃ! ಶ್ರೀರಾಮಂ ಗಡ! ಒಂದೆ ಬೆಳ್ಗೊಡೆಯೊಳಾಳ್ವ ರಾಯಂ ಗಡ! ರಾವಣಾದ್ಯರಂ ಕೊಂದಂ ಗಡ! ಶಾಂತಿ ಗಡ! ಜನ್ನಗುದುರೆ ಗಡ! ಬೇಳ್ವಂ ಗಡ! ತಮ್ಮಂ ಶತ್ರುಘ್ನಂ ಗಡ! ಕಾಪು ಗಡ! ಮಿಡುಕುಳ್ಳ ಬೀರರ್ ಕಾದಲಕ್ಕುಂ ಗಡ! ಕಾಣ್ಕೆ ಗಡ! ಪೂಣ್ಕೆ ಗಡ! ತನ್ನಾಣೆ ಗಡ! ಜಗಕೆ ರಾಮನೊರ್ವನೆ ಚಲದಂಕಂ; ಶತ್ರುಹನೊರ್ವನೆ ಬೀರಂ; ಮಿಕ್ಕ ರಾಯುಗುವರರ್ ಪಂದೆಗಳೇನಾಗರೆ! ಏತೞೊಂದು ಪೊಚ್ಚಱದ ಮಾತಿ ನೊಂದು ನಿಱುಗೆಯೊ! ಲೋಗರೊಳ್ ಬಲ್ಲರ್ ತಮ್ಮಾಳ್ತನದ ಪೆರ್ಚಳಿಕೆಯಂ ಗಳಪುವರೆ? ಲೋಗರ ಕಣ್ಣೆಂಜಲ್ ತಾಗದಂತು ಬೆರ್ಚನಿಟ್ಟು ಪಕ್ಕಿಗಳಂ ಬೆದರ್ಚಲೊಡರ್ಚಿದ ತೋಂಟಿಗನೊಂದಾಯುತಿಯುಂ ಕಂಡನಕ್ಕುಂ ರಾಮಂ. ಅಕ್ಕೆ, ತಪ್ಪೇಂ. ಇಂತೊಂದು ಪೂಣ್ಕೆ ಎಮ್ಮನ್ನರ್ಗೆ ದಳ್ಳಿಸುವ ಬಲ್ಗಿಚ್ಚಿ ನೊಳೆೞೆದ ಪೊಸ ನೆಯ್ಗೆ ಪಾಸಟಿವಾರದೇಂ ಪೋಕುಂ. ಅದುಕಾರಣಂ ತಾಂ

ತನಗೆ ದೊರೆಕೊಂಡ ಕುದುರೆಯುಂ ಕಟ್ಟಿ ಕೈವಿಡಿದ ನಲ್ಲಳ್ಗೆ ಸಂತಸವೆಕ್ಕಸಂಗಳ
ನವಿರ್ ಮೂಡುವಂತುಂ, ಪೆತ್ತೋವಿದಬ್ಬೆಗೆ ಪೆಕ್ರೊತ್ತಡಲ ಎತ್ತಿದ ತೋಳ್ಗಳ
ಕಟ್ಟುಬ್ಬಸದಾಯಸಂ ಸ್ಮರಣೆಗೆ ಬಾರದಂತುಂ, ಅಂದಂದಿಂಗಂ ಬಳೆಯಿಸಿ
ನಡೆನುಡಿವೇೞ್ದು ಪೊರೆದಯ್ಯನ ಕೂರ್ಮೆ ಪೆರ್ಮೆವಡೆವಂತುಂ, ಬೀರದ ಗಂಡು
ಗಲಿಗಳಪ್ಪ ಗೆಣೆಯ ರಾಯುಗುವರರ್ ತಲೆದೂಗುವಂತುಂ, ನೇಹದ ನಂಟರೊಳ
ನಂಟು ಗಂಟುಗೊಳ್ವಂತುಂ, ಬಿಡುಗಣ್ಣರ್ಗೆ ಕಣ್ಣಹಬ್ಬಮಪ್ಪಂತುಮೆತ್ತಿವಂದ
ಪಗೆಯುಂ ಬಾರಿಸುವೆಂ. ಮೇಣೆನ್ನ ಗಂಡುಗಲಿತನದ ಚಲಮಂ ತೋಱಿಸುವೆಂ,
ಎಂದು ತಱಿಸಂದು ಶ್ರೀರಾಘವನ ಕುದುರೆಯುಂ ಬಂದಿವಿಡಿದು ಬೇಡವಡೆಯ
ಕಾಪಿನೊಳ್ ತನ್ನ ಪೊೞಲ್ಗಟ್ಟಿದಂ.

೧೦ ನಸೆಗಾರ್ತಿ! ಇಂತು ದಮನಂ ಹಯಮುಮಂ ಸೆಱೆವಿಡಿದು ನಿಜಪುರಕೆ ಕಳಿಸ
ಲೊಡಮಿತ್ತಲ್ ಹಯದ ಬೆಂಬಲದ ಕಾಪಿನಾಳ್ಗಳ್ ತತ್ತಱದಿನೊತ್ತರಿಸಿ ಪತ್ತೆ
ಸಾರ್ದು ರಾಯುಗುವರನಂ ಸುತ್ತಂ ಮುತ್ತಿ, ವೈಗಲಿಯುಂ—ಎಲೆಲೆ
ಪಗಲ್ಗಳ್ಳ! ಏತಱೊಂದು ಗೆಯ್ತಂ. ತಾಂ ತಾಂ ಬಟ್ಟೆವಿಡಿದೈದಿ ಪೋಪ
ಕುದುರೆಯುನಿಂ ನೀಂ ಕಟ್ಟಿಕೊಂಡುಯ್ವ ಬಲ್ಪೇವುದೊ! ಆರೊಂದು ಹಯ
ಮೆಂಬುದನಾರೈದು ಪೋಗದೆ ಪತ್ತುಗೊಳ್ವ ನೀಂ ಕಾಲುರಿಚನಕ್ಕುಂ, ಸಾಜಂ.
ನಿಲ್ ನಿಲ್! ಮಾಣ್ ಮಾಣ್! ಶ್ರೀರಾಮನ ಜನ್ನದೊಂದು ಸಿಂಗರದ
ಕುದುರೆ ಕಣಾ! ದೇವರ್ ಮುನಿವೆಡೆಯೊಳ್ ಕಳ್ವ ಕೊಳ್ವ ನಿನ್ನೀಬಲ್ಮೆ
ಪೊಳ್ಳಕ್ಕುಂ. ನಿನ್ನಡಗು ಪರ್ದಿಂಗೆ ಬಿರ್ದಕ್ಕುಂ. ಮೇಣ್ ನಿನತ್ತುಸುವಿನುಸಿರ್
ಜವಹುರದ ಪುೞುಗಳ್ಗೆ ಸುಯ್ಲಾಡುವ ಜೀವದ ಗಾಳಿಯಕ್ಕುಂ. ಮೇಣೀನಿನ್ನ
೨೦ ಪಾಡೊಡಲನೆತ್ತರ್ ಪಿರಿತಿನಿವಡೆಗೆ ಪಗಲ ಬೋನದೊಂದು ಕಟ್ಟಕ್ಕುಂ.
ನಿನ್ನಟ್ಟೆಯೆಲ್ವು ಕುಟ್ಟೆವುೞುಗಳ್ಗೆ ಕಟ್ಟಚ್ಚಿನ ಹೋಟಿಗೆಯಕ್ಕುಂ. ನಿನ್ನೀರುಂಡಂ
ಮರುಳ್ಪಡೆವೆರಸು ಮಂಡಳಿಸಿ ಸೆಂಡನಾಡುವ ಮಾಕಾಳಿಯ ಕೈಗಂದುಗ
ಮಕ್ಕುಂ. ನೂಜಱಿನೇಂ; ನಿನ್ನ ನಾಡು ಬಕ್ಕಂಬಯಲಕ್ಕುಂ. ಅಂತದಱಿಂ
ಬಗೆಗೇಡಿಂ ತಕ್ಕೞಿದು ನಿರ್ನೆರಂ ನೀಂ ಬನ್ನದೊಳಾಗದೆ ಬೇಗಂ ಹಯಮುಮಂ
ಬಿಟ್ಟು ನೆಟ್ಟನೆಮ್ಮಂ ಶರಣ್ಬೊಕ್ಕು ಸೊಗಂಬಾೞ್ವುದೆಂದರ್. ಆನುಡಿಗೆನಸುಂ
ನಕ್ಕು ಮತ್ತಂ ಕಿಸುಗಣ್ಚಿ ದಮನಂ ಕೈಯ ಕೂರ್ವಾಳ ತೆಳ್ಮೊನೆಯಂ
ನೂಂಕಿ—ಈ ಸೂಳ್ಗೆ ನಿಮ್ಮಂ ತಲೆಗಾವೆಂ, ಮುಂತಿಂತು ಬಾಯ್ಗೆ ಬಂದಂತೆ
ಜಱುಚೆ ಕುಡಿನಾಲಗೆಯಂ ಸೌಳನೆ ಸೀಳ್ವೆಂ, ನಿಕ್ಕುವಂ. ಆನೆ ಬಲ್ಪುಳ್ಳಂ
ಕುದುರೆಯುಂ ಕಟ್ಟಿದೆಂ. ಕಾದುವೊಂದು ಬೆಸನಮೆಮಗಕ್ಕುಂ. ಆಸೊರ್ಕಿನ
೩೦ ರಾಮಂ ನಿಮ್ಮ ದೇವನಾವನೇವಂ? ಈಗಳೆ ನಿಮ್ಮಾಳ್ದನಂ ತಟ್ಟಿ ರಣಕಟ್ಟಿಂ;

ಇದೆ ಎನ್ನೊಂದು ತೋಳ್ಬಲಮಂ ಮೆಱೆವೆಂ. ಕುದುರೆಯೊಂದು ದೂಸಱಿಂ ಮೊನೆಯೊಳಿನ್ನೀಮೊನೆಯ ಬಾಳ್ಗೆ ತಲೆಯುಂ ಮಾಱುಗುಡದಿರಿಂ. ಪೋ! ಪೋಗಿರೆ! ಎಂದು ಕಾಪಿನಾಳ್ಗಳಂ ಗದಱಿ ಗರ್ಜಿಸಿದಂ.

ಇಂತಪ್ಪುದುಮನುಚರರ್ ಪೇಳಿಗೆಯ ಪಾವಿಸೊಂದು ಮಾಡ್ಕೆಯಿಂ ತಡೆಗಟ್ಟುವಟ್ಟರಾಗಿ ಮರಳ್ದು ತಮ್ಮೊಡೆಯನಪ್ಪ ಪ್ರತಾಪಾಗ್ರ್ಯಂಗಿಂತಿದಂ ಬಿತ್ತರಿಸಿದರ್.

ಮುದ್ದಣಂ—ದೇವೀ!

ಮನೋರಮೆ—ಆವ ದೇವಿ! ಶ್ರೀದೇವಿ ಏಂ ಭೂದೇವಿ!

ಮುದ್ದ—ನಿನ್ನನೆ ದೇವಿಯೆಂದು ಕರೆದೆಂ.

ಮನೋ—ಬಲ್ಲತೆಯಂ ಬಿತ್ತರಿಪೊಂದುಬ್ಬೆಮೆಯೊಳೇನೆನ್ನಂ ತೊಟ್ತು　೧೦
ಮಾಡಿ ದೇವಿಗೆತ್ತು ಕರೆದಯ್?

ಮುದ್ದ—ಏಂ ಕಾಣೆನೆ? ನೋಯಂದಪ್ಪಿದೆನೆ?

ಮನೋ—ಮೇಣಾವ ದೇವಿಯಾಂ?

ಮುದ್ದ—ರತಿದೇವಿ.

ಮನೋ—ಅಂತಪ್ಪೊಡೆ ನೀಂ ಕಾಮದೇವಂ.

ಮುದ್ದ—ಅಕ್ಕ ದೇವಿಯೊಂದು ಹಸಾದಂ.

ಮನೋ—ಎಲೆ ಮದನಮೋಹನರಾಜ! ಅಂತಿರ್ಪೊಡೆ ನೀಂ ಪೇೞ್ದ ರತಿಯನೆ ಬಣ್ಣಿಸಿ ಪೊಗೞ್, ನೋೞ್ಪೆಂ.

ಮುದ್ದ—ಓ! ಏತಱ ಮಾತೊ! ಎನ್ನಳವೆ?

ಮನೋ—ಆಃ! ರತಿಯಂ ಬಣ್ಣಿಸಲ್ಕೆ ಸಲ್ಲದ ನೀನೇತಱ ಕಾಮದೇವಂ!　೨೦

ಮುದ್ದ—ಅಂತಪ್ಪೊಡೆ ಸಲ್ವೆಂ ಸಲ್ವೆಂ. ಕಾಮದೇವನೆಂಬೊಂದು ಬಿರುದಂ ಪಡೆದುಮಾಱುವೆನೆ? ತೆಗಟ್ಬುರಿರ್ಕೆ! ಇದೆ ಇದೆ ತೊಡಂಗಿದೆಂ: ಅಸಿದೊಡಲ ಪೂಗಣ್ಣ ಪೆಣ್; ಸಸಿಮೊಗದ ಕಿಸುವಾಯ ಪುಸಿನಡುವಿನರಸಿ; ಮಿಡಿ ಮೊಲೆಯ ಪಿಡಿನಡೆಯ ಜಡುಜಡೆಯ ನೀಱೆ, ಜೆಟ್ಟು—

ಮನೋ—(ಅರೆನೋಟದಿಂ) ಆಃ! ಕಬ್ಬಿಗರ್ಗೆ ನೀಂ ಕಲ್ಲಾಯ್ತುನಕ್ಕುಂ. ಎಂದುಂ ಕಾಣದರೊಂದು ಪಾಂಗಿನಿಂ ಪೇೞ್ದ ಪೊಚ್ಚಱದ ನಿನ್ನೀಬಣ್ಣನೆಯ ನುಡಿಗೇನೆಂಬೆನೊ! ಒಡಲಸಿದೇಂ? ಮೊಗದೊಳೇತಱ ಸಸಿ, ಕಣ್ಣೊಳೇತಱ ಪೂ, ನಡುವಿನೊಳೇಂ ಪುಸಿ! ಎಂದು ಬಾಯಂ ಕಿಸಿದಳ್. ಜಡೆಯುಂ ಜಿದಿರ್ಗ ಳ್ಕೇಂ ದೆವ್ವಮಾಳ್ದುದೆ? ಪೋ, ನೀಂ ಕಾಮನಲ್ತು, ಭೀಮಂ.

ಮುದ್ದ—(ಕಿಱುನಗೆಯಿಂ) ಎನ್ನ ಕುಲದೇವಿ! ಇನಿತೊಂದು ಮುನಿಸೇಂ.　೩೦

ಎನ್ನ ನಗೆಯಿನಿಂತಾಯ್ತುಕ್ಕುಂ. ಸೈರಿಸು! ಸೈರಿಸು! ನುಡಿನಿಱುಗೆಯುಂ ಬೆದಂಕಿ ಪಾರದಂತುಂ, ಇರ್ದಂತೆ ಬಣ್ಣಿಪೊಂದು ಜಾಣ್ಮೆ ದೊರೆಕೊಳ್ವಂತುಂ, ಬಾಸೆ ವೆಣ್ಣೊಂದೊಲ್ಮೆದಾಳ್ದಿ ವಾಕ್ಸಿದ್ಧಿಯಂ ಪಡೆದು ನಿನ್ನಂ ಎನ್ನ ಜನ್ನದಾರದಾಣೆ! ರತಿಯಿಂ ನೂರ್ಮಡಿ ಮಿಗಿಲೆನಿಸಿ ಬಣ್ಣಿಪೆಂ.

ಸುವ್ವಿ! ಸುವ್ವಿ! ನಾಲ್ಮೊಗನಗ್ಗಿಟ್ಟಿಕೆಯೊಳೊಗೆದ ಒಳ್ನಗೆಯ ಮುದ್ದು ಗುವರಿ! ಸುವ್ವಿ! ಸುವ್ವಿ! ಬೀಣೆ ಹೊತ್ತಗೆಗಳಂ ಪೊತ್ತ ಕೈಯ ಚೆಲ್ವೆ! ಸುವ್ವಿ! ಸುವ್ವಿ! ಬಾಣಿ. ಎನ್ನೀ ಮಡದಿರನ್ನೆಯಂ ರತಿಗೆಣೆಯೆಂದು ಪೊಗೞ್ದು ಪಾಡುವೊಂದು ಜಾಣ್ಮೆಯ ಪೊರ್ದುಗೆಯ ನುಡಿಬಿನ್ನಣಮನೆನಗೆ ಕರುಣಿಸೌ! ನಿನಗೆಱಗುವೆಂ. ಸುವ್ವಿ! ಸುವ್ವಿ! ಆ! ಆ! ಆ! ಆ! ಆ!!!

೧೦ ಮನೋ—ನೀಂ ಗೆಯ್ದ ಸರಸತಿಯ ಪೊಗಳ್ಕೆಯ ತುತ್ತತುದಿಯ "ಆ! ಆ!!" ಏಂ?

ಮುದ್ದ—ಅಂತದು ಪಾಡಿನ ಜೋಡಿನ ದಾಟಿಯ್ಯೆಸೆ.

ಮನೋ—ಆಯ್ತಾಯ್ತು ಚೆಲ್ವು. ಏಂ ನಿನ್ನಂ ಸರಸತಿಯೊಲ್ದಳ್?

ಮುದ್ದ—ಎಂತೆಂತೊ ಪಾಡಿ ಬೇಡಿ ಒಲ್ಮೆವಡೆದೆಂ. ಈಗಳೆನಸುಂ ತಡಂ ಬಡದೆ ಬಣ್ಣಿಸಿ ನಿನತೊಂದೊಲ್ಮೆವಡೆದಪೆಂ. ಕೇಳ್! ಮಾಕಾಳಿಯ ಮೈವೊಗರ್ಗೆ. . .

ಮನೋ—ನಿನ್ನ ರತಿಯಂ ಬಣ್ಣಿಪೊಂದು ಸಂಧಿಯೊಳ್ ಮಾಕಾಳಿ ಯೊಳೇಂ ಕಜ್ಜಂ?

ಮುದ್ದ—ಆಃ! ಎಡರ್ಗೇಡಿಯನೆ ಮಱೆತೆಂ. ಆತನಂ ಬಲಂಗೊಳದಿರ್ಪಿನಂ

೨೦ ಮೊತ್ತಮೊದಲೊಳಿನಿತುಂ ವಿಘ್ನಂ. ಓ ಓ! ಒರ್ಪಸೆಯ ಬಿಂಕಣಿಗಿವಿಯ ಮೂಗೊಂಕುಮೂಗಿನ ಪೇರೊಡಲ ಇಲಿದೇರ ಬೆನಕ! ಇದೆ ಮಣಿವೆಂ. ಈ ರಮಣೀಮಣಿಯಪ್ಪ ರತಿದೇವಿಯಂ ಬಣ್ಣಿಪೊಂದು ಕವನದ ಕಜ್ಜದುಜ್ಜು ಗದನಿತೊಂದು ಪೊಟ್ಟನೇಮಾಪ್ಕೆಯೊಳಮೆಡರ್ ಬಾರದಂತು ಕಾವುದು. ಇನಿತೊಂದು ಮೇಲನೊಡರ್ಚಿದೆಯಪ್ಪೊಡೆ ಆಬಣ್ಣನೆಯ ಪೊಗಳ್ಕೆಯ ಪಾಡಿಂಗೊಲ್ವೆನ್ನೀಮಡದಿ ಕೂರ್ಮೆಯಿನೆನಗೆ ತಿನವಡಿಸುವಾಪಸುಗೆಯ ಚಕ್ಕುಲಿಯಂ ಗಾರಿಗೆಯಂ ಪುರಿಗಡಲೆಯನವಲಂ ಕರ್ಬಂ ತೇಂಗಾಯಂ ನಿನಗಂ ಪಾಲಿತ್ತು ಮೊದಲೊಳರ್ಪಿಸುವೆಂ.

ಮನೋ—ನಿನ್ನ ಬೆನಕಂ ಒರ್ಪನೆವಾಯೊಳೆಂತುಣ್ಗುಂ.

ಮುದ್ದ—ಏಂ ರಮಣಿ ದೇವರುಣ್ಬರೆ! ಉಣ್ಬೊಡಂತೆಂಬೆನೆ?

೩೦ ಮನೋ—ಮೇಣೊರ್ವನೆ ತಿನಲ್ ಬಗೆವಾ!

ಮುದ್ದ—ನೀನೀವುದೇಂ ದಿಟಂ.

ಮನೋ—ಎತ್ತಾನುಮಿತ್ತೊಡೇಂಗೆಯ್ವಯ್.

ಮುದ್ದ—ಇಸ್ಸಿ! ಅನಿತ್ತು ಭಕ್ಷ್ಯಮನೊರ್ವನೆ ನುಂಗಲಾಂ—ತಾವೆ (!) ಚಕ್ಕುಲಿಗಾರಿಗೆಗಳ್ ಕಾಮದೇವಂಗೆ; ಅವಲುಂ ಪುರಿಗಡಲೆಯುಂ ಮುದ್ದಣಂಗೆ; ಕಬ್ಬು ಕಬ್ಬಿಗಂಗೆ; ತೇಂಗಾಯೆನಗ್ಸೈಸೆ!

ಮನೋ—ನೀಂ ಜಾಣಂ. ನಿನ್ನ ರತಿದೇವಿಗೇಂ?

ಮುದ್ದ—ತಾನೆ ಒಲ್ದಿೀವ ದೇವಿಗಾವುದಱೊಳಾಸೆಯೊ?

ಮನೋ—ಅಂತಿರೆಯುಂ ಮನೋರಮೆಗೇಂ?

ಮುದ್ದ—ಓವೊ! ರತಿಯುಂ ಬಣ್ಣಿಪೊಂದು ಬೆಸನದೊಳ್ ಮನೋರಮೆಯುಂ ಮಱೆದುಟಿದೆಂ. ಅಕ್ಕೆ! ಕರ್ಬಿನ ಸಿವುರುಂ ಮುಗ್ಗಿದ ಗಾರಿಗೆವುಡಿಯುಂ ಮನೋರಮೆಗಿರ್ಕೆ. ೧೦

ಮನೋ—ನೀಂ ಬಲ್ಗಡಸುಗಾಱಂ, ಸಾಜಂ. ಇರ್ಕೆ. ನೀಂ ಮನದೊಳೆ ಮಂಡಿಗೆಯನುಂಡಂತಾಯ್ತು. ಈಗಳಿಂ ಕೇಳ್ವೆಂ ರತಿಯ ಪೊಸಬಣ್ಣನೆಯುಂ.

ಮುದ್ದ—ಕೇಳ್. ಆಂ ಬಣ್ಣಿಪ ರತಿಗೆ ಮಿಂದ ಮರಗೂಟನೊಂದು ಮೆಯ್ವೊಗರ್.

ಮನೋ—ಮರಗೂಟನೆಂದೊಡಾರ್?

ಮುದ್ದ—ದೆಸೆವಳರೊಳೊರ್ವಂ.

ಮನೋ—ಉಂ. ಹುಂ.

ಮುದ್ದ—ಸಿಂಗರದ ಮಲೆನಾಡಿಗನೊಂದು ಭಂಗಿಯ ಮೊಗಂ. ೨೦

ಮನೋ—ಮಲೆನಾಡಿಗನೆಂದೊಡಾವಂ?

ಮುದ್ದ—ಮಲೆಯೊಳೆ ನೆಲೆಗೊಂಡಿರ್ಪ ನಾಲ್ಗೈಯ ದೇವರ್.

ಮನೋ—ಇಂತಪ್ಪ ದೇವರೊಲ್ಮೆವಡೆದೆ ಮಲೆನಾಡ ಪೆಣ್ಗಳ್ ಕಣ್ಗೆ ಚೆಲ್ವೆಯರಾದರಕ್ಕುಂ.

ಮುದ್ದ—ಅಪ್ಪುದು. ಮತ್ತಮಾನೀಱೆಗೆ ಇರುಳ್ಗಣ್ಣಂಗೆಂತಂತೊಪ್ಪವಬಟ್ಟ ನುಣ್ಗಣ್.

ಮನೋ—ಇರುಳ್ಗಣ್ಣನೆಂದೊಡೆ ಆವ ಸೈಪುಳ್ಳಂ?

ಮುದ್ದ—ಇರುಳ್ಗಣ್ಣನೆಂದು ಚೆಂದವನಕ್ಕುಂ.

ಮನೋ—ಆಃ! ಕಾಮದೇವರ ದೇವ! ಈಗಳೀಗಳಱಿತೆಂ. ನೀಂ ಬಣ್ಣನೆಯೊಳೆರಡನೆಯ ಬೊಮ್ಮಂ ನಿಕ್ಕುವಂ. ಎನ್ನೀ ಜೋಲ್ಮಡಿಯ ೩೦

ಪೂಸರದಾಣೆ! ನಿನಗಾವ ಭಕ್ಷ್ಯದೊಳಿಷ್ಟಂ? ಪೂರಣಗಡುಬನೀವೆನೊ? ಚಕ್ಕುಲಿಯುಂ?

ಮುದ್ದ—ಇರಿರ್! ಸೈತು ಬೈತಿಡು ಮಾದೇವಿಯ ಕಡೆವೊತ್ತಿನೊಂದು ರೂಪಿಗೆ ಪಡಿವರಿಜಾಗೆ ಮೆಱೆವೆನ್ನ ರತಿದೇವಿಯನಡಿವಿಡಿದು ಮುಡಿವರೆಗಂ ಬಣ್ಣಿಸದ ಮುನ್ನ ಮಿನಿತೊಂದು ಬೇಗದಿನೊಲ್ವಾ!

ಮನೋ—ಮುನ್ನೀರ ನೀರ ಸವಿವೊಂದು ಬಗೆಯೊಳ್ ಕೊಡನ ಕುವರ ನಂತಿರೆ ಬಲ್ಗಡಲನೆ ಕುಡಿವೊಡಕ್ಕುಮೆ? ಒರ್ಪನಿ ಸಾಲದೆ?

ಮುದ್ದ—ಅತಿಪ್ರಸಂಗಂ ಸಾಲ್ಗುಂ. ಇಂತು ವ್ಯರ್ಥಾಳಾಪದಿಂ ಪೊಟ್ತುಂ ಕಟಿವೆಮ್ಮಂ ಲೋಗರ್ ಪಟಿಯರೆ? ಪೋ ಮಾಣ್, ರಾಮಕಥೆಯನಿನ್ನೊರೆವೆಂ, ೧೦ ಕೇಳ್.

ಆ ವೇಳೆಯೊಳ್ ಶ್ರೀರಾಮನ ಕುದುರೆ ಬಲ್ಪಿನ ಪಗೆರಾಯಗುವರನೊಳ್ ಬಂದಿವಟ್ಟುದೆಂದು ಚರರೆಂದ ನಿಟ್ಟುರದ ಕಕ್ಕಸದ ನುಡಿ ತನ್ನ ಕಿವಿವೊಳಗಂ ಪುಗುತರ್ಪ ಮುನ್ನಮೆ ಪ್ರತಾಪಾಗ್ರ್ಯನೆಕ್ಕೆಕ್ಕೆ ಮಿಕ್ಕುವರ್ಪ ತೆಕ್ಕದೆಕ್ಕತುಳದ ರೋಸದಿನಾಡಿ ಕುಣಿವ ಕುಡಿಮೀಸೆಯಂ ಪುರಿಗೆಯ್ದು ಬೆಮರಿಡುವ ಕೆಕ್ಕೆಯಂ ಸಮೞ ್ಕೆತ್ತುವ ಮುಯ್ವನೊತ್ತಿ ಬಿಲ್ಗೆ ಕೊಪ್ಪನೇಱಿಸಿ ತಿರುವಾಯ್ಗೆ ಕಣೆಯಂ ಪೂಡಿ ತೇರನೇಱಿ ನಾಲ್ವಗೆಯ ಪಡೆವೆರಸು ಕುದುರೆ ಗಳ್ಳನಾವನಾವಂ ತೋಱು ತೋಱೆಂದು ಪಗೆಯೊಳೆತ್ತಿ ನಡೆದಂ.

ಇತ್ತಲ್ ದಮನಂ ಪೊಣರ್ಕೆಗೆಂದು ಬರ್ಪರಿಸೇನೆಯಂ ಕಂಡು ತನ್ನ ಮೆಯ್ಗಾವಲ ಕಿಱುವಡೆಗೆ ಕೈವೀಸಿ ಚೂಣಿಯೊಳೆ ನಿಂದು ತಾಗಿದಂ. ೨೦ ಆವೊತ್ತಿಂಗೆ ಮಾಱಾಂತರಿರಾಯಗುವರನಂ ತೂಳ್ದು ಬಾರಿಸುವ ಪರ್ಪರಿಕೆಯ ಸೂರುಳೊಂದು ಬಲ್ಲಾಳ್ತನದ ಗಂಡಗರ್ವದಿಂ ತೇರಂ ನೂಂಕುತುಂ ಕಾರ ಕರ್ಮುಗಿಲೊಡ್ಡೆನಲ್ಕೆಡ್ಡಮೆಸೆವ ಪೇರಾನೆಗಳ ಘಟೆಯಂ ನೊಳ್ಗಿಸುತುಂ, ಪೇರುರ್ಬಿನ ಕಡಲ ನಡುವಿನೊಳಡಿಗಡಿಗೆ ಗುಡಿಗಟ್ಟಿ ಮಡಿಮಡಿವ ನಿಡುದೆರೆಯ ಲೀಲೆಗೆ ಪಡಿವರ್ಪೊಂದು ಗತಿಯ ಕುದುರೆಗಳ ತಟ್ಟನಣೆದೊತ್ತುತುಂ, ಮಾರಿಯ ಮಸಣಿಯ ಚೂಳಿಯುಂ ಪಿಡಿದು ಜಡಿವ ಜವಹುರಮಂ ತಗುಳ್ಚಿ ತಾವೊಕ್ಕ ಲಿಕ್ಕುವ ಬೋಡೆಯರ್ಗೆ ಗುರ್ವನಗುರ್ವಿಸುವ ಸೆಱಗಂ ಬೆಱಗಂ ಪಾರದ ಬಲ್ಗೈ ಬಂಟರ ಪೆರ್ವಡೆಯಂ ಜರ್ವಿ ಕೆತ್ತಿಸುತುಂ, ತಾಂ ನಾಯಕನಾಗೆ ಪ್ರತಾಪಾಗ್ರ್ಯಂ ಮಾರ್ಮಲೆದು ದಮನನಂ ತಡೆದೊಡ್ಡಿ ನಿಲ್ತಂ. ಇಂತುಱುಬಿ ಬಂದುಂ ನಿಂದುಂ ಮುಂದುಂ ಪಿಂದುಂ ಸಂಧಿಸಿದ ಬಂದಿಗಾಱರ ಗೊಂದಣಮಂ ನಂದಿ ೩೦ ಪೊಂದು ಕುಂದದ ಗರಗರಿಕೆಯ ಕೈದುಗಾಱತನದ ಬಲ್ಮೆಯೊಳೆ ಮಾಱೊಡ್ಡಿ

ಮೊನೆಗಾಂತ ದಮನನನಿದಿರ್ಚಿ ಕೋಲ ಸರಿಯಂ ಕಱೆಯುತೆ ಕರೆಯುತೆ ಎಲೆ ಪಸುಳೆ, ನಿನಗಿಂತೇಂ ಹರಣಂ ತಿಣ್ಣಮಾಯ್ತೆ ! ನಿರ್ನೆರಮೆನ್ನೀಕೂರಂಬುಗಳ್ಗೆ ತಲೆಯುಂ ಮಾಱುಗೊಟ್ಟು ಸಾಯಲ್ ಬಗೆವಾ! ಇಸ್ಸಿ! ನೀಂ ತರಳಂ; ಪೋಣರ್ಕೆಯಾಗದು. ಅಂತಿರ್ಪಿನಂ ದೇವರ್ಕಳಿಂ ನಿಚ್ಚಂ ನುತಿಗೊಳ್ವ ಪೆರ್ಮೆ ಗೊಡೆಯನಪ್ಪ ರಾಮನ ಹಯಮುಂ ಬಿಟ್ಟು ಕಾಣ್ಕೆಯುಂ ಕೊಟ್ಟು ಪುದು ವಾಬ್—ಎಂದು ಕೇಳಿಸಿದಂ. ಆನುಡಿಗೆ ಕಡಂಗಿ ದಮನಂ—ಕೇಳ್ ! ಕೇಳ್ ! ಹರಣಂ ತಿಣ್ಣಮಾದರ್ಗೆ ದಾವುಂ ಪಾವುಂ ನೀರೊಂದು ಟಾವುಂ ಪೊತ್ತುವ ಕಿಚ್ಚಿನ ಬೇಹುಮೊಳವು. ಸಂಗರದೊಂದು ದಂದುಗಮೇಕೆ ? ನಾಲಗೆ ನಿಡಿದಾ ದರ್ಗೆ ಕೂರ್ವಾಳುಂ ಕೊಲುಮೀಗಳೆ ಸಾಧ್ಯಂ. ಅಂತದುಕಾರಣಂ ಸಲ್ಲದ ನಿನ್ನಂಕದ ಬಿಂಕದ ವ್ಯೈಸಾಸದ ಸಡಗರದ ಬಿಡುನುಡಿಯ ಚೊಕ್ಕಳಿಕೆಯುಂ ಒಲ್ಲದೆ ನಿಲ್ಲದೆ ಮರಲ್ವುದೆಂದಂ. ಇಂತಾಡಿದ ದಮನನಂ ಪೊಸಮಸೆಯ ಕೂರ್ಗಣೆಗಳಿನಿಸುತುಂ—ಎಲೆ ಕುದುರೆಗಳ್ಳ! ಕೂಟ! ನೀಂ ಬಾಲನೆಂದಿಂತು ನಯಂಬೇಡ್ದೊಡಂ ಬಳ್ಳದಳ್ಳದೆ ಮಾಱಾಂತಿದಿರ್ಚಿ ಸಾವ ನಿನ್ನೀನೊಸಲಕ್ಕರ ದೋದಿಂಗೇನೆಂಬೆನೊ! ಪುಣ್ಯಮೂರ್ತಿರಾಘವನ ಜನ್ನಕ್ಕೆಡರಂ ತರ್ಪೊಂದು ಸೆಡಕಿಂ ದುಡುಕಿಂ ಪೋಪ ಹಯಮುಂ ಬಂದಿಗೊಂಡೊಂದಟಿಗೆಯ್ಮೆಯೆ ಸಿಂದಿ ದುದಕ್ಕುಂ; ತಪ್ಪೇಂ—ಎಂದಾಡಿದಂ. ಆಗಳ್ ಕೋಪಾಟೋಪದಿಂ ದಮನಂ —ತೆಗೆ ತೆಗೆ ನಿನ್ನಾರಾಘವನಂ, ಹಯಮುಂ. ಗಂಡುಗಲಿತನದಿಂ ನಿನ್ನಾರಾಯ ಗುವರನೆಂ; ನಿನ್ನ ಬನ್ನದ ಜನ್ನದ ತುರಂಗಮುಂ ಕಟ್ಟಿದೆಂ. ನೀಂ ಕಲಿಯಾಗಿ ಕಾದಿ ಎನ್ನಂ ಸಮಂತು ಹಯಮುಂ ಗೆಲ್ವುದು ಕೊಳ್ವುದು—ಎಂದಂ. ಪ್ರತಾಪಾಗ್ರ್ಯ ನೆಂಗುಂ:—ಬಿಟ್ಟ ಕುದುರೆಯುಂ ಬಿಟ್ಟಿರ್ಪರೆ ಬೀರರ್. ಇದೆ ಇದೆ ಪೊಂಗಱಿಯ ಕೋಲ್ ಕಟ್ಟಿ ಬಿಡದರೆರ್ದೆಯೆಲ್ಲಗಂ ಪುಡಿಗುಟ್ಟಿ ನೆಟ್ಟನೆ ಹಯಮುಂ ಮರಲ್ಚ ಲ್ಕೆಂದು ಪೂಣ್ದು ಪೂಡಿದೆಂ, ಅರಮಗನೆಂಗುಂ:—ಅಂತಿರೆಂದು ಮರಲ್ಚ ಲ್ಕೆಂದು ಬರ್ಪ ಪಗೆಯನೆಬ್ಬಟ್ಟಲ್ಕೆಂದು ಬೀರಸಿರಿಯೆತ್ತಿದ ನೆತ್ತರುಂಡ ಕೆಂಗ ಣೆಯುಂ ನೋಡಿದೆಂ.

ಕಾಂತೆ, ಈಗಳ್ ಪೊಯ್ಕೈಗೆ ಮೊದಲ್. ಆಗಳ್ ಪ್ರತಾಪಾಗ್ರ್ಯಂ ತನ್ನೊಂದದಟಿನರಿಯುಂ ಶರಜಾಲದಿಂ ಮುಸುಂಕಲೊಡಂ ನಡುವಟ್ಟೆಯೊಳೆ ಬರ್ಪ ಕಣೆಗಳಂ ಮುಕ್ಕಡಿಗೆಯ್ದು ಮೇಲಂಬುಗಳನೇಸಾಡುವುದುಂ, ಪ್ರತಾ ಪಾಗ್ರ್ಯಂಗೆ ಜೀವರಕ್ಕೆ ಬೆಸುಗೆವಿಟ್ಟುದು; ತೇರಿನಸರಗೀಲ್ ಕಟಲ್ದುದು; ಪಟ ಯಿಗೆಯುಡಿದತ್ತು. ಮತ್ತಂ ಪೊಸದಗಲೆಯುಂ ಬಿಗಿದು ಅಳವಟ್ಟ ಪೊನ್ನ ಪಡಿ ದೇರನೇಱಿ ಮುಟ್ಟಯಿಸಿ ಕಟುತ್ತೆಱಗಿ—ನೀಂ ಕಡುಗೈಗಲಿಯಕ್ಕುಂ, ಎಂ

ಮಿಱ್ತುವಿನುಂಡಿಗೆಗೊಂಡಯ್! ಇದೆ ಇದೆ ನಿನ್ನಟ್ಟೆಯಿಂ ಜವನರಮನೆಯ
ಮುಂಬಾಗಿಲ್ಗೆ ಲಾಳವಿಂಡಿಗೆಯುಂ ಸಮೆವೆನೆಂದು ಮೂಡಿಗೆಯಿಂ ಕಿಡಿಯಿಡು
ವುರಿಗಣೆಯನಾರ್ದೆಚ್ಚಂ. ಅನಿತಱೊಳೆ ದಮನಂ ಭುಗುಭುಗಿಲೆಂದು ಪೊಗೆದುಂ
ಪೊತ್ತಿಯುಂ ಕಿಡಿಗಾಱಿಯುಂ ಜಾಲೆಯೊಕ್ಕುಂ ಮಿಕ್ಕುಂ ಮೀಱಿಯುಂ
ಪರಿತರ್ಪ ಕಿರ್ಚುಂಗೋಲಂ ಚೆಚ್ಚರದೊಳೆ ತನ್ನೊಂದು ಬೆಚ್ಚಪೊಚ್ಚ ಪೊಸ
ನೀರೊಡಲ ನಿಡುಗೋಲಿಂ ಕಾಲ್ದೊಳೆಯಿಸಿದಂ. ಬಟಿಯಂ ಮಱುವಕ್ಕದತ್ತಣಿಂ
ವಾಯವ್ಯಾಸ್ತ್ರಂ ತಳರ್ದು ಬರ್ಪುದುಂ ಸರ್ಪಾಸ್ತ್ರಮಂ ಸಂಧಿಸಿದಂ. ಇಂತು
ಮಂತ್ರಾಸ್ತ್ರಂಗಳ್ ಮುಡಿಯಲೊಡಂ, ಬಲ್ಮೆಯ ತೋಳ ತೋಟಿ ಬಳ್ವಳ
ಮಾಗೆ ಪೊಣರ್ದರ್. ಕಡೆಯೊಳ್ ಪ್ರತಾಪಾಗ್ರ್ಯಂ ದಮನನ ಬಲ್ಪಿಡಿಗು
೧೦ ರ್ದಿಂಗೆ ನಿದ್ದೆವೋದಂ. ಆಪ್ರಸ್ತಾವದೊಳ್ ರಥಿಕನೊಂದು ಸೋಲಂ ಕೇಳ್ದು
ಪುಷ್ಕಲಂ ಶತ್ರುಘ್ನನಿಂ ಬೆಸನಾಂತು ತಳ್ವದೆ ಮಾಱಾಂತ ವಿಕ್ರಾಂತರಾಜ
ಪುತ್ರನಂ ಸರಲ ಸೋನೆಯಿಂ ಕಿವುಳ್ಚಿ ಮುಸುಳ್ಚಿ—ಎಲೆಲೆ! ಪೋ ಪೋಗದಿರ್,
ಭಟನಾಂ ಕಾಳೆಗದ ಮೊನೆಗೆ ಬಿಲ್ಗೊಂಡು ಬಂದೆಂ. ನಲ್ನುಡಿಯೊಳೆ ಹಯಮಂ
ಚಲಮಂ ಬಿಡು. ಅಲ್ಲದೊಡೀಗಳೆ ಪಡೆಯನೊಡೆಮುಱಿವೆಂ—ಎಂದು ತಡೆದಂ.
ಆಗಳ್ ಸುಬಾಹುತನಯಂ ಬಂದನಂ ನಿಂದು ನೋಡಿ—ನೀಂ ಪಡೆಯೆಸಲ್
ತೊಡೆಯಂ ಮುಱಿವೈ; ಭಟನಲ್ತು ಭಟ್ಟಂ; ಕೊಂಡುದು ಬಿಲ್ಲಲ್ತು ಪುಲ್;
ಬಂದುದು ಕಾಳೆಗದ ಮೊನೆಗಲ್ತು ಮಾಳೆಯದ ಮನೆಗೆಂದಂ. ಪುಷ್ಕಲಂ
ಕಾಹುರದಿನೆಂಗುಂ:—ಬಿಡು ಬಿಡೀಬಿನ್ನಣದ ನುಡಿಯಂ. ಇದೆ ಪೊಣ್ದೆಂಬೆಂ.
ಇಂದೀ ಕೊಳುಗುಳದೊಳ್ ನಿನ್ನಂ ಗೆಲ್ದಲ್ಲದೆ ಕಾಜ್ಗೆಡೆದೆನಾದೊಡೀಬಿಲ್
೨೦ ಊಱುಂಗೋಲಕ್ಕೆ, ಅಣ್ಮು ಕಣ್ಮಾಯಮಕ್ಕೆ, ಮೇಣುಂ ಗೆಲ್ಲವೆಣ್
ನಿನ್ನೊಳ್ ಕೇಣಿಯಕ್ಕೆ! ಕೈಮಱೆದು ಕೆಕ್ಕಳಿಸದಿರ್. ದಮನನೆಂಗುಂ:—
ನೀನಿಂತಿರೆ ಗಡಾವಣೆಯಂ ಕೋರವಿಸಿ ಗಟ್ಟಿಸಲೇಂ? ಪೋ ಗಸಣಿಯ
ಗರುವಾಯ ಗೂಳೆಯದ ಜೋಹಮಂ ಬಿಡು. ಆರ್ಪೊಡೆ ಕೈಚಳಕಮಂ
ತೋಱು. ಪುಷ್ಕಲನೆಂಗುಂ:—ಅಬ್ಬಾ! ಮೊನೆಗಾಱದ ಮೊನೆಗಾಱಕುವರ!
ನಿನ್ನೊಳ್ ಕಡುಕೆಯ್ದು ಪೊಣರ್ವಿನಂ ಗುಣಂ ಬಾರದೆಂಬೊಂದು ಬಗೆಯಿಂ
ಸೈತಿಡೆ ನೀನೊಡಂಬಡದೆ ಬಾರ್ತೆಗೆಟ್ಟೆಳನೆತ್ತರ ಕೊರ್ವಿಂ ತಲೆಯಂ
ಪೋಗುಡುವೀನೀಂ ಮರುಳಾಗಾ! ನಿರ್ನೆರಂ ಕಾಡಾನೆಯೊಳಿದಿರ್ಚುವ
ನಾಡ ಕುನ್ನಿಯಂತು ನೀನೆನ್ನೊಳ್ ಕಡುಕೆಯ್ವಾ! ದಮನನೆಂಗುಂ:—ನೀಂ
ಕಾಡಾನೆಯಲ್ತು; ನೆಣಗೊರ್ವಿನೂರಾನೆಯಕ್ಕುಂ. ಪುಷ್ಕಲನೆಂಗುಂ:—
೩೦ ಏನೆನ್ನಂ ನಾಡ ಪಂದಿಯೆಂದು ಕೊಱಚಾಡುವಾ! ನಿನ್ನ ತುದಿನಾಲಗೆಯ

ನೀಕೂರ್ವಾಳಿನೀಗಳೆ ಸೌಳನೆ ಸೀಳ್ವೆಂ, ಗಱಿಪದಿರ್. ದಮನಸೆಂಗುಂ:—
ನಿನ್ನಂ ಪಂದೆಯೆಂದರಲ್ಲ; ಪಂದಿಯೆಂದು ನುಡಿದರೊಳರೇ! ಇಂತೀನುಡಿಗೆ
ಪುಷ್ಕಲಂ ಕರಂ ಕನಲ್ದು ದೊಣೆಯಿಂ ನಂಜನುಗುಳ್ವ ಕವಲಂಬುಗಳನುರ್ಚಿ
ಮೊಗೆದಿಸುತುಮಿರೆಯಿರೆ, ದಮನಂ ಎಡನಂ ಬಲನಂ ತಿರುಗಿಯುಂ ಸಾರ್ದುಂ
ಪಡಿಸರಲಂ ಜೋಡಿಸಿಯುಂ ರಯ್ಯನೆ ಬರ್ಪ ಪಗೆಯ ಪೊಸಕಣೆಗಳಂ
ಖಂಡಿಸಿಯುಂ ದೇವರ್ಕಳ್ ಪೊಗಳ್ವನ್ನಂ ಸಮದಂಡಿಯೊಳ್ ಪೊಣರ್ದಂ.
ಕಟ್ಟಕಡೆಯೊಳ್ ಕೈಸೋಲ್ತು ಮೈಗುಂದಿ ಬಸವಳಿದು ಮುಚ್ಚೆವೋದಂ.

ಮುದ್ದಣಂ—ಸಕಲಗುಣಸಂಪನ್ನೆ! ಏಕಗುಣಹೀನೆ!

ಮನೋರಮೆ—ಅಬ್ಬಾ! ಎನ್ನ ಗುಣದೊಳಾವುದೊ ಒಂದು ಹೀನಂ!

ಮುದ್ದ—ನಲ್ಗತೆಯಂ ಪೇಳ್ವರ ಕಣ್ಗೆ ಕಟ್ಟಿದಿರೊಳ್ ಪುರುಳನಱಿಯದ ೧೦
ಗಾಮ್ಪಿನ ಕಾಡವರಂತಿರೆ ನಿದ್ದೆಯ ಬಿಣ್ಪಿಂ ತೂಂಕಡಿಪ ನಿನತೊಂದು
ಗುಣಂ ಹೀನಂ!

ಮನೋ—ತೂಂಕಡಿಸದೇವೆನೊ? ಕಿವಿಗಳ್ಗೆ ಪುರುಳಮರದ ಗುರ್ದಿನಾಟದ
ಬಱುರಗಳೆಯು ನಿಡುಗತೆಗೆ.

ಮುದ್ದ—ನಿನಗೇಂ ವೀರರಸಂ ಮೆಚ್ಚದೆ?

ಮನೋ—ಮೆಚ್ಚುಮುಚ್ಚನಱಿಯೆಂ. ಎರ್ದೆವುಗುವ ಪೊಚ್ಚಪೊಸ ನಲ್ಗ
ತೆಗಳನೆ ಮೆಚ್ಚುವೆಂ.

ಮುದ್ದ—ಉಂ! ಪೋಕೆ. ಮುಂತೆ ಮುಂತೆ ಚೆಲ್ವಿನ ಬಲ್ಸೊಗಸಿನಯೆ ನಲ್ಗತೆ
ಗಳ್. ಇಂತು ಸುಬಾಹುಜಂ ಪುಷ್ಕಲನೊಂದು ಬಾಣಹತಿಗಳವಳಿದು ಮೈಮು
ಱಿಯಲೊಡಮಾಗಳ್ ತಳ್ವದೊರ್ವನೋಲೆಕಾಱಿಂ ತಳರ್ದು ಪುರಕೈತಂದು ೨೦
ಸೋದರಂಬೆರಸೊಡ್ಡೋಲಗಂಗೊಟ್ಟಿರ್ದ ತಮ್ಮಾಳ್ದಂಗೆ ಮೊಟ್ಟಿ—ಕಾಮ
ದೇವರೀಗಳೆ ಕೊಳುಗುಳಕ್ಕೆ ಪೊಱಮಡಲಕ್ಕುಂ. ಅರಿರಾಯರೊಳೆಮ್ಮ
ಚಿಕ್ಕರಸಂ ನಿಂದು ಕಾದಿ ಮೈಸೋಲ್ತಂ. ಇಂತಿದೆ ಕಜ್ಜದುಜ್ಜಗದೊಂದು
ಬಿನ್ನಪಂ ಬಿನ್ನಪಮೆಂದು ಕೇಳಿಪುದುಂ, ಸುಭುಜಂ ಕಿಕ್ಕಿಱಿದೆಬ್ದು ತೂಗುಂ
ದೊಟ್ಟಿಲೊಂದು ಪಾಂಗಿನಿಂ ಬಗೆ ಮಸಮಱುಕದ ಗಂಡಗರ್ವದಿರ್ದೆಸೆಮೂಲೆ
ಗಳೊಳಮುಯ್ಯಲಾಡೆ ತನ್ನೊಂದಾಯುತಿಯಿಂ ತಱಿಸಂದು ಸಂಗರಕ್ಕೆಂದು
ಪೊಱಅಡಿಯಿಕ್ಕಿ ಮಿಕ್ಕಿನ ಸೇನೆ ನಡೆದು ಬರ್ಪಂತು ರಣದುಂದುಭಿಯಂ
ಮೊಱಗಿಸಿದಂ. ಆ ವೇಳೆಗೆ ಅಂಬಿಗರ ಸಬಳಿಗರ ಕೊಂತಗಾಱರ ಹರಿಗೆಕಾಱರ
ಕೈದುಗಾಱರ ಪಡೆವೆರಸು ಪಡೆವಳ್ಳರ್ ರಾವುತ್ತರ್ ಸಾದಿಗಳ್ ತೇರಾಳ್ಗಳ್
ದಂಡೆತ್ತಿ ಪೋದರ್. ಅವರಂ ಬಳಸಿ ಚಿತ್ರ ಚಿತ್ರಾಂಗ ಸುಕೇತುಗಳ್ ೩೦

ಮುಂತಪ್ಪ ಸಂದ ಮಹಾರಥರುಮತಿರಥರುಂ ಜೋದರುಂ ನಿಚ್ಚದ ಕಾಹಿನ ಬಂಟರನುಱಿದು ಪಡಿಬಲಮಂ ಕೂಡಿ ತೆರಳ್ದರ್. ರಾಯಸುಂ ಬೆಂಬಲಂಗೊಂಡು ರಥಮನಡರ್ದು ತಳರ್ದಂ.

ಅಂತು—ಇಱಿತರ್ಪ ಸೊವಡುಗುವ ದಾನಧಾರೆಯ, ಪನಿತು ಮೊಱಂಗಾಲೊಳ್ ಕಾಲ್ವರಿವ ನೊರೆಯ, ತಲೆಯೊಳೊಟ್ಟಿದ ಮಣ್ಣ, ಪೊಸತೊಂದು ಮಾಡ್ಕೆಯಿಂ ಬೆನ್ನ ಱೆಂಚೆಯ ಪಕ್ಕೆಯ ಗುಱಿದ ಕೋಡ ಕೀರ್ತಿಮುಖದ ಕೊರಲ ಕಿಱುಗಂಟೆಯ ಕಾಲ ಗಗ್ಗರಗೆಜ್ಜೆಯ ನೊಸಲ ಜಂಟಿಚೌರಿಯ, ಕೈಯ ಇಟ್ಟಿಯ ಸಿಂಗರದ, ನೆಲೆವೆಟ್ಟುಗಳೊಟ್ಟಜದಂತೆ ಮುಗಿಲೊಡ್ಡಿನ ದಡ್ಡಿಯಂತೆ ಜವನಾಳ್ಗಳ ಜಂಗುಳಿಯಂತೆ ನಡೆವ ಕಾರೊಡಲ ಪೇರಾನೆಗಳ; ಮತ್ತಂ ಮಿಂಚಿನ ವೇಗದಂತೆ ಸಿಡಿವ ಸಿಡಿಲಂತೆ ಕಡಲ ತೆರೆಯೊಟ್ಟಿನಂತೆ ಬೆಳಗಿನ ಪರ್ಬುಗೆಯಂತೆ ಮೀಱಿ ಧೀಂಕಿಡುವ ಪೊನ್ನಕಡಿಯಾಣದ ಸಮ್ಮದವಾಗೆಯುದ ರನ್ನದ ಪಲ್ಲಣದ ಸೊಗಸಿನ ತುರಗದಱದ; ಮತ್ತಂ ಎತ್ತಿದ ನೊಗದ ಸುತ್ತುವ ಗಾಲಿಯ ಬಿಗಿದಚ್ಚಿನ ನಿಂದ ಪಾಪೆಯ ನೆಮ್ಮಿದರಗೀಲ ಸಮಕಟ್ಟಿ ದೀಸಿನ ಗಟ್ಟಿಸಿದ ಮೊಗವಾಡದ ಬೆಟ್ಟಿದ ಕೀಲ ಕಟ್ಟಿದ ಕುದುರೆಯ ನಟ್ಟ ಪಱಯಿಗೆಯ ತೇರ್ಗಳ ಮೊತ್ತದ ಮತ್ತಂ ಮಾರಿಯೊಳ್ ಪೋರ್ವ ಮಸಣಿಯೊಳ್ ಗಸಣಿಗೆಯ್ವ ಜವನಂ ಜವಗಿಡಿಸುವ ಕುಳಿಕನಂ ಗುಳಿಗೆಗಟ್ಟುವ ಪೆರ್ಕಳದ ಕಾಲಾಳ್ಗಳ ಪಡೆಯ; ಮತ್ತಂ ಖಳಿಲೆಯ ಕಾಯ್ಪನೇಡಿಸುವ ಬಲ್ಸಿಂಗನ ಮುಂಗುಡಿಯ ಜರ್ವನಣಕಿಸುವ ಪಲ್ಲಮುಱಿಯ ಚಲ್ಲದ ಸೊರ್ಕನಿಱಿಕೆಯ್ವ ಬೀರದ ಜೋದರ ದಱವುಱದಿಂ ಸೇನೆ ಗಳಿಗೆಗಳಿಗೆ ಮುಂದೊತ್ತಿ ಕಡಲ್ಗೆ ಪಡಿಗಡಲ್ ಕೈಯೆತ್ತಿ ನಡೆವಂತು ನಡೆದು ಮುಗಿಲ್ ಮುಗಿಲಂ ತಾಗಿದಂತೆ ಬೆಟ್ಟು ಬೆಟ್ಟಮನಿದಿರ್ಚಿದಂತೆ ತಾಗಿ ನಿಲ್ವುದುಂ; ಮೊದಲ ರಣರಂಗದೊಳ್ ಪಗೆಯ ಕೋಲ ಪೊಯ್ಗೆ ಬಸವಱಿದು ಮುಚ್ಚೆಗೆ ಸಂದ ದಮನನಱಿದುಱಿದ ವೈಗಾಪಿನ ತುಱಿಲಾಳ್ಗಳ ಶೈತ್ಯೋಪಚಾರದತ್ತಣಿಂ ಮೆಯ್ದುಳಿದೆತ್ತಂ ದಿಟ್ಟಿಸುವ ಭರದೊಳ್ ಇದಿರ್ಗೆಬಂದ ತನ್ನಯ್ಯನ ಬೆಂಬಲದ ಸೇನೆಯಂ ಕಂಡು ತಾನವಱೊಳೊಂದಿದಂ. ಮತ್ತಮಿಂತಳವಾಂತ ಕುವರ ಸೊಂದಿರಕ್ಕೆ ಮೆಯ್ವೆರ್ಚಿ ಸುಭುಜಂ ಪಗೆರಾಯರಂ ಕೊಲ್ವೆನೆಂಬಾಸೆಯಿಂ ಬಾಸೆಗೊಟ್ಟು ತನ್ನ ಪಡೆಯುಂ ಕೊಂಚೆಗಟ್ಟಿನ ಕೋಂಟೆಯಂತೆ ಸಮೆದು ಮೊಗದೊಳನುಜಸುಕೇತುವಂ ಕೊರಲೆಡೆಯೊಳ್ ಚಿತ್ರಾಂಗನಂ ಪಕ್ಕಂಗಳೊಳ್ ಚಿತ್ರದಮನರನಿರಿಸಿ ತಾಂ ಬಾಲದೊಳ್ ನಿಂದು ಒಡಲೊಳ್ ಮಿಕ್ಕ ಜೋದರಂ ತುಂಬಿ ಯುದ್ಧ ಸನ್ನದ್ಧನಾದಂ.

ಅತ್ತಲ್ ಮಱುವಕ್ಕಮಿಂತೇರ್ಪಟ್ಟ ಪವಣ ಪೊಸಗೆಯ್ಮೆಯಂ ದಿಟ್ಟಿಪುದುಂ ಕಲಿಯಾಗಿ ಪಟ್ಟುವೆರ್ಚಿ ಜೊಬ್ಬಿಱಿದು ದೊಣೆಯಂ ಕಣೆಯಿನಣಿಗೆಯ್ದುಂ ಕೈಯ ತೆಳ್ವಾಳಂ ಮಸೆದುಂ ಬಿಲ್ಲ ಹೆದೆಯಂ ಪೊಸೆದುಂ ದಿಟ್ಟಮಾಯ್ತು.

ಆ ಪೊತ್ತಿಂಗೆ ಶತ್ರುಹಂ ಮಂತ್ರಿಯಂ—ಅಯ್ಯ, ಎಮ್ಮಾ ಕುದುರೆಯಂ ಸೆಱೆವಿಡಿದಿನ್ನೆ ಬರಮೆಮ್ಮೊಡನೆ ಕೈಗೈದ ಕಲಿಯಾವಸೀಗಳ್ ಬಲ್ಪಡೆವೆರಸು ಬಂದಿದಿರ್ಚುವನಾವನಾವ ನಾಡಿದು? ಏನೆಮ್ಮೊಳ್ ಕಾದಲಾರ್ಪನೆ? ಪೇಳ್— ಎಂದು ಕೇಳಲೊಡಂ, ಸುಮತಿ—ಇದೆ ತೋರ್ಪುದು ಚಕ್ರಾಂಕಪುರವರಂ; ಈ ರಾಯನಾನಾಡೊಡೆಯಂ. ಮೊನೆಯ ಮೊದಲೊಳ್ ತನಯನಳವಟಿದ ಸೆಂಡಱುತು ಎಮ್ಮೊಳೆತ್ತಿ ಬಂದಿರ್ಪಂ. ಕಡುಗಲಿ ದಲಿವಂ. ಕಾದಿ ಗೆಲ್ವೊಡೆಮ್ಮಿನಸದಳಂ. ಈತನೊಳ್ ಕಾದುವ ಬೀರನಾವನೊ? ಎಂದು ಸೇನೆ ಬೆಱಗುವಡೆ ನುಡಿದಂ. ಆ ನುಡಿಯಂ ಮಾಂಕರಿಸಿ ಲಕ್ಷ್ಮೀನಿಧಿ ತಾಂ ಕೈವೊಯ್ದು ಏತಱ ಪೊಳ್ಳುರಾಯಂ. ಎನ್ನೊಂದು ಸೂಟಿಯ ಗಜೆಯ ಬಡಿಗೆಡೆಗಿಡದೇಂ ಪೋಕುಂ. ಸಂತಂ ನೋಟ್ಪುದೆನ್ನೊಂದು ಕೈಚಳಕಮನೆಂದು ಪನ್ನತಿಕೆಯ ಗಂಡಗರ್ವದಿಂ ನುರ್ಗಿನೊಳ್ದುಱುವೊಗಸಂತಿರೆ ಕೊಂಚೆಗೋಂಟೆಯತ್ತಣ್ಗೆತ್ತಿ ನಡೆವುದುಂ ಬೆಂಬಟಿಯ ಕಾಲಾಳ ದಟಂ ವ್ಯೂಹವಂ ಮುತ್ತಿದುದು. ಅಂತು ಮುತ್ತಿಯುಂ ಖೊಪ್ಪರಿಸಿಯುಂ ಸಾರ್ದುಂ ಸೇರ್ದುಂ ಕಾಲಾಳ್ಗಳ್ ಕಾಲಾಳ್ಗಳಂ ತೇರಾಳ್ಗಳ್ ತೇರಾಳ್ಗಳಂ ಗೋಟಾಯ್ತರ್ ಗೋಟಾಯ್ತರಂ ಸಾದಿಗಳ್ ಸಾದಿಗಳನಿದಿರ್ಚಿ ಕಾದುತಿರಲೊಡಮಾಗಳ್ ಪಡೆಗೋಂಟೆಯ ಬಾಗಿಲೊಳೆ ತನ್ನಾಯತಿಯಿಂ ನೂಂಕಿ ನಡೆವ ಲಕ್ಷ್ಮೀನಿಧಿಯಂ ತಡೆದು ಸುಕೇತು ಗದಱಿ ನಿಲ್! ನಿಲ್! ಜವಹುರದ ಪೆರ್ವಾಗಿಲಂ ಪುಗುತರ್ಪಂತಿರೆ ಬರ್ಪಟಿಬೀರ ನೀನಾರವಂ ಎಂದು ಜರ್ವಿದಂ. ಅದರ್ಕೆ ಸೀತಾವರಜಂ ಆನಾರುವನಲ್ತು ಜವನೆರ್ಮೆವೋರಿಯವಂ. ನಿನ್ನ ನುಯ್ವೊಡೆಂದೆ ಬಂದನೆಂದಂ. ಆ ನುಡಿಗೆ ಸುಕೇತು ಕಿಸುಗಣ್ಣಿ ಗಜೆಗೊಂಡು ತನ್ನಾ ತೇರಿನೆಳೆಗೆ ಧಿಮ್ಮನೆ ಧುಮ್ಮಿಕ್ಕಿ ಮಾರಾಂತ ಬಲ್ಲಾಳ್ತನದ ಬಂಟನನೊತ್ತಿ ಅಂತಪ್ಪೊಡಿನಿತೊಂದು ಬಡಿಯನಾನುಂ ಕೊಂಡುಯ್ದು ಪೋಗೆಂದು ಮೋದುವನಿತೊಂದು ಬೇಗದಿಂ ಜನಕಜಂ ಕುಳ್ತು ಪಗೆಯ ಬಡಿಗೆ ತಪ್ಪಿ ತನ್ನ ಗಜೆಯಿಂದೆ ಮೊಟ ಕಾಲ ಕೀಲನಿಟ್ಟಂ. ಒಡನೆಯೆ ಸುಧ್ವಜನುಂ ಪಿಂಜರಿದರಿಯ ಕೈಯಂ ಕುಟ್ಟಿದಂ ಮತ್ತಮಿರ್ವರುಮೆೞ್ದು ಗದೆಗಳಂ ತಿರಿಪುತೆ ಜಡಿದುಂ ಬಡಿದುಂ ಪಿಡಿದುಂ ಪೊಣರ್ದರ್.

ಇಂತು ಮುಂದೆಸೆಯೊಳ್ ಪೊಣರುತಿರೆಯಿರೆ ಪಕ್ಕದೊಳ್ ಕಟ್ಕನ

ಪುಷ್ಕಲಂ ಕುದುರೆಗಳಂ ಚಪ್ಪರಿಸಿ ಪೊಂದೇರಂ ಮುಂತೆ ಸಡೆಯಿಸಿ ಮಲೆವ
ಜೋದರಂ ತತ್ತಱದಱಿದು ತಾನುಂ ತನ್ನನೊಲ್ದ ಬೀರಸಿರಿಯುಂ ಬೀದಿವರಿದು
ನುರ್ಗಿವರ್ಪನ್ನೆಗಂ ಚಿತ್ರಂ ಪೂೞಿಯ ಬೆಳ್ಗುದುರೆಯ ತನ್ನ ರನ್ನದೇರಂ ನೂಂಕಿ
ಕೋಲ ಹಂದರಮನೊಡ್ಡಿ—ಎಲೆಲೆ, ಇದೇನೆತ್ತಣ್ಗೆ ಪೋಗು. ನಿಲ್ ನಿಲ್ಲೆಂದು
ತಡೆದಂ. ಈನುಡಿಗೆ ಪಡಿನುಡಿಯೊಳೆ—ಕೇಳೆಲೆ! ಎಮ್ಮುತಶ್ವಮಿರ್ಪತ್ತಣ್ಗೆಮ್ಮ
ಪೋಕು ಕಣಾ! ಇಂತೆಮ್ಮ ಪೋಗಂ ಬರವಂ ಕೇಳ್ವ ಪೇಳ್ವ ನೀನಾರ್ಗಾ
ರೊಳ್ ಪೇೞೆಂದು ಕೋಲ ಮುಸುಂಕಂ ಪರಿಹರಿಸುತೆಂದಂ. ಚಿತ್ರನೆಂಗುಂ :—
ಕೇಳ್ವೊಡೆ ಕೇಳ್. ಈನೆಲದೊಳ್ ಸಂದ ಬೀರರ ಲೆಕ್ಕಕ್ಕೆ ದತ್ತಕನಿಷ್ಠಿಕನಾಗಿ
ಆಲವೊರ್ಡೆಯನಡಿಮಲರ ಬಂಡುಣಿಯೆಂಬೊಂದು ಬಿರುದಂ ತಾಳ್ದಿ ಬಾೞ್ವ
೧೦ ಚಕ್ರಾಂಕಪುರದರಸಂಗೆ ಸುಭುಜಂಗೆ ಪುತ್ರಂ ಚಿತ್ರಂ ಕಿಱಿಯಂ ನೀನೇಂ.
ಭಾರತಿಯೆಂಗುಂ—ಇದು ಚಿತ್ರಂ! ನೀಂ ಸುಬಾಹುಜಂ ಬಾಹುಜರನೆಮ್ಮಂ
ತಡೆವುದು. ಅಂತದಱಿಂ ನಿರ್ನೆರಂ ಕಡುಕೆಯ್ದು ಕಾಟ್ಕಿಡದೆ ಸೋದರರೊಂದು
ಬಗೆಯು ನಂಟಿಂ ಮಖಾಶ್ವಮಂ ಬಿಟ್ಟು ಕಟ್ಟಿಱಕದಿನೆಮ್ಮೊಳ್ ಪುದುವಾೞ್.
ಚಿತ್ರಾಖ್ಯನೆಂಗುಂ—ಎಲೆ ಅಣ್ಣಂಗಳಿರಾ! ಏ ಮಾತೊ! ಚಲದಿಂ ಬಲದಿಂ
ಕಟ್ಟಿದ ಕುದುರೆಯೆಂ ಮೊಸೆಯೆಡೆಯೊಳ್ ಕೊಟ್ಟು ಕೆಮ್ಮನೆ ಮಾಣ್ಬ ರಾಯರ್
ಪಂದೆಗಳಾಗರೆ! ಅಂತು ಬೇೞ್ಪ ರಾಯರ್ ಬೀರರೇಂ? ದಾನಮಂ ಪಾರ್ವ
ಪಾರ್ವರಾಗರೆ? ನಂಟುಂ ಬಂಟುಂ ನೆರಮಿರ್ಪಿನಂ ಗೆಲ್ವುದುಮೊಲ್ವುದುಂ
ನಿಮಗಕ್ಕುಂ. ಪುಷ್ಕಲನೆಂಗುಂ—ಬಲ್ಲರ್ ನಯಮಂ ಕೇಳರೆ! ಬಡ ರಾಯ
ಗುವರ! ನಿನಗೆಮ್ಮೊಳ್ ಕಾದುವೊಂದು ಬೆಸನಮೇಕೊ! ಪೆರ್ವೞಯಿನಾಗ
೨೦ ಳೆಮ್ಮಂ ತಾಗಿದ ನಿನ್ನಣ್ಣನೇನಾದನೆಂದು ಬಗೆಯದೆ ಕುದುರೆಯೊಂದು ದೂಸೆ
ಱಿಂ ಬಂದು ಸಾಯಲಿರ್ಪ ನೀಂ ಮರುಳರಾಗಿರೆ? ಚಿತ್ರನೆಂಗುಂ— ಮರುಳ
ರೆನಲ್ಕಾಂ ನಾಡನುೞಿದು ಕಾಡಂ ಪೊಕ್ಕು ತೊೞಲುತುಮಿರ್ದಪೆ? ಪುಷ್ಕಲಂ
ಕೆರಳ್ದೆಂಗುಂ—ತಾಂ ಪೊಡಸು ನುಡಿ ಬಿಱುಸು ಗಡ! ಅಯ್ಯನ ನನ್ನಿಗೆಂದು
ಕಾಡಂ ಪೊಕ್ಕ ಶ್ರೀರಾಮನಂ ಹಗರಣಂಗೆಯ್ವಾ! ನಿಮ್ಮವರಪ್ಪ ಕಾಲುರಿಚ
ರಾಯರ್ ಕ್ಷಾತ್ರಧರ್ಮಂಗಳನೆತ್ತಣಿನಱಿವರ್. ಚಿತ್ರನೆಂಗುಂ—ಕ್ಷಾತ್ರ
ಧರ್ಮಮನಱಿಯದಾದೊಂದು ಕೊಱತೆಯಿಸಱಿಂಗೆಟ್ಟೆಮ್ಮವರಾವ ಕಲಿಯುಂ
ಗನ್ನಗತಕದಿಂ ಮುನ್ನಂ ಕೊಂದರುಂಟು ಪೇೞಿ. ಪುಷ್ಕಲನೆಂಗುಂ—
ಕಟ್ಟಣಕದ ನುಡಿಗಾೞಿ! ಅಡಿಗಡಿಗೇಂ ಜಱುಚುವಯ್. ನಂಬಿದನಂ
ಪೊರೆವೊಂದು ಕತದಿಂ ಲೀಲೆಗೆಂತಂತು ವಾಲಿಯಂ ಶ್ರೀರಘುರಾಮಂ
೩೦ ಕೊಂದನಕ್ಕುಂ. ನಿಮ್ಮನ್ನರಪ್ಪ ಕ್ಷೀಣಬಲರ್ಗೆ ಇಂತೊಂದು ಗೆಯ್ಮೆ ನಾಣ್ಗೆಟ್ಟ

ಕೈಮುಸಕದೆಸಕಮಾಗಿ ಪರಿಣಮಿಸಿರ್ಕುಂ. ಚಿತ್ರನೆಂಗುಂ—ನಿರ್ನೆರಮೆಮ್ಮಂ
ಪಱಿವ ಬಲ್ಮೆಯಿದೇಂ ? ಎಮ್ಮನ್ನರಪ್ಪ ಕ್ಷೀಣಬಲರೊಳಾರಾನುಂ ಮತಿಗೆಟ್ಟು
ತಾಂ ತನ್ನ ಕೈವಿಡಿದ ಮಡದಿಯಂ ಪೆಱವರ್ಗೆ ಮಾಱುಗೊಟ್ಟರಂ ನೀಂ
ಕಂಡು ಕೇಳ್ದುಮುಂಟೆ ! ಪುಷ್ಕಲಂ ಕಿನಿಸಿನೆಂಗುಂ—ಎಲೆಲೆ ! ಬಾಯಂ
ಮುಚ್ಚುಮುಚ್ಚು ! ಅಲ್ಲದೊಡೀಗಳ್ ಯಥೇಷ್ಟಂ ಗಱಿಪುವ ನಿನ್ನ ಕುಡಿನಾ
ಲಗೆಯಂ ಸೌಳನೆ ಸೀಳ್ದು ಕುನ್ನಿಗಿಕ್ಕುವೆಂ. ಆನುಡಿಗೆ ಚಿತ್ರಂ ಕನಲ್ದು
ಅಂತಿರೆನ್ನನುಡಿಯಂ ಲಾಲಿಸಿ ಪೊಲೆಯಾದ ನಿನ್ನ ಕೊಡಂಕೆಗಳ ಬೆಚ್ಚಬೆಸುಗೆ
ಯಂ ಕಱಲ್ಚುವೆನೆಂದು ಮಾರ್ಗಣಂಗಳಂ ಜೋಡಿಸಿದಂ. ಇಂತುಮಾಗಲೊಡ
ಮೆಚ್ಚ ಮಾರ್ಗಣಂಗಳಂ ಮಾರ್ಗಣೆಗಳಿಂ ತುಂಡಿಸಿಯುಂ ಭ್ರಾಮಕಾಸ್ತ್ರಂಗ
ಳಂ ಸಂಧಿಸಿಯುಂ ಕಡುಕೆಯ್ವ ಪುಷ್ಕಲನೊಳ್ ಚಿತ್ರಂ ಚಿತ್ರತರಮಾಗೆ ೧೦
ಕೈಗೆಯ್ಯುತಿರ್ದಂ.

ಈ ಮಾಱ್ಕಯಿನಾಜಿಯೊಳೋರೊಂದೆಡೆಯೊಳಿಱಿತದಿಸುಗೆಯ ಪೊಯ್ಯ
ಬಡಿತದ ಕಡಿತದ ನುರ್ಗುಂ ನೂಂಕಿನ ಹಾಣಾಹಾಣಿಯ ಕೇಶಾಕೇಶಿಯ ಜುದ್ದಂ
ಪೆರ್ಚಿರೆಯಿರೆ, ಎತ್ತಂ ಕಡಿಕಂಡದ ರುಂಡದ ಮುಂಡದ ತಂಡಮಾಯ್ತು.
ಪೆಣನ ಬಣಂಬೆಯನಡರ್ದು ಬಿಸುನೆತ್ತರ ಕಾಲನಿಱಿದು ಕಡಿಯೆಲ್ಗಳೊಗ್ಗಂ
ಕುರ್ಕಿ ಪಂದೊಪಲಂ ಬಾರ್ದುಂ ಸಾರ್ದುಂ ನಲಿವ ಕಾಗೆಗೂಗೆಗಳುಂ, ದಂಡೆ
ಗರುಳನುಂಡು ಬಸಬಸನೆ ಸುರಿವ ಬಸೆಯ ಪೊಸಬಸೆಯಂ ಕುಡಿದೂಳ್ವ ಬಗುಳ್ವ
ನರಿನಾಯ್ಗಳ್ ಪಗಲುಮಿರುಳುಂ ಕಾವಲಿರ್ದುವು. ಇಂತಾಕೆವಾಳರ ಬೀರ
ಮಱ್ಕಾಡೆ, ಸೊರ್ಕುಂ ಸೋಱೆ, ಅಳವೊಳವಾಱೆ, ಚಲಂ ನೆಲೆಗಿಡೆ, ಬಲಂ
ಬಯಲ್ವೊಗೆ, ಕೊಂಚೆಗೋಂಟೆ ದೂಳಿಗೋಂಟೆಯಪ್ಪುದುಂ ; ಸುಭುಜಂ ಬೆನ್ನ ೨೦
ಮುಂದೆಸೆಯೊಳ್ ಕಟ್ಟುಬ್ಬಟೆಯ ಕಾದಾಳ್ಗಳ್ ಬೆರಸಂಕೆಯಿಂ ಬೀದಿವರಿದು
ನುರ್ಗಿವರ್ಪ ಸೌಮಿತ್ರಿಯಂ ಸೆಟ್ಟನೆ ಕಂಡು ಕಡೆಗಾಲದ ಸಿಡಿಲ ಕಡು
ಕಾಯ್ಪಿಂ ಮುಸಕಂಮುಸಗಿ ಜರ್ವಿ ಜಂಕಿಸಿ ಕಱುತ್ತೆಱಗಿ ಮುಂಬಱಿವ ಸೂಱೆ
ಗಾಱನಂ ಶಕ್ತ್ಯಾಯುಧದಿನಿಟ್ಟಂ. ಆವೇಳೆಯೊಳ್ ಶತ್ರುಹಂಗೆ ಬೆನ್ನೊಳೆ
ಹೊಂಚುವ ಸಂಚುವೆತ್ತಣುವಂ ತನ್ನೊಡೆಯನಂ ಪಿಂದುಱಿಪಿ ತಾಂ ಮುಂಜ
ರಿದು ರಥಿಕನನಿದಿರ್ಚಿ ಪೊಯ್ವ ಶಕ್ತಿಯಂ ತುಡುಕಿ ಪುಡಿಗುಟ್ಟಿದಿಂಬೞಿಯಂ
ಸುಬಾಹು ಹನೂಮಂತನೊಳ್ ನಿಂದು—ಕೆಲಸಾರೆಲೆ ಪಾಪ್ಮೊಗದ ಮುದು
ಗೋಡಗ ! ಬಯಲ್ಗೆ ಬಂದ ಕಿತ್ತಿಲಿಯನಱೆಯಟ್ಟುವ ದಿಟ್ಟದ ಗೊತ್ತಿನ
ಕೊತ್ತಿಗೆ ತಡೆಯ ಹಡಲಿಗೆಯೇಂ ಬಲ್ವೆಟ್ಟೆ ? ಪೋಣಂ ಮೈಗರೆವಕ್ಕಿನ ತಲೆ
ದಕ್ಕುಂತಲೆಯೇ ಇರ್ಕೆ ; ತಡೆದ ನಿನ್ನನಡಂಗಿದ ರಾಯನಂ ಸದೆದು ೩೦

ಸಮಂತು ದೆಸೆವಲಿಗುಡುವೊಂದು ಬೆಡಂಗಂ ನೀಂ ಮಿಱ್ಱುವಿಸರಮನೆಯ
ಮೊಗಸಾಲೆಯೊಳಿರ್ದು ಕಾಣಲಕ್ಕುಮೆನುತುಂ ಬಲ್ಗಣೆಗಳಿಂ ವಾಯುಜನಂ
ಸೋಯಿಸಿದಂ. ಆಗಳ್ ಕೋಲ ಪೊಯ್ಲು ನಣುವನಣುವಂ ಬಗೆದು ಸುಭು
ಜಂಗೆ ಕೊಲ್ವರ್ ನೀಮುಂಟು; ಸಾವರಾಮುಂಟು. ಹಯಮಂ ಬಿಡಿಸಿ
ಕೊಂಡುಯ್ವ ದೊರೆ ಬೇಱೆಯುಂಟು. ಅಕ್ಕುಬೆಕ್ಕುಗಳೊಂದು ಗೊಡವೆ
ಯೆಮಗೇಕೆ? ಆದೊಡಂ ಕಾಡ ಮುದುಮಂಕಡನೊಂದು ಕೈಚಳಕವಂ
ಪರಿಕಿಪುದೆಂದು ತನ್ನಡಿಯಿನೆರ್ದೆ*ಯನೊದೆದಂ. ಏನೆಂಬೆಂ ಆರಾಯಂ ವೀರ
ನೊಂದು ಪದಹತಿಗೆರ್ದೆ*ವಡಿ ಪವ್ವನೆ ಪಾಱಿದಂತಾಗೆ ಕಟ್ಟಾಯಸದಿಂ
ನೊಂದು ದಿಮ್ಮನೆ ತಿರೆಯೊಳ್ ಮುಚ್ಚೆಗೊಂಡಂ; ಪಡೆಯೊಳಗಲಬೆಯೆತ್ತಂ
೧೦ ಪೆರ್ಚಿದುದು. ಕಟ್ಟಿನ ಕೋಂಟೆಯಂ ತೆಗೆದು ನಾಯಕರುಂ ಜೋದರುಂ
ಮನಂ ನೊಂದು ರಾಯನೆಡೆಯೊಳ್ ನೆರೆದುಪಚರಿಸುತಿರ್ದರ್.

ಎನ್ನ ಜೀವಿತೇಶ್ವರೀ! ಇಂತಪ್ಪುದುಮಾಗಳ್ ವಾಯುಪುತ್ರನ ಕರಹತಿಗೆ
ಗಾಱಿಗೆಟ್ಟು ನಿದ್ದೆವೋದ ಸುಭುಜಂ ಕನಸಿನೊಳ್ ಶ್ರೀರಾಘವಂ ಮೈದೋಱಿ
ದುದಂ ಕಂಡನಪ್ಪುದುಂ ತನ್ನೊಳ್ ತಱಿಸಂದ ನಿಚ್ಚಟದ ಬಕುತಿಯಿಂ
ನೆನೆನೆನೆದು ಜಗದೊಡೆಯಂಗೆ ಗೆಲವಕ್ಕೆ! ಗೆಲವಕ್ಕೆ! ನಿಚ್ಚ ಸೊಗದ ಗಂಡು
ವರಿಜಂಗೆ ಗೆಲವಕ್ಕೆ! ಮಾಲಕುಮಿಯರಸಂಗೆ ಮೇಲಕ್ಕೆ! ಅಜನಯ್ಯಂಗೆ
ಮೇಲಕ್ಕೆ! ಅಜನ ಮುಮ್ಮಗಂಗೆ ಮೇಲಕ್ಕೆ! ನೀನೆ ಎನ್ನೊಡೆಯಂ ಎನ್ನ
ಕಾವ ದೇವಂ! ಎಲೆ ಮಾಯಗಾಱ! ಲೋಕದ ಮಂಕುಮಾಯೆಗೊಳಗಾಗಿ
ಇಂತೊಂದು ಪೊಲ್ಲದ ಕಜ್ಜಮನೊಡರ್ಚಿದೆಂ. ಅಂದು ಮುನಿಯೊಳ್ ನಿನ್ನಂ
೨೦ ಪೞಿದೆಂ. ನಿನ್ನಿದಿರೊಳೆನಗಾವ ಚಲಮಾವ ಬಿಂಕಮಾವುದರಸುತನಂ ನಿರ್ನೆರಂ
ಕಾದಿದೆಂ. ತಪ್ಪೊಪ್ಪುಗಳಂ ನಿನ್ನೊಳೊತ್ತೆಯಿೀವೆಂ. ಕಾಯಯ್—ಎನುತೆ
ಕನವರಿಸುತುಂ ಮತ್ತಂ ಚೇತರಿಸಿ ಅಱಿವುಗೊಂಡು ಮುಂತಿರ್ಪ ಸೋದರನಂ
ಕುವರನಂ ಮೊನೆಯಿಂ ಕೈದೆಗೆವುದೆಂದು ನಿಯಮಿಸಿ ಶತ್ರುಹಂಗಮಣುವಂಗಂ
ಕೈಮುಗಿದು ನಿಮ್ಮತ್ತಣಿನಾಂ ಪಾವನನಾದೆಂ. ರಾಘವನ ಜನ್ನಗುದುರೆಯ
ಬರವಿನದೊಂದು ನೆವದಿನೆನ್ನ ನಾಡುಂ ಬೀಡುಂ ಬಳಗಮುಂ ಮೇಲಾಯ್ತು.
ಶ್ರೀರಾಮನಂ ಕಂಡ ಮೇಲಾವುದೊ! ತಾಂ ಪೊಳ್ಳಕ್ಕುಂ. ರಾಮಭಕ್ತರ್ಗೇಂ
ಬಾರದೊ. ಇದೆ ಮಖತುರಂಗಮಮಿದೆ ಚತುರಂಗಸೇನೆ; ಇದೆ ಭಂಡಾರಮಿದೆ
ರಾಜ್ಯಂ; ಪಲವಿನೇನಿದೆ ಸರ್ವಸ್ವಂ. ನಿಮ್ಮಡಿಗಳೊಲ್ಮೆಯನೊಂದನೆ ಬೇಡುವೆ
ನೆಂದು ಮತ್ತಮಡಿಗೆಱಗಿದಂ. ಇಂತು ಮಣಿವ ಬೇಡುವ ರಾಯನಂ
೩೦ ಕರುಣಿಸಿ ತನ್ನ ಧರ್ಮಾಸನದೊಳ್ ಕುಳ್ಳಿರಿಸಿ ಸುಭುಜನೊಳ್—ನೀಂ ಮಾನ್ಯಂ,

ನಿನ್ನನನುಗ್ರಹಿಸಲ್ಕೆಂದೆ ಶ್ರೀರಾಮಚಂದ್ರಮನೆಮ್ಮೊಳ್ ನಿಮ್ಮೊಳ್ ಇಂತು ಕಾಳೆಗಮನೊಡ್ಡಿದನಕ್ಕುಂ—ಎಂದು ಸಂತಮಿಟ್ಟು ಲಾಲಿಸಿ ಪಾಲಿಸಿ ಕಪ್ಪಮಂ ಕಾಣ್ಕೆಯುಂ ಹಯಮುಮಂ ಕೊಂಡು ಪೋಖಮಟ್ಟು, ಸುಭುಜನುಂ ತನ್ನ ಚೊಚ್ಚಲ ಮಗಂಗೆ ಪಟ್ಟಮಂ ಕಟ್ಟಿ ತಾನುಂ ಪಡೆವೆರಸು ಶತ್ರುಹಂಗೆ ಬೆಂಬಲನಾದಂ.

ಎಂಬಲ್ಲಿಗೆ ಶ್ರೀರಾಮಾಶ್ವಮೇಧದೊಳ್
ಸುಬಾಹುಯುದ್ಧಮೆಂಬ ಏಕಾದಶಾಶ್ವಾಸಂ ಸಂಪೂರ್ಣಂ.

---

## ದ್ವಾದಶಾಶ್ವಾಸಂ

## ತೇಜಃಪುರವರ್ಣನಂ

ಮುದ್ದಣಂ—ಓ ಎನ್ನತ್ತೆಯ ಮಗಳೆ! ಮುತ್ತಿನ ಸೆಂಡೆ! ೧೦

ಮನೋರಮೆ—(ಪುಸಿಯ ನಸುಮುನಿಸಿಂ) ಒಱಿವಱಿದೆ ಬಣ್ಣಿಸಿ ಬಣ್ಣಿಸಿ ಕರೆಕರೆದು ಕರಕರಿಸದಿರ್; ಎನಗೆ ತಲೆ ನೋವುದು.

ಮುದ್ದ—ಅಂತದೇತಱಿನರಸಿ?

ಮನೋ—ಅಡಿಮುಡಿಯಿಲ್ಲದ ನಿನ್ನ ಕತೆಗೆ.

ಮುದ್ದ—ಆಃ! ಎನ್ನ ಬಿತ್ತರದ ಬಣ್ಣನೆಯ ಸಲ್ಗತೆಯೊಳೇನಡಿಮುಡಿಯ ಕೊಱತೆ? ಸವಿಸ್ತರಂ ನಿರವಿಸಿದೆನಲ್ತೆ.

ಮನೋ—ಎಂತೆಂತೊ ತೊಡಂಕಿ ಬೆದಂಕಿ ಪೇೞ್ದೊಡಾಯ್ತೆ? ನಿಡುಗತೆಯ ನಿಱಿಗೆಯ ಕೂಟಂ ಕೇಳ್ವರ್ಗೆ ಮನಕ್ಕೆ ಬಾರದೊಡಕ್ಕುಮೆ?

ಮುದ್ದ—ಇರಿರ್! ಆಂ ಬಿತ್ತರಿಸಿದ ಸಲ್ಗತೆಯೊಳ್ ನಿಱಿಗೆಯ ಕೂಟಂ ಮೀಟೆಸಿಸದುಂಟೆ? ನೀನೆ ಪೇೞ್. ೨೦

ಮನೋ—ಸುಭುಜಭೂಭುಜಂ ತನ್ನಂ ಮುನ್ನಮೊರ್ವ ಮುನಿ ಪೊಯ್ದನೊ ಬಯ್ದನೊ ಎಂದು ಶತ್ರುಹನೊಳ್ ಗೋಣಗಿದನಲ್ತೆ.

ಮುದ್ದ—ಮುನಿ ಪೊಯ್ದನೆಂದಲ್ತು, ಬಯ್ದನೆಂದೆ ಪೇೞ್ದನಕ್ಕುಂ.

ಮನೋ—ಏಕೊ ಪೇೞನೆ?

ಮುದ್ದ—ಆನಱಿವೆನೆ, ಕತೆಯೊಳಿರ್ಕುಂ.

ಮನೋ—ಅದನೆ ನಿರವಿಸು.

ಮುದ್ದ—ಓ! ಓ! ಇನಿತೊಂದು ವಿಷಯಮಂ ಪೇೞದುದಱಿಂ ಬೇಸಱಾಯ್ತೆ. ಈಗಳೆ ಬಿತ್ತರಿಪೆಂ. ಈ ಧರಣೀಮಂಡಲ. . . .

ಮನೋ—ಬಣ್ಣನೆಯ ಧರಣೀಮಂಡಲಗಳೇಕೆ? ಒಂದುೞಿಯದಂತು ತಿರುಳನೆ ಕೂಡಿ ಪೇೞ್ವೈ.

ಮುದ್ದ—ಆಯ್ತಾಯ್ತು. ಮುನ್ನಂ ಮುತ್ತ ದಿನಂಗಳೊಳೊರ್ವ್ವ ಸುಭುಜ ರಾಜಂ ಆದಿದೈವದಿರವನಱಿವೊಂದು ಬಯಕೆಯ ಬೆಮೆಯಿಂ ಪೋಱಮಟ್ಟು ಮುನಿಗಳೋರೊಂದೆಡೆಯ ಪುಣ್ಯಾಶ್ರಮಂಗಳೊಳ್ ತೊೞತೊೞಲ್ದಂ ಗಡ! ಅಂತು ಪೋಪೋಗುತುಂ ಮುಂತಿರ್ಪ ತಪೋವನದೊಳಸಿತಾಂಗನೆಂಬೊರ್ವನಂ ತವಸಿಯಂ—ದೇವರೊಳ್ ಪಿರಿಯನಾವನೆಂದು ಬೆಸಗೊಂಡಂ. ಆಗಳ್ ಮುನಿಪಂ—ಶ್ರೀರಾಮನೆ ಜಗದ ದೇವರ ಗಂಡನೆಂದು ಕುಱುಪಿಟ್ಟು ಪೇೞ್ವುದುಂ; ರಾಯಂ—ಮಾನಸರೆಂತಂತು ಬಸಿಱೊಳ್ ಪುಟ್ಟಿಯುಂ, ಬವಣಿಗರೆಂತಂತು ಕಾಡಂ ತೊೞಲ್ದುಂ, ಪಾಪಿಗಳೆಂತಂತು ಬಲ್ಬನ್ನದೊಳ್ ತೊಡರ್ದುಂ, ಬಾೞ್ವ ರಾಮಂ ದೇವನೆ! ಚಿಃ! ಬಿಡುಬಿಡೀ ನಿನ್ನ ಗನ್ನಗತಕದ ನುಡಿಯಂ. ಅಂತು ರಾಮನನೊಲ್ವೊಡೆ ನಿನ್ನಂತಿರಾಂ ಗಾಂಪನೆ? ಎಂದು ರಾಮನಂ ಮೇಣ್ ಮುನಿಯುಂ ತೆಗೞ್ದಂ. ಆನುಡಿಗೆ ಕರಂ ಕನಲ್ದು ಮುನಿಪಂ ರಾಮಭಕ್ತಿಯೊಳ್ ಬೆಂಗೊಟ್ಟೆರೆಂದು ಶಪಿಸಲೊಡಂ ಪೂರ್ವಸಂಚಿತದೊಂದಱ ವಿನೆಚ್ಚಱಿಂ ತನ್ನೊಂದು ಕುತ್ತಮಂ ಬಗೆದು ಮುನಿಗೆ ಕಾಲ್ಗೆಱಗಿ ತಪ್ಪಂ ಕ್ಷಮಿಸಿ ಕಾಪುದೆಂದು ಬೇಡಿದಂ. ಆಗಳಸಿತಾಂಗಂ ರಾಯನಂ ಪಾಲಿಪೊಂದು ಭಾವದಿಂ ಎಂದಿಂಗೆ ರಾಮಭಕ್ತಂ ನಿನ್ನಂ ಕಾಲಿನೊದೆವನಂದಿಂಗೆ ನಿನ್ನೊಳ್ ಭಕ್ತಿಯೊಗೆತರ್ಕೆ! ಎಂದು ತಿಳಿಪಿ ಕಳಿಪಿದಂ. ಇಂತೆಂದೆ ಸುಬಾಹು ಮುನಿಯ ಬಯ್ಗುಳನಾಗಳ್ ನೆನೆದು ಶತ್ರುಹಂಗೆ ತನ್ನಿರವಂ ಕೇಳಿಸಿದನಕ್ಕುಂ.

ಮನೋ—ಈಗಳಱಿತೆಂ. ಮುಂತಣ ಕತೆಯನಱಿಯೆ ಪೇೞ್.

ಮುದ್ದ—ಎನ್ನ ಬಿತ್ತರದ ಚಿತ್ತರದ ಬೊಂಬೆ! ರಂಬೆ! ಈ ಪರಿಯೊಳ್ ಸುಮಿತ್ರಾಪುತ್ರಂ ಚಿತ್ರಚಿತ್ರಾಂಗದರಂ ಮಿತ್ರಭಾವದೊಳೊಪ್ಪುಗೊಂಡುಂ, ಸುಭುಜಸುಧ್ವಜರೊಳೊಡಂಬಟ್ಟುಂ, ದಮನನಂ ಸಂತಮಿಟ್ಟುಂ ಮುಂಬಟ್ಟು ಪಡೆವೆರಸು ಹಯದ ಬೆನ್ನೊಳೆ ನಡೆಯುತಿರೆಯಿರೆ;—

ಬಟ್ಟೆಯೊಳ್ ಕರ್ನೆಲದೆ ಕೊರ್ವಿ ಬೆಳೆದ ಕರ್ವಿನ ತನಿರಸಕ್ಕೆ ಪೆರ್ಮರನ ಪಾಱುಗೊಂಬಿನೊಳ್ ಪೊಡೆಯ ತೆಳ್ಪೊೞಲೊಳೊತ್ತುಗಟ್ಟಿದ ಕಿಱುನೊೞನ ಸಪಿಜೇನ ಸಜ್ಜಿಸಿಂಬನಿಯುನೆಱೆದು ಪಾಲ್ಗೋಡಿನ ಜೋಲ್ಗೆಚ್ಚಲ ತೋರ

ಮೊಲೆಯ ಎಳಗಂದಿ ಕರ್ದುಱುವಿನ ತೊಱೆದ ತಂಬಾಲಂ ಬೆರೆದು ಹನಿಸಿ
ಕೊನೆನಾಲಗೆಯೊಸಱೆ ಬಾಯ್ಗಿನಿದಿನಿದಾಗೆ ಸವಿವ ಸವಿಯುಂ ಲೋಗರಱಿವಂತು
ಪೆಱತೊಂದು ಮಾಡ್ಕೆಯಿಂ ಮೂಗಿನುಣ್ಬಂತು ತುಂಬುವಂ ಪವನಸೆನೆ---ಬಿಸಿಲ
ಜಳಕ್ಕೆ ಬಾಡದೆ ಬೆಳ್ದಿಂಗಳ ಹಿವಕ್ಕೆಕೋಡದೆ ಪಗಲೆನ್ನದೆ ಮಬ್ಬೆನ್ನದಾಗಳಾ
ಗಳುಳ್ಳಲರ್ದ ಕೊಳದ ಬನದ ಜಿಱಿಮುಗುೞ ತನಿಗಂಪಂ, ಪಾವಡರದೆ ಪಕ್ಕಿ
ಸೋಂಕದೆ ತುಕ್ಕುಡಿದ ಸೆಕ್ಕೆಯೊಡೆದ ಚನ್ದಸದ್ರುಮಂಗಳ ನಱುಗಂಪಿನೊಳ್
ತೆತ್ತಿಸಿ, ಪಸುರ್ಮಾಯದ ತಣ್ಪಾಱದ ಮೆಲ್ಪುಗುಂದದ ಮರುಗದ ದವನದ
ಪೊಸಗಂಪಂ ಪತ್ತಿಸಿ, ಪೋಪ ಬರ್ಪ ಬಟ್ಟೆಗರ ಮೂಗಿನಂಡೆಯೊಳ್ ತುಱುಕುವ
ಬನಗಾಳಿಯುಂ ಬೞಿಗೊಂಡು ಕಡಲಿಂ ಬಾಂಬರಂ ನೆಗೆದ ಕರ್ಮುಗಿಲೊಡ್ಡಿಂ
ಪಗಿಲ್ತು ಕೊಳನ ನೀರುಣಲೆಂದು ತೇಂಕಿ ವರ್ಪ ಕಿಱುಮುಗಿಲೆಂಬಂತಿರೆ ನೆರೆ ೧೦
ದುರ್ಜಿ ಪರ್ಬಿ ಪಜ್ಜೆವಿಡಿದೀಸಿ ಪರಿವೆಣ್ಣೊಡೆದ ನೇಱಿಲ್ ಪಣ್ಗೆ ಬಣ್ಣಂಬಳಿದ
ಕರ್ಮಣಿಗೆ ತಣ್ಣೀರೊಳದ್ದಿದ ತನಿಗೆಂಡಕ್ಕೆ ದೊರೆವರ್ಪ ಬವರಿಗಳ ಗಾವರ
ಕ್ಕೆೞ್ಚತ್ತು ಗೂಡನುೞಿದು ಕೋಡುಗೊಂಬನಡರ್ದು ಕೂಡಿ ಪಾಡಿ ಕಾಡ
ಪಣ್ಗಳಂ ನಾಡ ನೆಲ್ಗಳನಾಯ್ದು ಬೇಡಿ ಕಾಡುವ ಪಿಳ್ಳೆಗಳ್ಗೆ ರೂಡಿಸಿದ
ಮಮತೆಯಿನೂಡಿ ನಲಿವ ಪಕ್ಕಿಗಳ್ಗೆ ಬೀಯದ ಪಣ್ಣಂ ಮಾಗದ ಮಿಡಿಯುಂ
ಬೀಯುಮಾಗದ ತಳಿರಂ ಆವಗಮೊದವಿಪ ಮರಂಗಳಿಂ ಬಳಸಿ ನಿಚ್ಚಮೊಸರ್ವ
ಪೆರ್ಚುಗೆಯುಬ್ಬರದಿಂ ಕರೆಗಣ್ಮಿ ಪರಿದು ಬನಸಿರಿಯ ಜೀವದ ಗೊತ್ತಿ
ನಂತೊಪ್ಪುವ ನೀರ್ಗೊಳಂಗಳಿಂ ಮನೋಜ್ಞಮಾದಾರವೆಯ ಮುಂದೆಸೆಯೊಳ್
ದಿನದಿನಕ್ಕೆ ತನಗೆ ಬಿರಯಿಮಿಗಂಗಳ ಬೇಂಟೆಗೆ ಬೇಱೆವೇಱೆವಿಲ್ಗಳ್ ದೊರೆ
ಕೊಳ್ವಂತು ನಸೆಗಾಱನೊಸೆದು ಬೆಳೆಯಿಸಿದನೆನಲ್ಕೆಸೆವ ಕಬ್ಬಿನ ತೋಂಟದ ೨೦
ಗೊಂಟಿನೊಳ್ ಬಿತ್ತೊಂದರ್ಕೆ ಐವತ್ತಱಿಂ ಪೊಲಿವರ್ಪ ಕದಿರ ಬೆಳೆಯ
ತನ್ನೊಂದು ಪೆರ್ಮೆಯಿಂ ಬಣ್ಣವೆರ್ಚಿ ನಳನಳಿಸಿ ಬೆಳೆದ ಕೆಯ್ವೊಲಮನಣಕಿಸಿ
ತಲೆವಾಗಿಸಿ ತೂಗಿಸಿ ನೂಱುಮಡಿ ಮಿಗುವ ಬಿತ್ತಂ ಪೊತ್ತು ನಿಗುರ್ದು
ನಿಂದ ರಾಗಿವೊಲದೊತ್ತಿನೊಳ್ ಕೆಸಱೊಳಾಗದ ಬಸಿಱೊಳ್ ಪುಟ್ಟದಾಣಿ
ಮುತ್ತುಗಳಿಂ ಜಿಱಿದು ದೂವೆಯ ಕುಸುಱಿಂ ಪುದಿದು ಬಣ್ಣಗುಂದದಂತು
ಬೆಳ್ವಟ್ಟೆಯಂ ಪೊದೆದೊಡಲಿಚಂ ತನ್ನ ಬೆದೆಗಾರ್ತಿಯ ಚೂಳಿಯ ಸಿಂಗರಕ್ಕೆಂದು
ಸಮೆದು ಬೈತಿಟ್ಟ ಕುಂದಣದ ಗೊಂಡೆಯೆನೆ ತಾವರೆಯ ಕೋಶದಂತಿರೆಸೆವ
ಜೋಳದ ಪಾಟಿಯುಂ ಸಾಲ್ಗೊಂಡು ಮೊಳೆತ ಬೆಳ್ಸುೞಿವಿಟ್ಟ ಕೊನೆಯಿಕ್ಕಿದ
ಕಾತ ಪಣ್ತು ಪೊಂಬಾೞೆಯ ಚೆಂಬಾೞೆಯ ರಂಗುಬಾೞೆಯ ತೋಂಟದಿಸೊಳ
ಗೊಳಗೆ ಬಾಂಬಟ್ಟೆಗರ್ ಪೊಱಲ ಸೊಬಗಂ ನಿರುಕಿಸಲ್ಕೆಂದು ಆಗಳಾಗಳೞ ೩೦

ತರ್ಪೊಡೆಂದು ಕಟ್ಟಿದೊಂದು ಸರಣಿಯೆನೆ ಮುಗಿಲೊಳೊಂದಿದ ನಾಡ
ಪೊಱಗೋಂಟೆಯುಗೞ್ ಸೊಗಯಿಸಿದತ್ತು.

ಇಂತು ಪೊೞಲ್ಗೆ ಪೊಱಮೆಯ್ಯ ಸುಲ್ಲ ಸನ್ನಣದಂತೆ ಕೆಂಕಮಾಗೆಸೆವ
ಜಾದುಗಲ್ಲ ನಿಡುಗೋಂಟೆಯಿಂದೊಳಗೆ ಚೆಂಗದಿರನ ತೇರ ಸೂಟಿಗೆತ್ತಂ
ಮಿಳಿರ್ದುಂ ಮುಂಚಿ ಪರಿವೇಱುಂಕುದುರೆಗಳ ಖುರಪುಟದ ಪೊಯ್ಲಿಂಗಿರ
ದಡರ್ದು ಮುಸುಂಕುವ ಕೆಂದೂಳಂ ಬೀಸಿ ಜಾಡಿಸುತುಮೋರಣಂಪಿಡಿದ
ಪೞಯಿಗೆಗಳಿಂ, ಮನೋಜ್ಞಮಾಗಿ ನೆಱೆವೆಱೆಯಿರುಳೊಳ್ ತಾಂ ತಮಗಿೞ
ತಂದು ಬಿನದದಿಂ ವಿಹರಿಪಚ್ಚರಿಯರ ನೆಲೆಯು ಸಿಂಗರದ ಮಾಟದ ಬೆಳ್ಳಿ
ವೆಟ್ಟುಗಳ ತಪ್ಪಲ್ಗಳೆಂಬಂತಿರೆ ಪಗಲ್ಗೆ ಪಾಲಿನೆಱೆದಂತುಮಿರುಳ್ಗೆ ಜೊನ್ನದಿಂ
೧೦ ಸಮೆದಂತುಂ ತೋರ್ಪ ಸೌಧಂಗಳಿಂ, ಮತ್ತಂ ಪೊತ್ತಿದ ಹೋಮದೆತ್ತಿದ
ಧೂಪದ ಪೊತ್ತಿದ ದೀಪದ ಸುತ್ತಿದ ಕರ್ಪೊಗೆ ಮೇಲ್ನೆಗೆಯುತೆ ಬಿತ್ತರದಿಂ
ಮುಗಿಲೊಡ್ಡನೊಡ್ಡೆ ಮರಕತ ಕಳಶದ ತನಿವೆಳಗು ಮೇಘಮಂಡಲದೊಳ್
ಬೆರೆಯುತೆ ಬಳ್ಳಿಮಿಂಚನಾಗಿಸೆ ಗೋಹುರಂಗಳ ಮಿಸುನಿಯ ನೆಲೆಮಾಡದ
ಚೆಂಬೆಳಗು ಬಾಂದಳದೊಳ್ ಪಳಂಚುತಿಂದಿರವಿಲ್ಲನೊಡರ್ಚೆ, ಆಗಳಾಗಳ್
ಮೊೞಗುವ ಭೇರಿಯೊನ್ದು ಬಿಱುಸರಂ ಕಾರ ಗುಡುಗಂ ಪುಟ್ಟಿಸೆ ತುಂಬುಗೊಳ
ನೊಳಿಂಬುಗೊಂಡ ಮುದ್ದಂಚೆಗಳ್ಗೆ ಜಲಕ್ರೀಡೆಗೆ ಮನಮಂ ನೀಟ್ಕರಿಸುವ
ದೇಗುಲಂಗಳಿಂ, ಮತ್ತಮೋದನೋದುವ ಶಾಸ್ತ್ರಮಂ ಕಲ್ವ ಪುರಾಣಮಂ
ಕೇಳ್ವ ಇತಿಹಾಸಂಗಳನಱಿವ ವೇದಾಂತಮಂ ಬಗೆದು ಭಾವಿಸುವ ಕೀರ್ತಿಸುವ
ವಿಪ್ರರ ಅಗ್ರಹಾರಂಗಳಿಂ, ಮತ್ತಂ ಕ್ಷತ್ರಿಯರರಮನೆಗಳಿಂ ಮತ್ತಂ ಪರದರಂಗ
೨೦ ಡಿಗಳಿಂ, ಮತ್ತಂ ಕೀೞರ ಗುಡಿಗಳಿಂ—ಊರು ಚೆಲ್ವಾಗೆ ಕಣ್ಗಂ ಮನಕಂ
ಬಂದುದು.

ಇಂತಿಂತು ನೆಱೆ ಮೆಱೆದೊಪ್ಪುವ ತುಂಬಿದೂರ ಕೇರಿಗಳೊಳೋರೊಂದೆಡೆ
ಯೊಳ್—ಅಂದು ಮೀಂಬೞಯಿಗೆಯಂ ಜೋಗದ ಜೋಹದ ಸಾಂತನನಿದಿ
ರ್ಚುವ ಪದದೊಳ್ ತನ್ನೈದುಂ ಕಣೆ ಕಾದಿಗೆಲ್ವ ಕೈಗುಣಕ್ಕೆ ನೆರಂ ಬಾರದೆಂದು
ತಱಿಸಂದು ಪಲವೆಡೆಯಿಂ ತಂದಂದಮಾಗೆ ಕೂಡಿಟ್ಟ ಕೋಲ ಮೂಡಿಗೆಯ
ನೂಱಾಱುವಗೆಯ ಪೂಗಳಿಂಬಾಗೆ ಎತ್ತಿಪಿಡಿದಂಗೈಯ ನಸುಗೆಂಪಿಂ
ಕಡೆಗಣ್ಣ ಕುಡುನೋಟದರೆಗರ್ಪಿಂ ಮೊಗದ ಬೆಳ್ನಗೆಯಚ್ಚವೆಳ್ಪಿಂದೊಪ್ಪಂ
ಬೂಸಿ ಬಣ್ಣಂಬಳಿದಂತುಂಟಾಗಿಸಿ ಬಿಡುಸರದ ಪೊಸಗಂಪಿಂಗವ್ವಳಿಸಿ
ಮುಸುಱಿ ಮೊರೆವ ದುಱುದುಂಬಿ ದುಂಬಿಗಳ ಕಾಟಕ್ಕಳ್ಕಿಬಳ್ಕಿ ನೋಟದ
೩೦ ಬೇಟದ ಬೆಡಂಗನೊಲ್ದು ತೋಱಿ ಪಣಕಂ ಖುಣಕಂ ಮಾಱುವ ಮಾಲೆ

ಗಾರ್ತಿಯರ ಪೂವಿನಂಗಡಿಯಿಂ ; ಮತ್ತಂ ತಲೆಯೊಳೆಯೆ ಮುಂಗುರುಳುಯ್ಯ
ಲಾಡೆ ನಡುನೋಟದ ನಿಮಿರ್ದ ಕಂಗಳೆನಸುಂ ಚಳಿಸೆ ಮೊಗಂ ಬೆಮರಿಡೆ
ಬಲ್ಮೊಲೆಗಳ್ ಕದಕ್ಕದಿಸೆ ಮುತ್ತಿನಗೊಂಡೆವಾವುಲಿ ತೊಂಗಲ್ದೊಂಗೆ
ಕೆಂಬರಲೋಲೆ ಮಿಱುಗೆ ಬಳೆ ಘಲ್ ಘಲ್ಲೆನುತುಲಿಯೆ ಅಸುವೆಯೊಳೊತ್ತೊತ್ತಿ
ಪನಿನೀರನೆಱೆದೆಱೆದು ಪಚ್ಚೆಗಪ್ಪುರದ ಪುಡಿಯಂ ಸುರಿಸುರಿದು ಸುಯ್ಯೆಲರ
ನಱುಗಂಪನೊರೆದೊರೆದು ಬಾಪಸ್ನವಿಡಿಯಂ ತೀವ ಘಟ್ಟಿವಳ್ತಿಯರ ಗಂದಿಗ
ವಸರದಿಂ ; ಮತ್ತಂ ಬಿಡುಮುತ್ತಿನ ಪಚ್ಚೆವರಲ ಕೆಂಬರಲ ಕರ್ಮಣಿಗಲ್ಲ ಬಜ್ಜರ
ಗಟ್ಟಿಯ ಚೆಂಬವಳದ ಸರದ ಪರಪಿದ ಪೊಂದಟ್ಟಗಳಿಂ ರಂಜಿಸಿ ಬೆಲೆವಣಿ
ಗಾಗರಮೆನೆ ತೋರ್ಪ ರಸ್ನವರದರಂಗಡಿಯಿಂ ; ಮತ್ತಂ ಲೆಕ್ಕಿಗರ ಲೆಕ್ಕದಂತು
ಸೊನ್ನೆಯಿಂ ಕಣ್ಗೊಪ್ಪಿಯುಂ, ಗಗನದಂತು ಬೆಳ್ಳಿಯಿಂ ಮೆಱೆದುಂ, ೧೦
ಕೆಯ್ವೊಲದಂತು ಕರ್ಪೊನ್ನಿಂ ಸೊಗಯಿಸಿಯುಂ, ಪಲ್ಲವಾಧರೆಯ ಕೆಂದುಟಿಯ
ರಂಗಿನಂತು ಕಿಸುರಿಂ ರಂಜಿಸಿಯುಂ, ಬೊಂದಿಯಂತು ಸೀಸದಿನೊಂದಿಯುಂ,
ದಿಟ್ಟೆಯ ಬಟ್ಟೆಗೈತರ್ಪ ಲೋಹಕಾರರ ಮನೆಯಿಂ ; ಮತ್ತಂ ಹಚ್ಚಡದ ಪೂವಿ
ನಂಗಿಯ ಪಟ್ಟುಡೆಯ ಕಾಂಗಿನ ರಂಗಿನ ಚೆಂದಿರಗಾವಿಯ ಮಿಸುನಿಗಚ್ಚಿನ ಬಣ್ಣ
ಸೀರೆಯ ದೂಸಿಗವರದರ ಮೞಿಗೆಯಿಂ ; ಮತ್ತಂ ತಿಸುಳಿಯಂತೆ ಮುಕ್ಕಣ್ಣನುಂ
ತೊವಲ್ವೊದೆಯನುಂ ಮುಗಿಲಂತೆ ನೀರೊಡಲನುಮೆನಿಪ ತೇಂಗಾಯಿಂ, ಮತ್ತಂ
ಹರನೆಂತಂತು ಜಟಾಧರನುಂ ಹರಿಯೆಂತಂತು ಪೀತಾಂಬರಧಾರಿಯುಮಾಗಿರ್ಪ
ನೀರುಳ್ಳಿಯಿಂ, ಮತ್ತಂ ಜೀರಿಗೆಯಿಂ, ಕೊತ್ತುಂಬರಿಯಿಂ, ಮೆೞಸಿಂ, ಗುಳದಿಂ
ಶರ್ಕರೆಯಿಂ ಚೆಲ್ವಾದ ಕೇರಿಯಂಗಡಿಯಿಂ ; ಮತ್ತುಮಿರ್ಕುೞಿಯ ತಂಡಸದ
ಕರ್ತರಿಯ ಸುತ್ತಿಗೆಯ ಕೈವಾರದ ಕಂಬಚ್ಚಿನ ಕೊೞವೆಯಡಗಲ್ಲ ಅರನ ೨೦
ಮುಟ್ಟೊಟ್ಟಯಿಸಿರೆ ಕೊಟ್ಟಂ ಕೆಟ್ಟನೆಂಬೊಂದು ಸನ್ನೆಯ ಸಬುದಮೊಗೆವಂತಿರೆ
ಬಡಿವ ಸೊನ್ನಗಾಱರ ಸಾಲೆಯಿಂ ; ಮತ್ತಂ ಕೊಡಲಿಯಿಂ ಕಡಿವ ಉೞಿಯಿಂ
ಕೀಸುವ ಕತ್ತಿಯಿಂ ಕೆತ್ತುವಾಣಿಯಿಂ ಬೆಟ್ಟುವ ಕರಗಸದಿಂ ಕೊಱೆವ ಬಡಗಿ
ಯರೆಡೆಯಿಂ ; ಮತ್ತಂ ಕಾಯಿಸುವ ಕರಗಿಸುವ ಎಱೆವ ತಿದಿಯೊತ್ತುವ
ಉರ್ದುವ ನೀರ್ಗುಡುವ ಬಡಿವ ಬಿಸುವ ಮಸೆವ ಸಣ್ಣಿಸುವ ನುಣ್ಣಿಸುವ
ಸಾಣೆವಿಡಿವ ಕಮ್ಮಱರ ಮುಂಗುಡಿಯಿಂ ; ಪುರಂ ಕಣ್ಗಿಂಬಾದುದು.

ಇಂತು ಸೊಬಗಿನ ಬೀಡಿನಂತೆ ಸಿಂಗರದ ನಾಡಿನಂತೆ ಸೊಗದ ನೆಲೆಯಂತೆ
ಸೊಗಸಿನಾಗರದಂತೆ ಮಂಗಳದ ಮನೆಯಂತೆ ಸಲೆ ಸಂದು ನಾಡ ಪೆಣ್ಗಳ
ಚೆಂದಳಿರಡಿಯ ಮೆಲ್ವೊಗರಿಂ ತೊಳಗಿ ಬೆಳಗುವ ಕೇರಿಯ ಬೀದಿಗಳಿಂ ;
ಪೊೞಲ ಸೊಬಗೆಯರ ಕಳೆವೆರ್ಚಿದ ನಗೆಮೊಗದ ಕಾಂತಿಯಿಂ ಬೆಳತರ್ಪ ೩೦

ಮಿಱುಗುವ ಹರ್ಮ್ಯಂಗಳಿಂ ಪುರದ ಪುರಂಧ್ರಿಯರ ಪೊಂಬಚ್ಚದೊಚ್ಚತಂ ತಟತಟಿಪ ಹಬೆಯ ಪರ್ಬುಗೆಯಿಂ ಚಳಚಳಿಸುವ ನಲ್ನೆಲೆಯಿಂ—ರಾಜಿಪ ನಗರಮಂ ಕಣ್ದಣಿಯೆ ಕಂಡು ಶ್ರುತಕೀರ್ತಿಮನೋಹರಂ ನಿಜಸಚಿವನೊಳಿಂತಿದಾವ ನಾಡೆಂದು ಕೇಳ್ದೊಡೆ;—ಕೂರಾಳ್ಗಳ ಕಟ್ಟೊಡೆಯ! ಇಂತಿದು ಕಣಾ! ಗೋಪೂಜಾಫಲದತ್ತಣಿಂ ಸಂತಾನಮಂ ಪಡೆದ ಋತಂಭರರಾಜನಾಳ್ವ ತೇಜಃಪುರಮೆಂದು ಕೇಳಿಸಿದಂ.

ಆನುಡಿಗೆ ಸೌಮಿತ್ರಿ ಬಿಸವಂದಂಗೊಂಡು—ಎಂತು ಆರಾಯಂ ಗೋಸೇವೆಯತ್ತಣಿಂ ಮಗನಂ ಪಡೆದಂ? ಧೇನುಮಾಹಾತ್ಮ್ಯಯನಿತೊಂದು ದೊಡ್ಡಿತೇಂ? ನೀಂ ಬಲ್ಲಂತು ಪೇಳೆಂಬುದುಮಿಂತು ವಚಿಸಿದಂ ಸಚಿವಂ ಅದೆಂತೆನೆ:—

೧೦ ಅಯ್ಯ! ಮುನ್ನಮೀನಾಡೊಡೆಯಂ ಋತಂಭರವೆಸರಿಂ ಪೆಸರ್ವೆತ್ತ ಭೂಭುಜನುಂಟು. ಬೋಽಟೆಯುರೋಜನ ಜಾಣ್ಮೆ, ಚುಕ್ಕಿಯಱಿವು, ಜವನ ಜರ್ವು, ಜಕ್ಕರರಸನ್ಸೈಸಿರಿ ತನ್ನೊಳೊದವೆ ಮನುವಿನ ಮಾರ್ಗದೆ ನಡೆಯುತೆ ವೈಗಣ್ಣನೋಲಗದ ಸೊಂಪಿಂಗಿರ್ಮಡಿ ಮೀಱಿದ ಪೆಂಪಿಂ ಮೆಱೆದಂ. ಆದೊಡಮೀತಂಗೊಗೆತನದ ಗುಣ್ಪಿಂಗೆ ನೇರ್ಪಡುವೊಂದು ಬಟಿಯ ಬಳವಿಯ ಪುಟ್ಟಿನೊಂದು ಸೊಗಂ ತಾಱಿದುದು.

ಮಡಲಿಱಿವ ಬಾಳ್ವಳ್ಳಿಯ ಚೆಂಗುಡಿ ಸುರುಂಟಿದಂತೆ, ಸೊಗಸಿನ ಸೊಬಗಿನ ನೆಲೆವನೆಯ ಮುಂಗುಡಿ ಮುರುಂಟಿದಂತೆ, ತುಂಬಿ ಪರಿವ ಕಾಳ್ಪುರದ ಕಾಲ್ ಮುಱಿದಂತೆ, ಇಂಬಿನೊಡಲ ಪೊಸಜವ್ವನಂ ಸರಿದಂತೆ, ಇನ್ನೆಬರಂ ಕೊನೆವರಿದು ನೀಳ್ಕರಿಸಿದ ಬಟಿಯ ಬಟಿಯಿಗಳ್ ತನ್ನೊಳ್ ತಡೆದು

೨೦ ದೆಂಬೊಂದು ಬಾಗುಳ ಪೆಟಸಿನಗವಟ್ಟಾಗಳುಮೀಕತದೊಳೆ ಬಗೆಗೆಟ್ಟಿರ್ಪ ರಾಯನೋಲಗಕೊರ್ಮೆ ಜಾಬಾಲಿಮುನಿಪಂ ಬಿಜಯಂಗೈದಂ. ಆಗಳರಸನೈತಂದ ಮುನಿಯಂ ಯಥೋಚಿತಮಾಗತಸ್ವಾಗತಂಗಳಿಂ ಕುಶಲಮಂ ಬೆಸಗೊಂಡು ತಱುವಾಯಿಂ ಕಟ್ಟಿನ ನುಡಿಗತೆಯ ಪೊಟ್ಟಿನೊಳ್—ಕಿತ್ತಡಿಗಳ ಬಿತ್ತೆಗ! ಪಣ್ಣಿಲ್ಲದ ಮರನ ಬಾಳ್ತೆ, ತಣ್ಣೀರೊಸರ್ ಕುಂದಿದ ಕೊಳನ ನೆಗಟ್ತೆ, ಜಂದವನಿಲ್ಲದಿರುಳ ಗಗನದ ಚೆಂದಂ, ಕಂದಂ ಪುಟ್ಟಿ ಮೆಱೆದೊಪ್ಪದ ಬಟಿಯುಂದಂ, ಸಂದ ಜಗದ ತೊಱೆಹಕ್ಕೆಡೆಗುಡದೇಂ ಪೋಕುಂ? ಅಂತುಮಲ್ಲದೆಯುಂ ಮಗನಂ ಪೆಱದಂಗೆ ಸಗ್ಗಿಗರ್ ಬಾಗಿಲಂ ತೆಱೆಯರೆಂಬರಲ್ತೆ! ನಲ್ಮೆ ಮಿಗೆ ಪೆತ್ತ ಕುವರನ ಬಾಲಲೀಲೆಯಂ ಕಾಣದ ಕಣ್ಗಳಿವು ಪೀಲಿಯ ಕಣ್ಗಳಾಗವೆ? ಅಕ್ಕಟಾ! ಮಗನಂ ಪಡೆಯದೆ ನರಕಮಂ ಪುಗುವೊಂದು

೩೦ ಭಾಗ್ಯಮಂ ಬಿದಿಯೆನ್ನೊಳೊಡರ್ಚಿದುದೇ! ನೂಱುನೇಂ? ಇಹಕಂ ಪರಕಂ

ಪೆಱಗಾದ ಬೂತಾದೆಂ. ಅಯ್ಯ! ಮುಂತೇಂ ಬಟ್ಟೆ! ಸುಟ್ಟಿಸಿ ತೋಱಾ!
ಎಂದು ನಿಜನಿಟಿಲತಟಸಂಘಟಿತಕರಸಂಪುಟನಪ್ಪುದುಂ; ಮುನಿಪಸೊಲ್ಮೆಯಿಂ—
ರಾಯ! ನೀನಿಂತು ಮಱುಗಲೇನಕ್ಕುಂ? ನಿನ್ನುರದದವಟಲಂ ಕೇಳ್ವ
ನರರೊಳರೆ? ಸಂಬಿದ ದೈವಕ್ಕೆ ಕೇಳಿಸು! ಆದೊಡಮೆನ್ನೀಬಗೆಗೆ ನೀಂ ಗೋವಂ
ಸೇವಿಸಿದೊಡೆ ನಿನ್ನಭೀಷ್ಟಂ ಸಿದ್ಧಮಕ್ಕುಮೆಂದು ತೋಱುಗುಂ. ಮುನ್ನಂ
ಮುತ್ತರಾಯರ್ಗಿಂತು ಸುರಭಿಯೊಲ್ದುದುಂಟು, ಎಂದು ಸಂತಯಿಸಿದಂ.
ಮಗುಳ್ದಾರಾಯಂ ಮುನಿಗೆ—ಗೋಮಾಹಾತ್ಮ್ಯಮಂತುಟೇಂ ಪಿರಿದೆ?
ತನಗೊರೆ, ಎಂಬುದುಂ; ಜಾಬಾಲಿಯಿಂತು ಕಥಿಸಿದಂ:—

ಎಲೆ ಮಾರಾಯ! ಗೋಮಾಹಾತ್ಮ್ಯಮಂ ಬಣ್ಣಿಪೊಡೆನಗಮಳವೆ!
ಮೆಯ್ಯ ನವಿರ್ಕುಟಿಯೊಳೆಲ್ಲಾ ದೇವರ್ಕಳೋರೊಂದು ನೆಲೆ; ಬಸಿಱೊಳೊಡ ೧೦
ಲೊಳೆಲ್ಲಂ ವಿಶ್ವದೋರೊಂದು ತಾಣಂ. ಇಂತಿರ್ಪಿನಂ, ನೀನೆ ಬಗೆ. ಆವ
ನೊರ್ವಂ ನಿಚ್ಚಂ ಬಿಸಿಲೊಳ್ ಬಾಯಱುತ ಹಸುವಿಂಗೆ ನೀರಸೆಱೆವನವಂಗೈಸಿರಿ
ವರ್ಕುಂ, ಮೇವಿತ್ತು ಕಾವಂಗೆ ಪಾಲ್ಮೊಸರುಣಸಿನ ಪುಣ್ಯಲೋಕಮಕ್ಕುಂ;
ಮೆಯ್ಯ ನೊಟನಂ ಸೋವ, ಶೃಂಗಂಗಳೆಡೆಯಂ ತುಱಿಪ, ಮನುಜಂಗೆ ಬಂದ
ಬಿಯದಿ ತಪ್ಪುಗುಂ; ಮತ್ತಮೆತ್ತಾನುಂ ಮೇವಾವಂ ನಿವಾರಿಪ ನರಂ ನರಕ
ಮಂ ಪೋ‌ಕುಂ. ಇದರ್ಕೊಂದಿತಿಹಾಸಮುಂಟೆಂತೆಂದೊಡೆ:—

ಮುನ್ನಿನ ದಿನಂಗಳೊಳೊರ್ವ ಜನಕರಾಜಂ ಸಗ್ಗಿಗರ ನಾಡಂ
ಕಾಣ್ಬೊಂದು ಬಗೆಯೊಳ್ ಯೋಗದೊಂದು ನೆರವಿನ ವೈಮೆಯೊಳೊಡಲ
ನುಟಿದು ಬಂದ ನಡೆಮಾಡಮನಡರ್ದು ಪೋದಂ ಗಡ! ಇಂತಿರೆ ಪೋಪ
ಬಟ್ಟೆಯೊಳ್ ತನತನಗೆ ನರಲ್ವ ಪೊರಟ್ವ ಮುಟುಗುವ, ಬೇನೆವಡುವೊದೆದಾಡುವ, ೨೦
ಉಬ್ಬಸಂಬಡುವ, ಬೇವ, ಪೊತ್ತುವ, ಕುದಿವ, ಸೀಕರಿವೋಪ, ಕೊಱೆವ,
ನಾಱುವ, ಸೋರುವ, ಕಾಱುವ, ನವೆವ, ಸವೆವ, ಕಾಲ್ಮುರುಂಟಿದ,
ಕೈಸುರುಂಟಿದ, ತಲೆ ಬಿರಿದ, ಕೀಲ್ ಮುಱಿದ, ಕಣ್ಣಿಟಿದ, ನೂಲದ ಮೊನೆಯೊ
ಳೇಱಿದ ಕಲ್ಲಾಲೆಯ ಬಸಿಱೊಳ್ ಸಿಲ್ಕಿದ, ಪದ್ದಕಾಗೆಗಳ ಬಾಯೊಳಾದ,
ಕೀವಿನ ಮಡುವಿನೊಳ್ ಜಿಟ್ಟಿ, ಕೂರ್ವಾಳ ತುದಿಯೊಳ್ ಜೋಲ್ದ, ತನಿಗೆಂಡದ
ಬೇಹಿನುರ್ಕಿನ ಪುತ್ತುಟಿಯುಪ್ಪುಗೆಯು ತಟ್ಕೆಯೊಳಿರ್ದ ಪೇಸಿಕೆಯು, ಱೋಡೆಗರ
ಪಾಪಾತ್ಮರ ಬಾಟ್ಟಿನೆಯೆನಿಪ್ಪ ಯಮಲೋಕಮಂ ಮುಟ್ಟಯಿಸಿ ಬರ್ಪುದುಂ;
ಪಾವನಮೂರ್ತಿಯೆನಿಪ್ಪ ರಾಯನತ್ತಣಿಂ ಬಳಸಿವರ್ಪ ಗಾಳಿಯ ಸೋಂಕಿಂ
ನಾರಕಿಗಳೆನಸುಂ ಚೇತರಿಸಿ ತಣ್ಪುಗೊಂಡು ಕಟ್ಟುಬ್ಬರದ ಬೇನೆಯಂ ಸೈರಿಪಂತಿ
ರಾಗೆ ಮುಂತು ಸಮಂತು ದಿಟ್ಟಿಸಿ ಐದಿವರ್ಪ ನಡೆಮಾಡಮಂ ಕುಱಿತು ೩೦

ಕೂಗಿಕ್ಕಿ—ಎಲೆಲೆ! ಸೈಪಿನಸರಮನೆಯೆ! ಎಲೆಲೆ ಪುಣ್ಯವಂತನ ನೆಲೆವೀಡೆ!
ಪೋಗದಿರ್ ಪೋಗದಿರ್. ಇನಿತೊಂದು ವೇಗವೇಂ? ನಿನ್ನತ್ತಣಿಂ ತೀಡುವ
ಗಾಳಿ ಸೋಂಕಲೊಡಮೆಮ್ಮ ನೋವುಂ ಬೇಹುಂ ಪಿರಿದುಂ ಸರಿದುದು. ಇಂತಿ
ರೆಮ್ಮ ನೋವದೆಮ್ಮ ಬಿನ್ನಪಮನಾಲಿಸದೀಕುತ್ತ್ರದ ತೆಱಪಕ್ಕೇನಾನುಂ ಮರ್ದ
ನೀಯದೆ ಬಿನ್ನನೆ ನಡೆವ ಬಲ್ಮೆಯಿದೇನೊ! ನಿನಗಾನುಮೆಮ್ಮೊಳ್ ಮಱುಕಂ
ಪುಟ್ಟದೆ? ಹರಹರಾ! ಎಂದು ಕೈಯೆತ್ತಿ ಕರೆದರ್. ಆಗಳ್ ರಾಯನಿಂತೀತೆಱನ
ಮೊರೆಯಂ ಕೇಳ್ದು ಬಿಸವಂದಂಗೊಂಡು ವಿಮಾನಮಂ ತಡೆದು ಪಿಂತಿರುಪಿ
ಮುಟ್ಟಿಯಿಸಿ ಬಂದು ಜೈಮಿನೀಪುರದ ಮುಂಬಾಗಿಲೊಳಿೞಿತಂದು
ನೋಳ್ಪನ್ನಂ ಧರ್ಮರಾಜಂ ತಳ್ವದೈತಂದಿದಿರ್ಗೊಂಡು ತಕ್ಕಂತು ಸನ್ಮಾ
೧೦ ನಿಸುತುಂ ಮತ್ತಮಭ್ಯಾಗತನೊಳ್—ಏನಯ್ಯ ಎತ್ತಣಿಂ ಬರವಾಯ್ತು?
ನಿಮ್ಮ ಸ್ವರ್ಗಮಿಮ್ಮೀನಾಡೊರ್ಗದಲೇ! ಏಂ ಬಟ್ಟೆದಪ್ಪಿ ಬಂದಯ್. ಆವಗಂ
ನಮೆವ ಪಾತಕಿಗಳ ಯಾತನೆಯ ನರಕಮಿತ್ತಲಿತ್ತಲ್. ಪೆಱರ ಸಿರಿಯಂ ಕವರ್ವ,
ಪೆಱರ ಪೆಂಡಿರ್ಗಳುಪುವ, ಪೆಱರಂ ಕೀೞ್ಮಾಡುವ, ಪೆಱರೊಡಮೆಯುಂ ಕಿಡಿ
ಸುವ ಕಡುಕೂಟರ್ಗೆ ನೆಲೆವೀಡು. ಆವುಗಳಂ ಕೊಲ್ವ, ಪಾರ್ವರಂ ಪಗೆವ,
ಪೞಸುಡಿಯಂ ಪೞಿವ, ಜನ್ನಕ್ಕೆಡರ್ಗೆಯ್ವ, ಪೆತ್ತರಂ ಪತ್ತುವಿಡುವ, ಗುರುಗಳ
ನೇಡಿಸುವ ಪಾಪಿಗಳ್ಗೆ ಬಾೞ್ವನೆ. ಇಂತಿದಂ ನೀಂ ಪುಗಲಕ್ಕುಮೆ? ಕಾಣ
ಲಕ್ಕುಮೆ? ಎಂದಾಡಿದಂ. ಅಂತಪ್ಪುದುಂ ಜನಕಂ ಜವನೊಳ್—ಎಲೆ
ಧರ್ಮರೂಪ! ಇಂತೀ ಪೊೞಲ್ ನರಕಮೆಂದಱಿತೆನಿಲ್ಲ; ಪೆಱತೇನಾನುಮಕ್ಕು
ಮೆಂದೇ ಬಗೆದೆಂ. ಅಂತಾಂ ಬಗೆವಿನಂ ಲೋಗರ್ಗೆಂತೆಂತೊ ಬನ್ನಬೇನೆ
೨೦ ಗಳೊದವಲೊಡಂ ನರಲ್ವೊಂದು ಮೊರೆಗೇಳ್ದು ಬಂದೆಂ. ನೋಡ್ವೊಡಿಂತಿದು
ದುಸ್ತರಂ ನರಕಂ! ಎಲೆಲೆ! ನೀನುಮಂತಿವರೊಳೇಂ ಮಱುಕಂಗೊಳ್ಳೆಯ!
ಚೀಃ ಪೋಕೆ! ಇವರಂ ಕೊಂಡೇಂ ಕಜ್ಜಂ? ಇನ್ನಾನುಂ ಬಿಡ! ಎಂದು
ನುಡಿವುದುಂ; ಯಮಂ—ಓ! ಬಿಟ್ಟಿಯಾಳ್ಗಳಂ ಬಿಟ್ಟಂತಾಗದೆ! ಎಂತೀ
ತಂಗಳ್ ಪೋಗಲಾರ್ಪರ್. ಇನ್ನುಂ ಪಾಪಂ ಮುಡಿದುದಿಲ್ಲಮೀಗಳೇವೆಂ!
ಇದೆ ಕೊಳೀತಂ ಮುನ್ನಮೊರ್ವನಂ ಪಾರ್ವನಂ ಕೊಂದ ಬೊಮ್ಮೆತಿಗಾಱಂ;
ಈಗಳಿದೆ ಎರೆಯಾದಂ. ಈತಂ ಪೆಱನಂ ನಂಜನೂಡಿ ಮಡಿಪಿದಂ; ಅಂತದಱಿ
ನಿಲ್ಲಿ ಕಾಳೋರಗಂಗಳ್ಗೆ ತುತ್ತಾದಂ. ಮೇಣೀತಂ ಪರಕಾಂತೆಯಂ ಕಾಮಿಸಿದ
ನಂತದುಕಾರಣದಿಂ ಕಾದುರ್ಕಿನ ಪೆಣ್ಬೊಂಬೆಯ ತಕ್ಕೆಯೊಳಾದಂ. ಮತ್ತ
ಮೀತಂ ಪಗಲ್ಗಳ್ಳನೀತನಂ ಸಮ್ಮಕಂಕರಿಯಿಂ ಬಡಿವರೆಂದು ಬೇಱವೇಱೆ
೩೦ ತೋಱಿದಂ. ಅದರ್ಕಾರಾಜಯೋಗಿ ಈ ನರಕಿಗಳೆಂತಾನುಂ ಮುಕ್ತ

ರಾಗದೆ! ಅಕ್ಕಟ! ಇಂತಿನಿಬರ ಪಾಡ್ಗೇಡಂ ಕಂಡುಮೆಂತಾಂ ಪೋಗೆನೆ! ಏನಾನುಮೊಂದುಪಾಯಮಂ ತಿಳಿಪಲಾಗದಾ! ಎಂಬುದುಂ; ಸೂರ್ಯಸುತಂ—ಅಂತಪ್ಪೊಡೆ ನೀನಿನ್ನೆಬರಂ ನಿಚ್ಚಂ ಶ್ರೀರಾಮನಂ ಮೂಱವಗೆಯು ನಿಚ್ಚಟಮತಿಯಿಂ ತುತಿಸಿದ ಪುಣ್ಯದರೆಯನಿತ್ತೊಡೆ ಇವರ್ ಮುಕ್ತರಪ್ಪರ್. ಎಂದೆಯುಂ ಬೇಡನೆಂದಂ. ಇದನಱಿದು ಜನಕಂ ತನ್ನ ಪುಣ್ಯದೊಳರ್ಧಮಂ ಧಾರೆಯನೆಱೆವುದುಂ ಪಾಪಿಗಳೆಲ್ಲರ್ ಬಿಗಿವಟ್ಟ ನರಕಬಾಧೆಯುಂ ಬಿಡುವಟ್ಟು, ಸಂತಸದಿಂ ಶ್ರೀರಾಮನಂ ಪಾಡುತುಂ, ಜನಕರಾಜನಂ ಪೊಗಳುತುಂ, ಜನನಂ ನೆನೆಯುತುಂ, ಬರ್ದಿಲದ ನಾಡಂ ಪುಗುತಂದರ್.

ಕೇಳೆಲೆ ರಾಯ! ರಾಮನಾಮಸ್ಮರಣೆಯೊಂದು ಪೆರ್ಮೆಗೆ ಬೆಱಗುವಟ್ಟು ಮಿಥಿಲೆಗೆಯ್ದೆಯುಂ ಕೈಮುಗಿಯೆಯೆದೆಯನೆಯೊಳ್—ಪಾಪಿಗಳಲ್ಲ ಪುಣ್ಯಾತ್ಮರ್ ನರಕಕ್ಕೆ ತರ್ಪರದರಿಂದಾಗಳೆ ಕೇಳ್ದಪೆಯಲ್ತೆ. ಆಂ ಪುಣ್ಯಾತ್ಮನೆಂದೆಯುಂತಿರೆ ಯುಮಿಲ್ಲಿಗೇಕತದಿನ್ನೆತಂದೆ, ಪೇಳೆಂಬ ರಾಯಂಗೆ ನಸುನಗೆಯೊಳ್—ನೀಂ ಪುಣ್ಯಾತ್ಮಂ ನಾಜನಮಾದೊಡಂ, ಪೂರ್ವದೊಳೊರ್ಮೆ ತಾಂ ತನಗೆ ಮೇವ ಪಸುವಂ ನಿವಾರಿಸಿದಯ್. ಅದು ಕಾರಣದಿಂ ನಿನಗಿಂದು ಎಮ್ಮ ಪುರದರ್ಶನ ಮಾಯ್ತು. ಇಂತುಟಲೆ ಧರ್ಮಸೂಕ್ಷ್ಮಂ. ಗೋಮಾಹಾತ್ಮ್ಯಮುಂ ನೀನಱಿಯಾ? ಎಂದು ನುಡಿದಂ. ಅನಿತಿಗೆ ತಲೆಯನೊಲೆದು ಕೈಮುಗಿದು ನಮುಂ ತೆರಳ್ದಂ ಗಡ!

ಇಂತು ಮಱೆದೊರ್ಮೆಯಾದೊಡಂ ಗೋವನೆಬ್ಬಿಟ್ಟಿದ ಜನಕರಾಜಂಗಂ ನರಕದರ್ಶನಮಾದುದೆಂಬೆಡೆಯೊಳ್—ಆಕಳಂ ಕೊಲ್ವ ನೋಯಿಸುವ ಕೀಳರ್ಗೇನಾದ ಬಾಧ್ಯೆಯೊ? ಮೇಣ್ ಭಕ್ತಿಯಿಂ ಧೇನುವಂ ಸೇವಿಪ ಭಾವಿಪ ಮಾನವರ್ಗೆ ಮನೋರಥಂ ಸಿದ್ಧಿಪುದೇಂ ದೊಡ್ಡಿತೆ? ಮನುಕುಲದ ಮುನ್ನಿನ ರಾಯರ್ ಗೋಪೂಜಾಪ್ರಭಾವದತ್ತಣಿಂ ಪುತ್ರರಂ ಪಡೆದುದುಂಟು. ನೀಂ ಕಮ್ಮನಮನುಟಿದು ಗೋವಂ ಪೂಜಿಸೆಂದು ವಿಧಿಯನೇರ್ಪಡಿಸಿ ಜಾಬಾಲಿ ತಾಂ ಬೋಧಿಸ್ಸಿಂದಂ.

ಶತ್ರುಘ್ನ! ಇಂತು ಜಾಬಾಲಿಯೊಂದುಪದೇಶಮಂ ಗುರೂಪದೇಶಮೆಂದೇ ಬಗೆದು ಋತಂಭರಂ ದೈವನ್ಯಸ್ತನಿಜಭಕ್ತಿಭರಂ ಸುಲಕ್ಷಣ ಲಕ್ಷಿತಮಾದ ಆವನಾಗಳುಂ ಸೇವಿಸುತುಮಿರ್ದಂ. ಕಟ್ಟಕಡೆಯೊಳ್ ಸಲ್ಗೆಯ ಸುರಭಿ ರಾಯನ ಭಕ್ತಿಗೊಲ್ದು "ಪುತ್ರವಾನ್ ಭವ" ಎಂದು ದೇವವಾಣಿಯುಂ ಪರಸಿ ತನ್ನ ಧೇನುಲೋಕಮಂ ಸಾರ್ದುದು.

ಮತ್ತಮಾರಾಯಂ ತನ್ನಂ ಪರಸಿದ ಧೇನುವಿನೊಲ್ಮೆಯುಂ ನೆನೆನೆನೆದು

ತಿರ್ದಿಂಬಟಿಯುಂ ಕೆಲವಾನುಂ ದಿನಕ್ಕೆ ತನ್ನರಸಿಯೊಳ್ ಸತ್ಯವಂತನೆಂಬೊರ್ವ ಮಗನಂ ಪಡೆದು ಕೃತಕೃತ್ಯನಾದಾರಾಯುಂ ಪೊಸಜವ್ವನದ ಮುದ್ದುಗುವರ ನೊಳ್ ರಾಜ್ಯಭರಮನೊಪ್ಪಿಸಿ ತಾಂ ತಪಸ್ಸಾಮ್ರಾಜ್ಯಮಂ ಸೂಱೆ ಗೊಂಡಾಳುತುಮಿರ್ದಂ.

ಎಳನೇಸಱ ಪೊಸವೆಳಗಿಂಗೆ ಸೊಂಪೇಱೆ ನಳನಳಿಪ ತಾವರೆಯಂತೆ, ಕಡುಸುಗ್ಗಿಯ ಭರಕೆ ಕೈವಂದು ಕೊನೆವೆರ್ಚುವ ಮಾಮರನಂತೆ, ತಕ್ಕಿನ ಸೋನೆಯ ಮೆಲ್ಸರಿಗೆ ಸುಟಿವಿಟ್ಟು ಚಳಿಚಳಿಪ ಪೊಂಬಾಡೆಯುಂತೆ, ಕುವರಂ ನವಯೌವನದೊದವಿಂಗೆ ನೆಱೆವೆಱೆಯಂತಿರೆ ತುಂಬಿ ತೇರಿದೊಂದು ಮೆಯ್ಸಿ ರಿಯಿಂ ಸೊಗಯಿಸಿದನಪ್ಪುದುಂ; ಚೆನ್ನಿಗರಾಯನಂದದ ಸಿಂಗರದ ಗಾಡಿಗೆ ಸೋಲ್ತು ಬೀರಸಿರಿ ತಾಂ ತೋಳಸೇಱೆವಂದಳ್. ಇಂತಿರೆ ಸತ್ಯವಂತಂ ತನ್ನ ಪೆಸರಂ ಪೋಲ್ವಂತು ಸತ್ಯಧರ್ಮದಾಂಕೆಯೊಳೆ ನಿಂದು ಶೇಷನ ತಲೆವೊಱೆಯ ತಿಣ್ಣದ ತಿರೆಯನೊಂದೆ ಪೆಗಲೊಳಾಂತು ಗಲ್ಲವೆಣ್ಣಂ ಬಾಳ ಮೊನೆಯೊಳಿರಿಸಿ ತನ್ನೊಂದೇಱುಂಜಸದ ಪೆರ್ಚುಗೆಯ ಬೆಳ್ವೆಳಗಿಂ ಬಾಂಬಟ್ಟೆಯ ತುಂಬುವೆಱೆಯಂ ಕಂದಿಸಿ ಕುಂದಿಸಿದಂ.

ಎಲೆ ಅರಸ! ಈ ಮಾಣ್ಕೆಯಿಸೊಪ್ಪುವ ತೇಜಃಪುರದ ರಾಜನಾಗಳುಂ ಶ್ರೀರಾಮನನಾದಿದೈವಮೆಂದೇ ಬಗೆದು ಸೀತಾನಾಯಕನನೆ ಭಕ್ತಿಯಿಂ ಭಜಿಸಿ, ರಘುವರನ ಲೀಲೆಯನೆ ಕೇಳ್ದು, ರಾವಣಾಂತಕನಂ ಕಣ್ಣಾಱೆ ನೋಡ್ಪೊಂದು ಬಯಕೆಯೊಳೆ ಇರ್ದಂ. ಇಂತಿದು ಗೋಪೂಜೆಯ ಮಾಹಾತ್ಮ್ಯೆಯನತ್ತಣಿ ನೊದವಿ ಬಂದ ಭಾಗ್ಯಂ.

ಕಾಂತೆ! ಅಂತು ತಂತಮ್ಮೊಳ್ ನುಡಿಯುತಿರ್ಪುದುಂ; ಮುಂದೆಸೆಯೊಳ್ ನಡೆವ ಹಯಮೂರ ಕೇರಿಯ ಜನಂ ಬೆಱಗುವಡೆ ನೆಟ್ಟನೆ ಪುರಮಂ ಪುಗು ತಂದುದು. ಆಗಳ್ ಪೊಟಲ ಕಾಪಿನಾಳ್ಗಳ್ ಪೊಱನಾಡ ಕುದುರೆಯಂ ಪಿಡಿದು ತಮ್ಮಾಣ್ಮಂಗೊಪ್ಪಿಸಿದರ್. ಅಂತಾಗೆ ಸತ್ಯವಂತಂ ಬಂದು ಬಂದಿಯ ತುರಂಗ ಮದ ಪಣೆಯ ಪತ್ರದೊಳ್ ಬರೆದ "ರಾಮ" ಎಂಬೆರಡಕ್ಷರಂಗಳನೋದಿಯುಂ ಸಂತಸದ ನವಿರ್ ಗುಡಿಗಟ್ಟೆ ಹಯದ ಬೆಂಬಟಿಯೊಳ್ ಬಂದ ಶತ್ರುಘ್ನನಂ ಕಾಣ್ಬೊಂದು ತವಕದಿಂ ತನ್ನವರ್ವೆರಸಿ ಚಾವಡಿಯಿಂ ಪೊಱಮಟ್ಟು ಇದಿ ರ್ಗೊಳಲ್ಕೆಂದು ನಡೆತಂದಂ. ಇಂತು ಪಗಲ ಕೈದೀವಿಗೆಯ, ಮಕರ ತೋರಣದ, ಟೆಕ್ಕೆಯದ, ಬೆಳ್ಗೊಡೆಯ, ಪೊಂಗಟ್ಟಿಗೆಯ, ಪುಲಿವೊಗದ, ಚೌರಿಯ, ಬಿಜ್ಜಣಿಗೆಯ, ಹಡಪದ, ಜವಳಿಮುದ್ದಳೆಯ, ಕಾಳೆಯ, ಪಂಚ ವಾದ್ಯದ, ಬಿರುದಿನ ಬಾವುಲಿಯ ಸಡಗರದಿಂ ಬಂದು ಶತ್ರುಘ್ನಂ ಮುಂತಪ್ಪರ್ಗೆ

ಕಾಣಿಸಿಕೊಂಡು ಮೆಲ್ನುಡಿಯಿಸುಪಚರಿಸಿ ಬಿಡದೆ ಅವರಂ ತನ್ನರಮನೆಗೆ ನಡೆಯಿಸಿ ಸಮ್ಮಾನಿಸಿ ಮತ್ತಮಡಿಗಡಿಗೆ ಶ್ರೀರಾಮಕಥಾವಿನೋದಂಗಳಂ ಕೇಳ್ದು ತನ್ನ ನಾಡಂ ರಾಘವಂಗೊಪ್ಪಿಸಿ ಸರ್ವರ್ಗಮುಡುಗೊಱೆಯನಿತ್ತು ತನ್ನ ಪಡೆವೆರಸು ಹಯರಕ್ಷಣಾರ್ಥಂ ಶತ್ರುಹಂಗೆ ನೆರವಾಗಿ ತೆರಳ್ದಂ.

ಇಂತಪ್ಪುದುಂ ಲವಣಾಂತಕಂ ರಾಯಗುವರನ ಭಕ್ತಿಗಂ ಬಗೆಗಂ ಬಗೆಮಿಗೆ ಮೆಚ್ಚಿ ನಾಡೊಡೆತನಮನಾತನ ಪುತ್ರಂ ರುಕ್ಮನೊಳಿತ್ತು ಕಾಣ್ಕೆಯುಂ ಕೈಕೊಂಡು ಸಸೈನ್ಯಂ ಸಮಹಿತ ಸರ್ವವೈಭವಂ ಪೊಱಮಟ್ಟಂ.

ಎಂಬಲ್ಲಿಗೆ ಶ್ರೀರಾಮಾಶ್ವಮೇಧದೊಳ್
ತೇಜಃಪುರವರ್ಣನಮೆಂಬ ದ್ವಾದಶಾಶ್ವಾಸಂ ಸಂಪೂರ್ಣಂ.

---

## ತ್ರಯೋದಶಾಶ್ವಾಸಂ

# ಅರಣ್ಯಕಮುನಿದರ್ಶನಂ

ಎಲೆ ಎನ್ನ ಮೋಹದ ಗಿಳಿಯೆ! ಅಲ್ಲಿಗಲ್ಲಿಗೆ ಅಡಿಗಡಿಗೆ ಬಂದೆಱಗುವಱಕೆಯ ಬಲ್ಲಾಳ ಸಾಮಂತರಾಯರ ಮುಂದಲೆಯಚ್ಚಪೊನ್ನ ಪೊಚ್ಚಪೊಸಬಾಸಿಗದ ಮುತ್ತಿನ ಗೊಂಡೆಯ ತುಱುಗುವೆಳಗಿಂ ಪೊರೆಯೇಱಿದ ತನ್ನಡಿದಾವರೆಯ ಮೆಲ್ಪೊಗರಿನವರವರರನೆಂಡಿರ್ಕೈದೆದಾಳಿಯಂ ಬಣ್ಣವೆರ್ಚಿಸುತುಂ, ತನ್ನೊಳ್ ಕೇಣಿಗೊಂಡ ಗೆಲ್ಲವೆಣ್ಗೆ ಪುರುಡಿಂ ಮೀಱಿಮೋಪ ಜಸವೂಸಜವ್ವನೆಯ ಪಾಱುಗೆಯ್ದುದಿರವಂ ತೋಱುತುಂ, ಬರ್ಪ ಶತ್ರುಹನ ಮುಂದೆಸೆಯೊಳ್ ನಡೆವ ಪೊನ್ನ ಜಾಳಿಗೆಯ, ರನ್ನದ ಬೊಕ್ಕಸದ, ಸಾಯಿರಸಾಯಿರ ಲೆಕ್ಕದ ಹೇಱಾಟ ದಾನೆಗಳೊಟ್ಟೆಗಳೆತ್ತುಗಳ ಸಾಲ ಮುಂಗುಡಿಯೊಳ್ ತಂತಮ್ಮ ಸೇನೆವೆರಸೈದಿ ವರ್ಪ ನಾಡ ನಾಡ ರಾಯರನೊಡಗೂಡಿ ಪುಷ್ಕಲಾದಿಸುಭಟರ್ ಕುದುರೆಯ ಬೆಂಬಟಿಗೊಂಡು ನಡೆಯುತಿರಲೊಡಮಾಗಳ್—

ನೀಲಮೇಘಂ ಸುರಿವಂಜನವೃಷ್ಟಿಯೊಬ್ಬುಳಿಯೋ, ಅಂದಂದು ದೇವರ್ಕಳೊಳಿದಿರ್ಚಿ ಮಣ್ಮುಟಿಮೋದ ರಕ್ಕಸರೊಳವಗೆಯ ಪಾಪದ ಮೊತ್ತಮೋ ಎನೆ ತಾಂ ತನಗೊರ್ವೊಡಲೊಳೆತ್ತಂ ಪರ್ವಿ ಕರ್ಗತ್ತಲೆ ಮುಸುಂಕಿದತ್ತು. ನಡೆಗೆಟ್ಟುವು ಕರಿ; ಬಟ್ಟೆಗೆಟ್ಟುವು ಹಯಂ; ಮುಂದುಗೆಟ್ಟುದು ಪದಾತಿಗಳ್; ದೆಸೆಗೆಟ್ಟುವು ರಥಂಗಳ್; ಕಣ್ಗೆಟ್ಟುವು ಜೂಣಿಯ ರಾಯದಟಂ; ಮತಿಗೆಟ್ಟರ್ ಪಡೆವಳ್ಳರೆಲ್ಲರ್.

ಅನಿತಱೊಳೆ ಕವಡುಗಟ್ಟಲೆ ಮಾಸಲೊಡಂ ಮುಸುಂಕಿದ ಲೋಕದ ಮರುಳ್ಗೆಮೆಯುಡಂಗಿದ ಜೋಗಿಯ ಮನದ ನಿಮ್ಮಳಿಕೆಯಂತಿರೆ ದೆಸೆಯೆತ್ತಂ ನಿರ್ಮಲಮಾದುದು. ಆಗಳ್ ನಿದ್ರೆಯಿಸೆಟ್ಟಱಾದಂತು ಕಣ್ಗಟ್ಟಿಂ ಪೆಱಗಪ್ಪುದುಂ, ಪೊಲಂಬುಗೆಟ್ಟು ಕಣ್ಬಿಟ್ಟು ಬೆಬ್ಬಳೆವೋಗಿ ತಂತಮ್ಮೊಳ್ ಮಾಯೆಯ ಮಾಟಮಂ ಮಾತುಗುಡುತೆ ಜನ್ನಗುದುರೆಯಂ ಕಾಣದಿರೆ, ಬಿಸವಂದಂದಾಳ್ದು ಮತ್ತಂ ಪಜ್ಜಪಜ್ಜೆಗೆ ತಕ್ಕಟಿದು ಬಗೆಗುಂದಿ ಕಂಡರಂ ಬೆಸಗೊಳುತುಮಂಡಲೆದು ದೆಸೆದಿರಿಯುತುಮಿರ್ಕೆಲನೊಳಱಸುತುಂ, ಸಂದಿನೊಳ್ ಪುಡುಕುತ್ತುಂ, ಗೊಂದಿನೊಳ್ ನೋಡುತುಂ, ಪಟುವಂ ಪುಗುತುಂ, ಕೊಳನಂ ಕದಡುತುಂ, ಕಂಡುಂ ಕಾಣಿಸದಿರೆ ಕರಂ ಕನಲ್ದು ಶತ್ರುಹಂ ಶ್ರೀರಘುಕುಲವಾರ್ಧಿಪೂರ್ಣಶಶಾಂಕನ ಶ್ರೀರಾಮಚಂದ್ರಮನ ಯಜ್ಞೀಯ ತುರಂಗಮಂ ಕಳ್ದುಯ್ದವನಾವನಾತನಸೀಗಳೆ ಅಱನರಮನೆಯಂಗಣಕ್ಕೆ ಮೆಂಟಿಯನಾಗಿಸುವೆನೆನುತೆ ಹೂಂಕರಿಸುತೆ ಬಿಲ್ಗೊಂಡು ಬೀದಿವರಿಯುತೆ ಪೊಱಮಟ್ಟಂ. ಅನಿತಱೊಳೀ ಲವಣಾಂತಕನ ಪೆಂಪಿನ ಕೆಂಪಿನ ಬೀರದ ಜರ್ವಿಗೆಂದೆ ಕಣ್ಗೆಟ್ಟು ಅಂಬರದತ್ತಣ್ಗೆ ಸಂದ ಪುಸಿಯ ಕಳವಿನ ಬಲ್ಪಡೆಯೆನೆ ತೋರ್ಪ ಮಾಯಾ ವಿಡಂಬನದಿಂ ಕುದುರೆಯುಂ ಕಳ್ದುಯ್ವ ವಿದ್ಯುನ್ಮಾಲಿವೆಸರ ರಕ್ಕಸನ ಪೆರ್ವಡೆ ತುಬ್ಬಾದತ್ತು. ಇಂತಾಗಲೊಡಂ ಬಲ್ಪಿನ ತೋಳ ತೋಟಿಯ ಪಡೆವಳರೆಲ್ಲರ್ ತಂತಮಗೆ ಹೂಂಕರಿಸಿಯುಂ, ಬೊಪ್ಪರಿಸಿಯುಂ, ನಡೆಮಾಡ ಮನಡರ್ದು ಹಯಮನುಯ್ವ ಮರ್ಬಿಗನಂ ತಱುಬಿ ಅಟಿವಡೆಯಂ ಬಱಿಕೆಯ್ವ ಪವಣರಾಯನ ಕಟ್ಬಾಣತಿಯುಂ ಪಾಱುತಿರ್ಪುದುಂ; ಮಧುಪುತ್ರಶತ್ರು ತನ್ನವರಂ ಕಂಡು, ಎಮ್ಮವರೊಳಿಂತಪ್ಪ ಮಾಯೆಗಾಱನಿಂ ಮೇಣ್ ಕುದುರೆಯಂ ಮಗುೞ್ಚುವ ಮೆಯ್ಗಲಿಯಾವನೆನ್ನಿದಿರ್ಗೆ ಬರ್ಕೆ! ಎಂದು ಕೇಳಿಸಿದಂ.

ಆಗಳವರೊಳೊರ್ವಂ ಮೇಲಱಿಕೆಯ ಕೈದುಕಾಱರ ಬೀರಂ ಪುಷ್ಕಲಂ ಶತ್ರುಹಂಗೆ—ಬೊಪ್ಪ! ತಪ್ಪದರಿನಿಶಾಟನಂ ಸಮಂತು ಚುಕ್ಕಿಯ ಕವಡು ಮಾಯೆಯ ಪೊಲನ ರಕ್ಕಸವಡೆಯನಿದಿರ್ಚಿ ಬಾರಿಸದೆ ಬೆಂಗೊಟ್ಟೆನಾದೊಡೆ ಪಱೆವಾತಂ ಪಟಿವ ಕೂಟನೊಂದು ಗತಿ ತನ್ನೊಳಕ್ಕೆ, ಎಂದು ಪೂಣ್ದಂ. ಅನಿತಱೊಳೆ ಸಿಂಗನೆರ್ದೆ*ಯ ಸಂಗರದಂಗದ ಪ್ರತಾಪಾಗ್ರ್ಯಂ—ಅಯ್ಯ ಮಾರಾಯ! ಇಂದು ಬಂದು ಸಂಧಿಸಿದ ದಾನವನೊಳ್ ಪೊಣರ್ದು ಜಡಿದು ಸೊಪ್ಪುಸೊವಡಪ್ಪಿನೆಗಂ ಬಡಿದೆಟ್ಟಟ್ಟದೆ ಮಾಣ್ದೆನಾದೊಡೆ ಕಳ್ವ, ಕಳ್ಗುಡಿವ, ಸಟೆದಟಮಟಿಸಿ ಪೆಱವರೊಡಮೆಯಂ ಕವರ್ವ ಪಾತಕಿಯೊಂದು ನಿಟ್ಟೂರದ

ಕಟ್ಟುಬ್ಬಸದ ಬವಣೆ ತನಗಕ್ಕೆ, ಎಂದು ಸೂರುಳ್ದಂ. ಮತ್ತಮಾಗಳ್ ನೆಲನಗಲದಗಲದ ಚಲದ ಚಲದ ಬಲದ ಬಲದ ಗಂಡುಗಲಿ ಲಕ್ಷ್ಮೀನಿಧಿ—ಭಾವ, ಪುಷ್ಕಲನಿರ್ಕೆ, ಪ್ರತಾಪಾಗ್ರ್ಯನಿರ್ಕೆ; ಭೂಭುಜಂ ಸುಭುಜನಿರ್ಕೆ; ಮಿಕ್ಕಿನ ತಕ್ಕಿನ ಕೂರ್ವಾಳ ಪಟುಭಟರಿರ್ಕೆ; ಈಸೂೞ ಪೊರ್ದುಗೆಯ ಗುರ್ದಿನಾಟದೊಳುರ್ವ ಕೊರ್ವಿನ ಕೇಡಾಳಿಯಂ ಕೆಡಪದೊಡಾತನ ಸೇನೆಯಂ ಕೇೞು ತುಪ್ಪುೞಂ ತೂೞದೊಡೆ ಮತ್ತಂ ಹಯಮಂ ಮರಲ್ಚದೊಡೆ ಎಮ್ಮಾ ಜನಕಂ ಜನಕಂ ಜನಕಂ ಮುನಿಜನಕಂ ಸಮಂತು ನಡೆದ ತೋೞದ ಸಜ್ಜನಿಕೆಯಂ ಕೊೞಚಾಡುವಣಕದ ದುರ್ಜನದ ಬಾರ್ತೆಗೆಟ್ಟ ಬಾಡ್ಕೆ ತನಗಕ್ಕೆ! ಎಂದು ಕೆಯ್ವೊಯ್ದಂ. ಆಪೊತ್ತಿಂಗೆ ಒಲ್ಮೆಯ ಸಾಸಿಕೆಯ ಕಡುಗಲಿಯಣುವಂ ಕೈಮುಗಿದು ಕೊನೆವಾಲಮನಲುಗಿಸುತೆ ವೈವರ್ಚಿ ರಾಯನನೆಂಗುಂ:— ಜೀಯ! ರಕ್ಕಸರ್ಗಮೆಮಗಮೆಣ್ಣೆಸೀಗೆ. ಸೀಮಲ್ತು, ದೇವರ್ಕಳಲ್ತು, ನಾಗರಲ್ತು. ಇಂದಿನೀವಿಸಸನದೊಳಾೞಯ ಜತ್ತುಕದ ನಿಶಾಟನುಬ್ಬಿನದ ಬಲಮಂ ಗೋಣ್ಮುೞದು ಗುಟ್ಟಿಗಟ್ಟುವೊಡಾನೆ ಸಾಲ್ವೆಂ. ಕಾಡೊಳೆ ಬಳೆದ ಸೀಳ್ಪಿನ ಕೈಯ ನಿಡುಗೋಡ ಪೇರಾನೆಯ ಕುಂಬತಳಮಂ ತನ್ನೊಂದೆ ಕೈಯ ಪೊಯ್ಲಿಂ ಸೀೞ್ವ ಪೋೞ್ವ ಪಂಚಾನನಂಗಮೆನಗಂ ಪೆಱತ ಕೆಲಚಕ್ಕುಮೆ? ಮಾತೇಂ, ಸುತ್ತೇಂ? ನೋಡ್ಪೊಡಿಂದಿನ ಮುಂದಿನ ಖಲನ ಪೊೞಕು ಪೆೞಕಪ್ಪಿನೆಗಂ, ತುರಿಪಡೆ ಕಾದಿ ಗೆಲ್ದು ಹಯಮಂ ತಾರದಿೞದೆನಾದೊಡೆ, ಶ್ರೀರಾಮರಂ ಮೊಕ್ಕಳಂ ತನ್ನೊಂದು ಹಂಹದೞವಗ್ಗಿನ ಬೆಸಗೆಯ್ಮೆಯಿಂ ತೆಗಟ್ವ ಕೀೞನ ದುರ್ಗತಿಗಿೞವೆಂ.

ಇಂತಿರಣುವನ ಬಲಕಂ, ಜನಕಜನ ಚಲಕಂ, ಪ್ರತಾಪಾಗ್ರ್ಯನ ಬೀರಕಂ, ಪುಷ್ಕಲನ ಗಂಡುಗಲಿತನಕಂ, ಮಿಕ್ಕುೞದ ರಾಯರ ಪೂಣ್ಕೆಗಂ, ಜೋದರುಬ್ಬಟೆಗಂ ಮನಮೊಲ್ದು ಶತ್ರುಘ್ನನವರವರನುಚಿತೋಕ್ತಿಯಿಂ ಮನ್ನಿಸಿ, ಅನಿಬರ್ಗಮೊಂದಾಗಿ ವೀಳೆಯವನಿತ್ತು ರಕ್ಕಸನನಿದಿರ್ಚುವೊಂದು ಬೆಸನದೊಳ್ ಕಳಿಪಿದಂ. ಅನಂತರಮಾ ಅೞಕೆಯ ಕಟ್ಟಂಕದ ತೋಳ್ವಲನ ಸಾಸಿಗಳೆಲ್ಲರ್ ತಂತಮ್ಮ ಸೇನೆವೆರಸು ತಳರ್ದು ಮಿಕ್ಕುಮೀೞು ಪೋಪ ತೇರಂ ಸುತ್ತುಂ ಮುತ್ತಿ ಕೋಲ್ಮಡೆಯಂ ಸುರಿವುದುಂ; ರಕ್ಕಸವಡೆ ಕಣ್ಗೆಟ್ಟು ಕಣ್ಮಾಯಮಾಗಲೊಡಂ ತಡೆಗೊಂಡ ನಡೆಮಾಡದೊಳ್— ಪಲ್ಗಳೆಡೆಯೆಡೆಯ ಕಲ್ಗಳಾಗೆ, ಸೋೞುವ ಜೊಲ್ಲೊಸರ್ಬಿಯ ಮೊದಲಾಗೆ, ಜೊಬ್ಬೆಯ ನೀೞದ ತಳನರ್ಾಲಗೆ ಕೀೞಲಾಗೆ, ಕಿಸುವೆಟ್ಟಿನ ಗವಿಯನನುಕರಿಪ ಬಾಯಂ ತೆಱೆದು ಕೆಮ್ಮೀಸೆಯ ಪೊರ್ದಲೆಯ ಬಟ್ಟಚ್ಚಿಯ ಕಟ್ಟುೞದ

ಡಗೆಯ ಪೇರೊಡಲ ಗೋರರೂಪಿನ ದಾನವಂ, ದಿಗ್ಭಿತ್ತಿಗಳ್ ಬಿರಿವಿನಂ,
ದಿಗ್ಗಜಂಗಳಳ್ಕುವಿನಂ, ದಿಗಧೀಶರ್ ಬೆರ್ಚುವಿನಂ, ಬೊಬ್ಬಿಱಿದು ಮೈಮುರಿದು
ಪರಿದು ಸರಿದು ಬಲ್ಗಣೆಗಳಂ ಪೂಡಿಯುಂ ಮಾರ್ಗಣೆಗಳಂ ಕಡಿದುಂ
ಕಟ್ಟಳವಿಯ ಹರಿಬಂ ನುರ್ಗುನೂಂಕಪ್ಪಿನೆಗಂ ತನಗಂ ತೇರ್ಗಂ ಕಾಪಿಟ್ಟು
ಮುಟ್ಟಯಿಪ ಪ್ರತಿಭಟರಂ ತಡೆದು—ಇರಿಮಿರಿಂ. ಹರಣಂ ಜೋಕೆ! ಎನ್ನ
ಪೋಗಂ ತಡೆಗಟ್ಟಿಯುಃಮೆನ್ನಂ ಗೆಲ್ದುಂ ಬಾೞ್ವ ಗಂಡರುಮೊಳರೆ! ಎಂತೆಂತೊ
ಜಳಿಕರಕ್ಕಸರಂ ಗೆಲ್ದೊಂದು ಟಕ್ಕಿನ ಬಲ್ಮೆಯೆನ್ನೀತೋಳ್ವಲಕೇಂ ಬಾರ್ತೆಯೆ?
ನಿಮ್ಮನ್ನರ್ಗೇಕೆ ಚಲಂ, ಬಲಂ, ದಿಟಂ, ಹಟಂ, ಸಾಸಂ, ಮೋಸಂ, ಬೀರಂ,
ಗೀರಂ. ಕೆಲಸಾರಿಂ: ಅಲ್ಲದೊಡೆ ಬಿಡೆನೀಗಳೆ ಕೊಂದು ಪೋೞಿಸಿ ತಾಳಿಸಿ
೧೦ ಗಮ್ಮನೆ ನಿಮ್ಮನೆಮ್ಮ ಮಾಲಿನಿಯರ್ಗೆ ಬಲಿಗುಡವೆನಲ್ಲದೊಡಾನೆ ನೆತ್ತರಂ
ನಂಜಿ ಕೊಟ್ಟಸಮನಗಿದು ಕರುಳಂ ನುಂಗಿ ನೆಣನಂ ಸವಿದು ಮೆದಳನುಂಡು
ನಲಿವೆನಂತುಮಲ್ಲದೊಡೆ ಸತ್ತ ಮುತ್ತಯ್ಯನ ಹೈತಿಗೆಯನಿಂದೆ ಸಡ್ಡೆಯಿನಾಗಿಸಿ
ಬಂದ ಬೊಮ್ಮರಕ್ಕಸಿಯರ್ಗೆ ನಿಮ್ಮಡಗಿನೆಡೆಗೆಯ್ವೆಂ ಎಂದಂ. ಅದರ್ಕಾ
ಮಱುವಕ್ಕದ ಜೋದರ್ ಕಿನಿಸಿಂ ಮಾರ್ಕೊಂಡು ಕೋಲ್ಗಳಿಂ ಪೂೞ್ದು—
ಎಲೆಲೆ ಸಮ್ಮಂಗುಂದಿದ ಪುಚ್ಛೞಿಯ ಬಾೞ್ಸಬಮೆ! ನರಿಯಂತೆ ನಾಯಂತೆ
ಊಪ್ದೊಡೆ ಬಗುಳ್ದೊಡಕ್ಕುವೆ! ಕಲಿಯಂತೆ ಗಂಡರಂತೆ ಕೈಗುಣಮಂ
ತೋಱುವೇಡಾ! ಓ ನೀನುಮೇಗುವಯ್! ಆೞಿಯು ಕೇೞಿಯು ನಿಮ್ಮನ್ನರೀ
ಆಳ್ತನಂ ಪುಗುತೆಯಿರ್ಕುಂ. ಅಂದಿನ ಮಹಿರಾವಣರಾವಣಕುಂಭಕರ್ಣಾದ್ಯರ
ಸೊರ್ಕುಂ ಜೆರ್ಕುಂ ನಿಮ್ಮವರ ತರಣದ ನೆಲೆಯುಂ ಪೇೞುವೆ! ಚಿಃ! ಮರುಳೆ!
೨೦ ರಾವಣಂ ಮುಂತಪ್ಪ ದೆಸೆಮುಟ್ಟಿನ ಜಸದ ದೈತ್ಯರಂ ಜಪ್ಪಿ ಸೊಪ್ಪಿ
ಸೋವಿದ ಶ್ರೀರಾಮಂ ಬೇಳ್ಪ ಜನ್ನದ ಹಸುವಂ ಕಳ್ದುಯ್ದುಂ ಬಾೞ್ವೆನೆಂದು
ಬಗೆವ ನೀನಾವೊಂ? ಮತ್ತಮಾದಿನದ ಪೆಣ್ಗಳ್ಳನೇನಾದನೆಂದೀದಿನದ
ಹಸುಗಳ್ಳಂ ನೀಂ ಬಗೆಯಲ್ವೇಡಾ! ಎನುತೆ ಜಱಿದರ್. ಆಗಳಸುರಂ ಕಟ್ಟಾ
ಸುರಂ ಕುಂದದ ಕೋಲ್ಗಳಿಸುಗೆಯ ಕೈಚಳಕದಿಂ ಪಗೆಗಳಂ ಘಾತಿಸಿ
ಭೀತಿಸಿ,—ಆನಱಿಯೆನೆ ಎಮ್ಮ ನಿಮ್ಮ ಸಾಹಸದಿರವಂ! ಗೞಪಿದೊಡೇಂ
ಬಾೞ್ತೆಯೊ! ಕೊಡಲಿಯ ಕಾವೆ ಕುಲಕ್ಕೆ ಕೇಡಾದುದಲ್ಲದೆ ಜಗದಱಿಕೆಯ
ಗಂಡನಂ ರಾವಣನಂ ಗೆಲ್ವ ಕೊಲ್ವ ಮಾನವರುಂಟೇ? ಏಂ! ಕಿಱಿದಂಗೆ
ಶೂರ್ಪಣಖೆ ದೂದವಿಯೊಂದು ಪಿಸುಣಾಡಿ ಕೊಂದಳಲ್ಲದನುಜವಿಭೀಷಣಂ
ಚಿದ್ರದಿಂ ತಾನೆ ಕೊಂದನಲ್ಲದುಂಡೊಱಗನುಱುಗಿ ಸೋಂಬಿಂದಿರದೆ
೩೦ ಕೊಂದನಲ್ಲದಾ ತನ್ನ ನೊಸಲಕ್ಕರದೋದೆ ರಾವಣನಂ ಕೊಂದುದಲ್ಲದೆ,

ಪೋ ರಾಮಂ ಕೊಂದನೆ! ನೂಱೇಂ. ಗಾಡಿಯ ವೋಡಿಯ ಕವಡು
ವಲೆಯನೊಡ್ಡಿ ಮಿಡುಕಿನ ಸೆಡಕುಗಾರ್ತಿ ಜಾವಳೆ ಸೀತೆ ತಾನೆ ತನಗೊಲ್ದ
ನೀಱನಂ ರಾವಣನಂ ಕೆಯ್ಯಾಱೆ ಕೊಂದು ಕುಡಿದಳಲ್ಲದೀಕುಱುವಾನಸರೀ
ಮುದವುಂಕಡರೀಬಾನ ಬನ್ನದ ಕುನ್ನಿಮೂಟರ್ ಜೋಟರ್! ಆಃ! ಚಿಃ!
ಕೊಂದರೆ! ಅಂತಿರೆಯುಂ ತಾಂ ತಾನೆ ಪೊಂದಿದ ರಾವಣನಂ ಕೊಂದೆವೆಂದೆ
ಬಗೆದುಮಾತನ ಬರ್ದುಗೆಯ ಶಾಂತಿಗೆಂದಾತಗೆ ಮಾಳಯುಮೆನೆ ನೀಂ
ಮಾಟ್ಪ ಜನ್ನದ ಹಸುವಂ ಪಿಡಿದೊಡೆ ನಿಮಗೆ ಮುನಿಸಾಯ್ತು! ಬೇಡ!
ಮಾಣಿರೆ! ಇನಿತುಂ ಬವಣೆಯೇಕೆ! ಅಂತುಟೊದವಿದ ದೋಸಕ್ಕೆ ನಿಮ್ಮನೆ
ಕೊಂದು ಕೊಲೆಗೆ ಕೂಟಿಕ್ಕುವೆಂ. ಎನ್ನ ಕೆಳೆಯನಂ ಕೊಂದ ನಿಮ್ಮವರಂ
ಬಿಡುವೆನೆ! ಎಂದಾರ್ಭಟಿಸಿದಂ. ಮತ್ತಮನಿತಱೊಳಾತನಂ ಪ್ರತಿಭಟಿಸಿ ೧೦
ಪುಷ್ಕಲಾದ್ಯರ್ ಬಾಯ್ಗೊರ್ವಿನ ಸೊರ್ಕಿನ ದಾನವಂಗೆ—ಎಲೆ ಮೈಗಳ್ಳ!
ನಿನ್ನ ಕೆಳೆಯನೆಂತೆಂತೊ ಸತ್ತು ಮಿತ್ತುವಿನೂರ ಚಾವಡಿಗೆ ಸಂದು ಬಲದೊಳ್
ಗದ್ದುಗೆಗೊಂಡರಸಾಳ್ವನಂತಿರೆ ನೀನೀ ಇಸ್ಸಿ! ಪಾಟ್ಗೆಟ್ಟ ನಾಡೊಳಿರ
ಲಕ್ಕುಮೆ! ಪೋ, ನಿನ್ನನುಮನಾಪೊಟಲ್ಗೆ ಚಿಕ್ಕರಸುತನಕ್ಕಟ್ಟುವೆವೆಂದಕ್ಷಯ
ಬಾಣಂಗಳಂ ಶರಾಸನದೊಳ್ ತೊಟ್ಟರ್. ಇಂತಾಗಲೊಡಂ ವಿದ್ಯುನ್ಮಾಲಿ
ತೇರಿನಿಟಿದು ಮಾಱಾಂತ ಮಿತ್ರಭಟರ ಕೋಲ್ಗಳನನಿತುಮಂ ತಾನೊರ್ವನೆ
ತಡೆದುಂ ಪಿಡಿದುಂ ಕಡಿದುಂ ಪ್ರಳಯಭೈರವನಂತಿರಾಜಿಯೊಳ್ ಕಡುಕೆಯ್ದು
ಅಡಿಗಡಿಗೆ ಗುಡುಗುಡಿಸಿ ಬೀದಿವರಿಯುತೆ ಸುರರ್ ಬೆಕ್ಕಸಂಬಡುವಿನಂ,
ಪಾಟಿಯಿಂ ಪರಸೈನ್ಯಮಂ ಕೋಳುಗೊಂಬುದುಂ—ಒರ್ದೆಸೆಯೊಳ್ ಪುಷ್ಕಲ
ನಿಸುಗೆಯ ಕೋಲ ಸೋನೆ, ಮೇಣೊಂದೆಡೆಯ ಲಕ್ಷ್ಮೀನಿಧಿಯ ಪೊಯ್ಯ ೨೦
ಗದೆಯ ಬಿಱುಗಾಳಿ, ಮತ್ತಮೊಂದೆಡೆಯೊಳ್ ಪ್ರತಾಪಾಗ್ರ್ಯನ ಬೀಸಿನ
ಸುರಗಿಯ ಮಿಂಚು, ಪೆಱತೊಂದೆಡೆಯೊಳಣುವ ನೀಡಿನ ಕಲ್ಗಳ ಕಲ್ಮಱೆ,
ಬಟಿಕ್ಕಮೊಂದೆಡೆಯೊಳ್ ಸುಭುಜಸುಮದಪ್ರಭೃತಿ ವೀರರಾರ್ಭಟೆಯ ಸಿಂಹ
ನಾದದ ಮೊಟಗು, ಮುಂಗಾರಂ ಕೀಟ್ಮಾಡಲೊಡಂ; ಶತ್ರುಹನ ಬಲದ
ಬೀರದ ಜೋದರ್ ಕಳನೊಳ್ ಕಳಸೊಳ್ ತಾಗಿದರ್. ಅಂತಿರ್ಕಡೆಯುಂ
ಬೆರಸೊಳಗೊಳಗೆ ಪಳಂಚುತಿರೆಯಿರೆ ರಕ್ಕಸನ ಕೈಯ ಕೋಲುಂ, ಮೆಯ್ಯುವು
ತೆಯುಂ, ತಲೆಯ ಸೀಸಕಮುಂ, ಕಡಿವಡೆದುದು; ಮೊಗದ ಕಳೆ ಪಗಲ
ಪೆಱೆಯ ಕಳೆಗೆ ದೊರೆವರೆ, ಬಗೆಯ ಕಾಯ್ಪು ಕಡೆವಗಲ ಮುತ್ತ ನೇಸಱ
ಕಾಯ್ಪಿಂಗೆ ಪಾಸಟಿಯಾಗೆ, ತೋಳ ಬಲಂ ಮರನ ತೋಳ ಬಲಕ್ಕೆ
ಪೋಲ್ತರೆ, ರಕ್ಕಸಂ ಸೋಲ್ತು ಸುಣ್ಣದೊಳಾದಂ. ೩೦

ಈತೆಱನೊಳ್ ರಕ್ಕಸನ ಹರಿಸಂ ತರಿಸಮಾಗೆ ತಱಿಸಂದು ಮನದೆ ಮಾಯೆಯಂ ಬಗೆದು ಕವಡುಬಿಜ್ಜೆಯನೊಡ್ಡಿ ನಿಲ್ವುದುಂ, ಪುಷ್ಕಲಂ ನಾರಾಯಣಾಸ್ತ್ರದಿಂ ಸೆಳೆದಿಸುವುದುಂ, ಮಾಯಂ ಕಣ್ಮಾಯಮಾದತ್ತು. ಆಗಳ್ ರಕ್ಕಸಂ ಬಕ್ಕಂಬಯಲೊಳಾಗೆ ಅಣುವನ ಗುರ್ದೊಂದು, ಜನಕಜನ ಗಜೆಯು ಬಡಿಯೆರಡು; ಪ್ರತಾಪಾಗ್ರ್ಯನ ಬಾಳ ಕಡಿತಂ ಮೂಱು, ಭಾರತಿಯ ಬಿಱುಗಣೆಯ ಪೊಯ್ ನಾಲ್ಕು, ಮಿಕ್ಕ ರಾಯರ ಇಟ್ಟಿಯ ಕೊಂತದಿಱಿತಮೈದು, ಇವಱಿನೈದಱಿಂ ರಕ್ಕಸಂ ಪಂಚತ್ವಮನ್ಯೈದಿದಂ. ಸುರದುಂದುಭಿನಿನಾದಂ ದಿಗ್ಗಜಂಗಳ ಬೃಂಹಿತಂ ಸಪ್ತಶರಧಿನಿರ್ಘೋಷಂ ಮೂವಡಿಯಿಂ ಪೆರ್ಚಿದುದು; ಸುರರುಂ ಕಿನ್ನರರುಂ, ನರರುಂ, ವಾನರರುಂ ಪೊಗರೇಱಿ ಕಳಿವೆರ್ಚಿದರ್.

೧೦ ಎನ್ನರೆವೊಡಲ ಮುದ್ದುಮೊಗದ ಸಿಂಗಾರಿ! ಎನ್ನ ಪೊನ್ನಪದಗದ ರನ್ನದಾರದ ಬಜ್ಜಳೆ, ನೀಱೆ! ಇಂತಿನಿತೊಂದು ಮಾಣ್ಕೆಯಿಂ ಮಡಿದಾಂಗೊಟಗೆಂತಂತು ಪೋಟ್ಟಿರ್ಕಡಿವೋಗಿ ರಣದೊಳ್ ಕೆಡೆದ ದಾನವನೊಡಲಂ ಕಾಗೆಗೂಗೆಗಳ್ ನರಿನಾಯ್ಗಳಾರಯ್ಯುತಿರ್ಪುದುಮಿತ್ತಲ್ ಹತಶೇಷರಪ್ಪ ರಕ್ಕಸರ್ ರಣಕ್ಕೆ ಬೆಂಗೊಟ್ಟೋಡಿ ತಮ್ಮೆಡೆಯಂ ಪೊರ್ದಿದರ್.

ಮತ್ತಮಾಗಳ್ ತಮ್ಮನೆ ಒಲ್ದೊಱಲ್ದು ಬೆಂಬಿಡಿದ್ಯೆದಿರ್ಪ ವಿಜಯಶ್ರೀಯಂ ತಳ್ಕೈಸಿ ನೋಡಿ ಕೂಡಿ ಹಯಂಬೆರಸು ಜೋದರೆಲ್ಲರ್ ಶತ್ರುಹನೊಂದಾಣತಿಯೊಳನುವಱಿತು ಬಡಗದೆಸೆವಿಡಿದು ನಡೆಯುತುಮಿರ್ದರ್. ಆಕಾಲದೊಳ್—

ಗೊಜ್ಜಿಗೆಗೆಳಜವ್ವನಂ, ಮಲ್ಲಿಗೆಗೆ ಮೊಳೆ ಜವ್ವನಂ, ಸುರಯಿಗೆ ನೆರೆಜವ್ವ
೨೦ ನಂ, ಪಡ್ಡಳಿಗೆ ತುಂಬುಜವ್ವನಂ, ಕೋವಳೆಗೆ ಮಿಾಂಟುಜವ್ವನಂ, ತಾವರೆಗೆ ಏಱುಂಜವ್ವನಮೊದವಿತ್ತು. ಮತ್ತಂ ಗೋಣಿಗೆ ಪಣ್ಣಂ, ಮಾಮರಕ್ಕೆ ಪೂವಂ, ಬಕ್ಕೆವಲಸಿಂಗೆ ಕಳಿಕೆಯುಂ, ತೆಂಗುಕೌಂಗುಗಳ್ಗೆ ನಿಡುಗೊನೆಯುಂ ಪತ್ತಿಸಿ ತೆತ್ತಿಸಿ ಬೀಸುವ ಪಲಗಾಳಿ ಕಟಿತು ಚಳಿತು ಬೆಂಗುಡುವಿನೆಗಂ ನುರ್ಗಿ ತಳ್ದ್ರೊಯ್ದು ಪಳಂಚಲೆದುದು. ತಳ್ತ ಬಡಗಣ ಕುಳಿರ್ಗಾಳಿ ಆಗಳೊತ್ತಿ ನಿಂದ ಕೊಳನ ನೀರ್ಗೆ ಬಿಸುಪುಂ, ಪೊತ್ತಿ ಪೊಗೆವ ಕಿಚ್ಚಿನ ಜಾಲೆಗೆ ತಣ್ಪು ಮೊರ್ವೊದಲೊಳೆ ತಲೆದೋಱಿದತ್ತು. ಮೇಣುಂ ಬಂದು ಬಂದಿಗೊಂಡ ಕಡುಚಳಿ ನಾಡಿಗರಂ ಪಿಡಿದುಂ ಜಡಿದುಮಳುಕಿಸಿಯುಂ ನಡುಗಿಸಿಯುಂ ತಲೆವಾಗಿಸಿಯುಂ ಗುರ್ದಿಯುಂ ತಿರ್ದಿಯುಂ ಕೆಡೆಪುವುದುಂ, ಸುಗಿದು ಸುರುಂಟಿ ಮುರುಂಟಿ ಮರವಟ್ಟು ಮೂಗುವಟ್ಟು ಮೆಯ್ಗಟ್ಟಸಕಳಿದರೆಲ್ಲರ್.
೩೦ ಪೊಸವರೆಯದ ಜವ್ವನಿಗರ್ ತಂತಮ್ಮ ಕಾದಲೆಯರ ತೋಳತಳ್ಕೆಯೊಳೆಸೆದರ್;

ಮುದುಪರಂದು ಸುಡುಗಿರ್ಚಿನ ಮಱೆಯಂ ಸಾರ್ದು ಗುಱುಗವ್ಮೆ ನಿರ್ದಿರಿ ರುಳುಂ ಪಗಲುಂ.

ಅಂತುಮಲ್ಲದೆಯುಮೈಕಿಲ್ಗಂಜಿ ಸಂಜುಂಡಂ ಅಸವಸದಿಂ ಪೊತ್ತ ಪೊಱೆಯಂ ಪೆಱೆಯಂ ಬಾನ್ಗಿಟ್ಟು, ನೆತ್ತಿಯ ಗಂಗೆಯಂ ನೆಲಕಿಟಿಪಿ, ತಾಂ ಪಣೆಯ ನಡುಗಣ್ಣ ಕಿಚ್ಚನುಜ್ಜಳಿಸಿ ಸಜ್ಜಿನ ಬೆಂಬೂದಿಯಂ ಮೆಯ್ಯೆ ಪೂಸಿ ದಟ್ಟದೊವಲಂ ಪೊದೆದಗಜಿವೆರಸು ಬೆರೆವೊಡಲೊಳಿರ್ದಂ. ಚಳಿಗಾರದೆ ನಾರಾಯಣನುಂ ಲಕ್ಷ್ಮಿಯ ಬಲ್ಮೊಲೆಗಳ ಬಿನ್ನಗಳೆಡೆಯ ಬಿರಿಕಿನೆಡೆಯೊಳ್ ಬಿನ್ನನಡಂಗಿ ಬೆಳ್ವಟ್ಟೆಯ ಮುಸುಂಕಿನೊಳಿರ್ದಂ. ಪೆರ್ಚುಗೆಯ ಕಡುಹಿವದ ಕೋಡಿಂಗಗಿದು ಭಾಸ್ಕರಂ ತನ್ನ ನಚ್ಚಿನ ಕಮಲಿನಿಯಂ ನೀರ್ವಾಸಸೆಯಂ ಬಿಟ್ಟು ಕೈಗೆಟ್ಟು ದೆಸೆಗೆಟ್ಟು ತುರಿಪದಿ ನೋಡಿ ನೋಡಿ ಪಡುವೆಟ್ಟಿನ ಕೊಂಬಿನ ಗುಹೆಯಂ ಸಾರ್ದು ಸೇರ್ದು ಸಂಜೆವೆಣ್ಣ ಪೊಸಕೂಟದೊಳ್ ಪಿರಿದುಮಿರ್ದಂ. ೧೦

ಇಂತು ಬಂದೊದವಿದ ಚಳಿಗಾಲದೊಳ್ ರಾಘವನ ಯಜ್ಞತುರಂಗಮಂ ಅರಣ್ಯಕನೆಂಬೊರ್ವ ಕಿತ್ತಡಿಯ ಪುಣ್ಯಾಶ್ರಮಮಂ ಪುಗುತರ್ಪುದುಂ; ಕಂಡು ಶತ್ರುಘ್ನಾದ್ಯರ್ ಮುನಿಯ ದರ್ಶನಕೆಂದೊಳಪೊಕ್ಕು ಮುನಿಗೆಱಗಿದರ್. ಆಗಳ ರಣ್ಯಕನಭ್ಯಾಗತರಂ ಮನ್ನಿಸಿ ಸರ್ವರನಾತಿಥ್ಯದಿಂ ಸತ್ಕರಿಸಿ ಶ್ರೀರಾಮಸತ್ಕಥಾ ವಿನೋದಗೋಷ್ಠಿಯೊಳ್ . . .

ಮನೋರಮೆ—ಎನ್ನ ಚೆನ್ನಿಗ! ಆತಿಥ್ಯಮೆಂದೊಡೇಂ? ಬಱಿದೆ ಬಾಯುಪ ಚಾರಮೆ?

ಮುದ್ದಣಂ—ಅಲ್ತಲ್ತು; ಬಾಯ ಉಪಚಾರಮಲ್ತು. ಬಂದರ್ಗೆ ಕೈಗೆ ಕಾಲ್ಗೆ ನೀರಿತ್ತು ಕುಳ್ಳಿರಿಸಿ ಸವಿಗೂಟನಿಕ್ಕಿ ಪೂವಿಂ ಸಿಂಗರಿಸಿ ಬಾವನ್ನದಿಂ ಸೊಗಸುಗೆಯ್ದು ಒಡನಿರ್ದು ನುಡಿದು ನಡೆದು ಮನ್ನಿಪುದು. ೨೦

ಮನೋ—ಅಂತಿರ್ಪುದುಂ, ಶತ್ರುಘ್ನನ ಸಾಯಿರ ಸಾಯಿರ ಲೆಕ್ಕದಿನಿವಿರಿದು ಪಡೆಗರಣ್ಯಕಂ ಕೂಟ್ನೀರಿತ್ತು ಸಮ್ಮನಿಸಿದನೆ?

ಮುದ್ದ—ಅಪ್ಪುದಪ್ಪುದು. ಅನಿಬರುಮಂ ಯಥೇಚ್ಛಂ ಮೃಷ್ಟಾನ್ನ ಭೋಜನದಿಂ ತಣಿಪಿದಂ.

ಮನೋ—ಎನಗಿದಚ್ಚರಿ. ಎಂತುಟಾರ್ತಂ?

ಮುದ್ದ—ಏಂ! ಮುನಿಗಳೊಂದು ಜಪದ ತಪದ ಮಂತ್ರದ ಬಲ್ಮೆಯೇಂ ಕಿಱಿದೆ! ಬೇಡಿದ ಪುರುಳನುಱಿದಿಂ ತಂದೀಗುಂ.

ಮನೋ—ಅಂತುಟೇಂ ಗನಂ! ಆವುದೊ ಮಂತ್ರಂ? ೩೦

ಮುದ್ದ—ಆವುದೇಂ! ಏಕಾಕ್ಷರಿ, ದ್ವ್ಯಕ್ಷರಿ, ತ್ರ್ಯಕ್ಷರಿ, ಚತುರಾಕ್ಷರಿ, ಪಂಚಾಕ್ಷರಿ, ಷಡಕ್ಷರಿ, ಮುಂತಪ್ಪ ಪ್ರಸಿದ್ಧಮಂತ್ರಂಗಳೊಳವಲ್ತೆ.

ಮನೋ—ಇವಱಿಂ ಜಪಿಸಿದೊಡೇನಕ್ಕುಂ?

ಮುದ್ದ—ಈಮಂತ್ರಂಗಳಂ ಬಿಡದೆ ಜಪಿಸಿ ಸಿದ್ಧಿವಡೆದೊಡೆ ತತ್ತದಭಿಮಾನಿ ದೇವತೆಗಳ್ ಮೆಯ್ದೋಱಿಯುಮೆಳಸಿದರ್ಥಮನಿತ್ತುಂ ಪೋಕುಂ.

ಮನೋ—ಓ! ಇನಿತೊಂದು ಜಪದ ಬಲ್ಮೆ ನೆರಮಿರ್ಪಿನಂ ಪೆಱತೊಂದಱ ಗೊಡವೆಯಿಲ್ಲದಿರ್ಕುಂ ತಾಪಸರ್.

ಮುದ್ದ—ಅಪ್ಪುದಪ್ಪುದು; ತಪ್ಪೇಂ?

ಮನೋ—ಅಂತದಿರ್ಕೆ. ನಿನ್ನನ್ನರಪ್ಪ ಕಬ್ಬಿಗರ್ ಮನೆವಾಪ್ತೆಯೊಳಿನಿಸೊಂದುಂ ಗೊಡವೆಗೊಳ್ಳದೆ ಕೆಮ್ಮಕೆಮ್ಮನೆ ಪಾಟ್ಟಿತೆಯ ಕಬ್ಬದೊಳೇವೊಟ್ಟುಂ ಬೆಮೆಗೊಂಡಿರ್ಪರಲೇ. ಅವರ್ಗೇಂ ಬಟ್ಟೆಯೊ? ಉಣಲೇಂ, ತಿನಲೇಂ? ಅಂತಿರೊಂದು ಜಪಮಂ ಪಿರಿಯದವಸಿಗಳತ್ತಣಿನುಪದೇಶಂಗೊಂಡೊಡಾಗದೆ!

ಮುದ್ದ—(ಮುಗುಳ್ನಗೆಯಿಂ) ಏಂ! ಎಮ್ಮವರೊಂದಿರವಿಗೆ ನಗುವಾ? ಆಃ! ಎಮ್ಮನ್ನರಪ್ಪ ಕಬ್ಬಿಗರ್ಗೇಂ ಕೊಱತೆಯೊ! ತಾನೆ ಬಯಸಿದೊಡವೆಯನಾಗಳೆ ತಂದೀವ ಮಂತ್ರದ ಜಪದೊಂದು ನೆರಂ ತಮ್ಮೊಳೊಂದಿರದೊಡಲ್ತೆ ಕಾಡ ಜೋಗಿಗಳತ್ತಣಿನುಪದೇಶಂ. ನಾಡಂ ಕಾಡಂ, ಕಾಡಂ ಬೀಡಂಗೆಯ್ವೊಂದು ಪೆರ್ಮೆಯ ಬಲ್ಮೆಯ ಕಬ್ಬಿಗರೇಂ ಕಕ್ಕುಲಿತೆಯ ಮುದುದವಸಿಗಳತ್ತಣಿಂ ಪಿರಿಯರಾಗರೆ! ನುಡಿವರೇನದುವೆ ಪುರುಳ್, ಪಿಡಿವರೇನದುವೆ ತಿರುಳ್! ಪಲವೇಂ, ಕೆಲವೇಂ? ತಮ್ಮೊಂದೆನುಡಿಯ ಬಲ್ಪಿಂ ಮೂಜಗಮುಮನಱಿಯಿಸುವ ಪೊಗಟ್ವ ಕೊಳ್ವಾಳ್ವ ತಾಳ್ವ ತೂಳ್ವ ಪೂಟ್ವ ಪೇಟ್ವ ಬಾಟ್ವ ಸಿಂಗರದ ಬಣ್ಣಗಬ್ಬಿಗರೆಮ್ಮ ತೆಱನನಿನ್ನುಂ ನೀನಱಿಯಯ್.

ಮನೋ—(ಬಿಸವಂದಂಗೊಂಡು) ನಿಮ್ಮವರ್ಗಮಂತಿರೆ ಮಂತ್ರಂ ಸಿದ್ಧಿವರ್ಕುಮೆ?

ಮುದ್ದ—ತಡೆಯೇನಕ್ಕೇಂ!

ಮನೋ—ನಿನ್ನೊಳವೊಳವೆ?

ಮುದ್ದ—ಎನ್ನೊಳಿಂತಿದು ಪಾಸುವೊಕ್ಕು.

ಮನೋ—ಆಃ! ನೀನುಂ ಬಲ್ಮೈಮೆಗಾಱಂ. ನಿನಗಾರತ್ತಣಿನೆಂದುಪದೇಶಮಾಯ್ತು?

ಮುದ್ದ—ಗುರುವತ್ತಣಿನಂದೆಳವೆಯೊಳೆ.

ಮನೋ—ಎನ್ನೆಱೆಯ! ಅದಾವುದೊ ಮಂತ್ರಮೆನ್ನೊಳುಸಿರ?

ಮುದ್ದ—ಆಃ! ಆಃ! ಒಳ್ಳಿತೊಳ್ಳಿತು!! ಮಂತ್ರಂ ಗಡ! ತನಗೊರೆವುದು ಗಡ! ಚಿಃ! ಚಿಃ! ಪೆಣ್ಗಳ್ಗೀಮಂತ್ರೋಪದೇಶಂ ಸಲ್ವುದೆ?

ಮನೋ—ಅನಱುಯೆನೆ! ನಿನ್ನತ್ತಣಿನುಪದೇಶಂಬೇಡುವೆನೆ! ನೀನಾಗಳೆಂದ ಮಂತ್ರಂಗಳೊಳಾವುದದಱ ಪೆಸರೇನೆಂದೆ ಕೇಳ್ದೆಂ.

ಮುದ್ದ—ಆಗಳೆಂದ ಮುನಿಗಳ ಮಂತ್ರಂಗಳೊಳಲ್ತು. ಎಮ್ಮ ಮಂತ್ರಂಗಳ ಬಗೆ ಬೇಱೆ, ಮೂಱೆರಡಕ್ಕರದ ಮಂತ್ರಂಗಳೆಮಗಕ್ಕುಮೆ! ಎಮ್ಮ ತಂತು ಕಿಱಿದಲ್ತು ಬಲ್ಪಿರಿದು. ಒಂದಕ್ಕರಮಲ್ತೆರಡಲ್ತು ಮೂಱಲ್ತು, ನಾಲ್ಕೈದಲ್ತು, ಆಱುಮಲ್ತು. ಏೞಕ್ಕರದ ಬೀಜಮಂತ್ರಂ. ಅಂತದಱಿಂ ಸರ್ವಮಂತ್ರಂಗಳ್ಗೆ ತಲೆಯೊಳಿರ್ದು ಮೇಲೆನಿಪ್ಪ ಸಪ್ತಾಕ್ಷರೀಮಂತ್ರಮೆಂದು ಪೆಸರ್.

ಮನೋ—ಹಾಹಾ! ಆಮಂತ್ರಕ್ಕಭಿಮಾನಿದೇವತೆಯಾವುದು? ಮುನ್ನ ಮಾರಿದಂ ಜಪಿಸಿ ಸಿದ್ಧಿಗಂಡರ್? ೧೦

ಮುದ್ದ—ಪೋಪೋ! ಇಂತಿವಱಿಂ ಕೊಂಡೇಂ ಕಜ್ಜಂ?

ಮನೋ—ಇರ್ಕೆ, ಕೇಳ್ವೆಂ.

ಮುದ್ದ—ಅಂತಾದೊಡೆ ಕೇಳ್ ಪೇೞ್ವೆಂ. ಇಂತೀಪರ್ಟ್ಟ ಮಂತ್ರದಧಿದೇವತೆ ಜೇಷ್ಠೆ. ಮುನ್ನಮೀಶ್ವರಂ ತನ್ನೊಂದು ಲೀಲೆಯೊಳ್ ಜಪಿಸಿ ಸಿದ್ಧಿಗೊಂಡನಂತದಱಿನಾತನೆ ಋಷಿ.

ಮನೋ—ಓಹೋ! ಇಂತುಟೆ ಮಂತ್ರದೊಂದು ಮ್ಮೆಮೆ! ಎಲೆ ರಮಣ! ನಿನ್ನಡಿಗಳ್ಗೆಱಗುವೆಂ. ಎನ್ನತಿನಿತೊಂದು ಬಿನ್ನಪಂ. ಅಂತು ಸಂದ ಸಿದ್ಧಿಯ ಮಂತ್ರಮಾವುದೊ ಕೂರ್ಮೆಯಿಂ ತಿಳಿಯೆ ಪೇೞ್.

ಮುದ್ದ—ಆಗಳೆ ಪೇೞ್ದೆನಲ್ತೆ ಸಪ್ತಾಕ್ಷರೀಮಂತ್ರಮೆಂದು. ೨೦

ಮನೋ—ಅಂತು ಪೆಸರನಲ್ತು, ಮೂಲಮನೆ ಕುಱಿತೆನ್ನೊಳಾಡಿ ತೋೞ.

ಮುದ್ದ—ಅಬ್ಬಾ! ಪೆಣ್ಣೀಂ ಗಡುಸುಗಾರ್ತಿಯೊ! ಆಗಳ್ ಪೆಸರೇನೆಂದಳ್; ಈಗಳ್ ಮೂಲಮಂ ಕೇಳ್ವಳ್. ಇನ್ನೇವಳೊ? ಮೂಱೆಡೆಯ ಜನ್ನದಾರದಾಣೆ! ಉತ್ತರಿಗೆಯಾಣೆ! ಆಗದಾಗದು. ಕೇಳ್ವುದರ್ಕೆ ಪೇೞ್ವುದರ್ಕೆ ನಿಮಗಧಿಕಾರಮಿರದು. ಕಣ್ಗೆ ಕಾಲ್ಗೆ ಕೇಡು!

ಮನೋ—ಕಿವಿಯಿಂ ಕೇಳ್ವುದಱೊಳೇಂ ದೋಸಂ? ಅಂತೀಪರ್ಟ್ಟ ವೇದಮನಾದೊಡಮೋದುವೆಡೆಯೋಳ್ ಕೇಳದೆ ಪೆಣ್? ನಿನ್ನೊಳಮೇಂ ಜಂಬಮೋ!

ಮುದ್ದ—ವೇದಮಂತ್ರದ ಬಗೆ ಬೇಱೆ. ಇದಱ ಪರಿ ಬೇಱೆ. ಅಜಗಜಾಂತರಂ. ಅದಱೊಳಂ "ಗೂಢಾದ್ಗೂಢತರಂ ಮಂತ್ರಂ" ಎಂದು ಪೇೞ್ದುದುಂಟು. ೩೦

ಅದುಕಾರಣಂ ನಾಂ ಪೇೞಲಾಗದು; ನೀಂ ಕೇಳಲುಮಾಗದು. ಮುಂತಣ ಕತೆಯಂ ಕೇಳ್. ಮತ್ತಮರಣ್ಯಕಂ ಶತ್ರುಘ್ನಾದ್ಯರೊಳ್ . . .

ಮನೋ—ತೆಗೆ ತೆಗೆ! ನಿನ್ನ ಮುಂಗತೆಯುಂ ವಿತೆಯಂ. ಅದೇಂ ಮಂತ್ರಮೊ ಕೇಳ್ವೆಂ. ಕೊರಲಾಣೆ, ಉಂಗುರದಾಣೆ, ಪೇೞ್ದಲ್ಲದೆ ಬಿಡೆಂ—ಎಂದು ಮೆಯ್ಯಿಕ್ಕುವಳ್.

ಮುದ್ದ—ಏಂ ಚಲಮೊ ಚಪಳೆಗೆ! ಪೇೞ್ವೆನೆಂದೊಡೆ ಕೇಳಳ್. ಆಃ! ಪೆಱರೊಳೊರೆದೆವ್ವಿಮಾ ಬೀಜಮಂತ್ರಮನೆಂತು ಪೊಲೆಗಿಡಿಪೆನೊ! ಛೀಃ! ಎಳವೆಂಡಿರ ಕೈಯೊಳಿರ್ಪ ಕಬ್ಬಿಗರ ಬಾೞ್ಕೆಯೆ ದೂಷ್ಯಂ. (ಎಂದು ನೀಡುಂ ಭಾವಿಸಿ) ಎಲೆ ಪೆಣ್ಣೆ! ನೀನಾರೊಳಮೆಂದೆಂದಿಂಗುಮುಸಿರಲ್ವಾರದು. ಜೋಕೆ!

೧೦ ಮನೋ—ಎಂದುಮೆಂತುಮುಸಿರೆನಾಡೆಂ.

ಮುದ್ದ—ಅಂತಾದೊಡಿಂತಿದು, ಕೇಳ್. ಭ . . . ವ . . . ಪೆಱರೊಳಾಡೆನೆಂಬ ನಂಬುಗೈಯಂ ಪೊಯ್.

ಮನೋ—ಇದೆ, ಪಿಡಿ ನಂಬುಗೈಯಂ, ನಿನ್ನಾಣೆ, ಕುಲದೈವದಾಣೆ! ಎಂದುಂ ಪೆಱವರೊಳೊರೆಯೆಂ.

ಮುದ್ದ—ಉಂ! . . . ಭವತಿ . . . ಭಿ . . . ಪೆಣ್ಗಳಂ ನಂಬಲಾಗದೆಂಬರ್ ಬಲ್ಲರ್. ನೀನೆಂತೊ ಮಱವೆಯೊಳ್ ಪೆಱರೊಡನುಸಿರ್ದುದು ಗುಟ್ಟಂ ಬಿಟ್ಟೊಡೆಮ್ಮನ್ನರ ಬಾೞ್ ಪಾೞಕ್ಕುಂ.

ಮನೋ—ಆನೇಂ ಮೋಡಿಸುಪೆ! ಪೋ! ತನ್ನಾಣೆ, ಕಣ್ಣಾಣೆ, ಕೇಳ್ವೆಂ.

ಮುದ್ದ—(ಎಕ್ಕಟಿಯೊಳ್) "ಭವತಿ ಭಿಕ್ಷಾಂ ದೇಹಿ" ಎಂಬುದಿದುವೆ

೨೦ ಕಬ್ಬಿಗರ್ಗೆ ಸಿದ್ಧಿಸಿದ ಪೆರ್ಮೆಯ ಸಪ್ತಾಕ್ಷರೀಮಂತ್ರಂ. ಆರೊಳಮನುಸಿರದಿರ್.

ಮನೋ—(ಅರೆಮುನಿಸಿಂ) ಪೋ ಮಾಣೆಲೆ ರಮಣ! ನಿನ್ನ ನುಡಿಯಂ ಸಾಜಂ ನಿಕ್ಕುವಮೆಂದೇ ಬಗೆದೆಂ. ಈತೆಱನ ಮಾಟದ ಕವಡುನುಡಿಯ ಕೊಂಕೆಂಬುದನಱಿಯದಾದೆಂ. ನೀಂ ಕಬ್ಬಿಗನೊ, ಸಬ್ಬವಕಾಱನೊ? ನಿನ್ನೀ ಕಬ್ಬದ ಸೊಗಸನೆಮ್ಮನ್ನರಪ್ಪ ಜಾಣೆಲಿವೆಣ್ಗಳೆ ಕೊಂಡಾಡುವರಲ್ಲದೆ ಬಲ್ಲರೇನೊಲ್ವರೆ?

ಮುದ್ದ—ಸಾಲ್ಗುಮೀಪರಿಹಾಸಂ. ಮುಂಗತೆಯಂ ಕೇಳ್.

ಇಂತೀ ಮಾೞ್ಕೆಯಿನರಣ್ಯಕಂ ಶತ್ರುಘ್ನಾದಿವೀರರನುಪಚರಿಸಿ ಕುಳ್ಳಿರಿಸಿ ಮತ್ತಂ ಶ್ರೀರಾಮಗುಣಾನುವಾದದೊಳ್—ಏನೆಂಬ ಮಾಟದಾಟಮೊ! ತಾನೆ

೩೦ ಯಜ್ಞಪುರುಷನಿರೆ ಬೇಳ್ವ ಜನ್ನಮೇವುದೊ! ಜಗದ ಮಾಯೆಗಿಂತಿದಂ

ತೋಱುವನಕ್ಕುಂ. ರಕ್ಕಸಗೊಲೆಯತ್ತಣಿಂ ತನಗೊಂದು ಪಾತಕಂ ಗಡ! ಶಾಂತಿ ಗಡ! ಕುದುರೆ ಗಡ! ಕಾಣ್ಕೆ ಕಪ್ಪಂ ಗಡ! ಬಡರಾಯರೊಳ್ ಪೋಣರ್ಕೆ ಗಡ! ನಾಡ ಮಾನಸರ ಪಾಂಗಿನೊಂದು ನಡೆವಳಿಯ ರಾಮಸಿರವಿ ಗೇನೆಂಬೆನೋ! ಏನಾನಱಿಯೆನೆ, ಮುನಿ ಪೇೞನೆ, ಜಗದ ದೈವಮೆಂಬುದನೆಂದಂ. ಇಂತೆಂಬ ಮುನಿಯ ನುಡಿಗೆ ಸಂತಸಂಗೊಂಡು ಶತ್ರುಘ್ನಾದ್ಯರ್—ಆವಂ ಮುನಿ, ಏವಗೆಯೊಳೆಂದನೆಂದು ಬೆಸಗೊಳಲೊಡಮರಣ್ಯಕನಿಂತು ಕತೆಗೆ ಮೊದ ಲ್ಗೆಯ್ದನದೆಂತೆಂದೊಡೆ :—

ಜಗದ ಜಂಜಡದ ಕವಡುಮಾಯೆಯ ಬಿಗುಗಟ್ಟಿಂ ಕಟ್ಟುವಡೆದಾಂ ಮುನ್ನ ಮಾಗಳಾಗಳ್ ಪಲದಿನದ ಪಿರಿಯ ಮುತ್ತಜಾಣ್ಮೆಯ ಬಲ್ಲಿದರ ನೆರೆಯ ಮೞೆಯ ನೆರವಿಂ ಪಾರುತುಮಿರ್ಪೊಡಾದೆಂ. ಅಂತವರೊಳಜ್ಜಂ ಲೋಮಶ ನೊರ್ವನಪೂರ್ವಂ ಗುರುವೊಲ್ದಿರ್ಕುಂ. ಇಂತಿರ್ಪುದುಮಾತನ ಸನಿಯದೊಳ್ ಕೇಳ್ದುಂ ಬಾೞ್ದುಮಿರೆಯಿರೆ ದೈವದತ್ತಣೊಂದು ಜಾಣ್ಮೆ ದಿನದಿನಕೆ ಮನಕೆ ನಲ್ವಾಗಲೊಡಮಾತನಂ ಬಗೆಮಿಗೆ ಮತ್ತಂ ಮತ್ತಂ ಜಗದ ದೈವದಿರವಂ ಬೆಸಗೊಳುತುಮಿರ್ದೆಂ. ಆಗಳ್ ಕೂರ್ಮೆಯಿನೆನಗೆ ಬಿತ್ತರಿಸಿದನಿಂತು. ಕೇಳೆಲೆ, ಶಿಷ್ಯೋತ್ತಮ! ಆದಿಮಧ್ಯಾಂತಂಗಳಿಲ್ಲದ ಮಾಯೆಗೆ ಮರುಳಾಗದ ಪರ ಮಾತ್ಮಂ ದೈವಮಕ್ಕುಂ. ತನ್ನೊಂದಾಣತಿಯೊಳ್ ಜಗಮುಂ ಪುಟ್ಟಿಕುಂ ಪಾಲಿಕುಂ ಸುಡುಗುಂ. ಇಂತುಮಾತನಯೆ ಲೀಲೆ. ಈಮಾಡ್ಕೆಯಿನಾಗಳುಂ ಬಗೆವಗೆಯ ತನ್ನೊಂದು ಲೀಲೆಯೊಳ್ ಬಿನದಿಪಂ. ಆತನೆ ನಾರಾಯಣಂ ಈಗಳಿದೆ ರಾಮವೆಸರಿಂ ತಿರೆಯೊಳ್ ಪುಟ್ಟಿರ್ಪನೆಂದಂ. ಅದರ್ಕೆ ಆಂ ಅಂತೇಕೆ ಪುಟ್ಟಿದನೆಂಬುದುಂ ಸವಿಸ್ತರಂ ಸೊಗಯಿಪಂತಿರೆನಗೊರೆದನದೆಂತೆನೆ :—

ಎಲೆ ಮಗನೆ! ಆದಿನಾರಾಯಣನ ಪರಬೊಮ್ಮನ ಪರಮೇಶನ ಗಟಿಗೆಗಟಿ ಗೆಯ ಪೊಸತೆನಿಪ್ಪ ಲೀಲೆ ಎಮ್ಮನ್ನರ್ಗೆ ದುಜ್ಞೇಯಮಂ, ಅಂತಿರೆಯುಂ ಬಲ್ಲಂ ತೊರೆವೆಂ ಕೇಳ್. ಮುಮ್ಮೆಯ್ಯ ದೋಸದೆಸಕದುಪಟಳದ ಶಾಮಸರ್ ಲೋಕಕಂಟಕರಾಗೆ ರಕ್ಕಸರೆನಿಸಿ ಮಱುಮೆಯ್ಯೊಳೊಗೆದು ಹವ್ಯಕವ್ಯಂಗಳ್ಗೆಡ ರ್ಗೆಯ್ದು ಬಡವುಬಱುವಾನಿಸರಂ ಕೊಂದು ತಿಂದು ಬಿರ್ಕುಳಿಸಿ ಪೆರ್ಕಳಿಸಿ ತಿರೆಗೆ ಪೊಱೆಯಾದರ್. ಇಂತು ಬಂದಿಗಾಱರತ್ತಣೆಸೊಂದು ಪಾಙ್ಗೆಮೆ ಕೇಡಂ ಸೈರಿಸದೆ ಸುರರೆಲ್ಲರ್ ನಾರಾಯಣಂಗೆ ದೂಱಲೊಡಮಾತಂ ಶರ ಣ್ಪೊಕ್ಕ ದೇವರ್ಕಳಂ ಸೈತಿಟ್ಟು ತಾಂ ತಿರೆಯೊಳವತರಿಸಿ ಕೂೞರ ಕುತ್ತಮಂ ಪತ್ತುವಿಡಿಸಿ ಕಾವೆನೆಂದು ನಂಬಿಸಿ ಕಳಿಪಿದಂ. ಮತ್ತಂ ತನ್ನೊಳ್ ತಱಿಸಂದು ಪೊಡವಿಗಿೞಿತಂದು ಅಯೋಧ್ಯೆಯೊಳ್ ದಶರಥಂಗೆ ರಾಮವೆಸರಿಂ ಮೆಯ್ವೆತ್ತು

ಪುಟ್ಟಿ ಮುನಿಯ ಯಾಗಮಂ ಕಾವೊಂದು ಬಗೆಯಿನೆಳಮೆಯೊಳೆ ಪೋಱಮಟ್ಟು, ಕಾಟದ ತಾಟಕೆಯಂ ಕೊಂದು, ಮಾರೀಚನಂ ಮಾರಿಗೆ ತುತ್ತಿಸಿ, ಮತ್ತಿನ ಪರಿಣಯದೊಳ್ ಸೀತೆಯಂ ಮದುವೆನಿಲ್ತು, ತನ್ನ ಮಡದಿಯ ಕತದಿಂ ರಾವಣ ಕುಂಭಕರ್ಣಾದಿರಾಕ್ಷಸರಂ ಮಡಿಪಿ ಸುರರ್ಗಂ ನರರ್ಗಂ ನಿಚ್ಚಸೊಗಮನಾಗಿಸಿ ಮೇಣೀಗಳಯೋಧ್ಯೆಯೊಳ್ ಸೋದರರ್ವೆರಸು ಪೊಡವಿಯನಾಳ್ದಂ. ಕೆಲವಾನುಂ ದಿಸಕಶ್ವಮೇಧದೊಂದು ನೆವದಿಂ ತೆರಳ್ದು, ನಾಡಂ ದಾಟಿಟ್ಟು, ಒಳ್ಳಿದರಂ ಪೊರೆದು, ಕೂಱರಂ ತತ್ತಱದಱಿದುಂ, ಬರ್ಕುಮಾತನಡಿಯಾಣತಿಯೊಳೆ ಸೇನೆ. ಆಗಳ್ ನೀನವರಂ ಕಂಡು ಮನ್ನಿಸಿ, ಬಱಿಯಂ ಸತ್ಯಾವತಿಗೆ ಪೋಗಿ, ರಾಮನಂ ಕಂಡು, ನಿನ್ನೀಸಂಸೃತಿಯ ಬಲ್ಪೊಱೆಯನಾತನೊಳೊಪ್ಪಿ
೧೦ ಸೆಂದು ಮುನಿ ನುಡಿದಂ. ಇಂತಿದು ಪೂರ್ವವೃತ್ತಾಂತಂ. ಅಂತದುಕಾರಣದಿಂ ನಿಮ್ಮವರಂ ಕಂಡು ಪೊಂಪುಳಿವೋದೆಂ. ಇನ್ನೆಮ್ಮ ನಿಮ್ಮ ಪೆಂಪಿನ ಕೂಟಮಯೋಧ್ಯೆಯೊಳಕ್ಕೆ! ಎಂದು ಶತ್ರುಹರಂ ಮನ್ನಿಸಿ, ಮುಂತಣ ಪಯಣಮಂ ಬಳೆಯಿಸಿ, ತಾನಯೋಧ್ಯೆಯತ್ತಲ್ ಮನೋವೇಗದಿಂ ನಡೆದಂ.

ಎಂಬಲ್ಲಿಗೆ ಶ್ರೀರಾಮಾಶ್ವಮೇಧದೊಳ್
ಅರಣ್ಯಕಮುನಿದರ್ಶನಂ ತ್ರಯೋದಶಾಶ್ವಾಸಂ ಸಂಪೂರ್ಣಂ.

---

## ಚತುರ್ದಶಾಶ್ವಾಸಂ

# ದೇವಪುರ ವರ್ಣನಂ

ಬೆಳತಿಗೆಗಣ್ಣ ಪೆಣ್ಣೆ! ನನೆಯಂಬಿನ ಕೊಂಬಿನ ನಾಡೆ! ನಾಡೆ ನಿಕ್ಕಳಿಸಿದ ಕೈಯ ಮೆಯ್ಯ ಸಱುಗಂಪಿನ ಸೊಂಪಿನ ಚೆಲ್ಲಗಾರ್ತಿ! ಕೇಳ್.

೨೦ ಮತ್ತಮಾಗಳ್ ಶತ್ರುಹಪುಷ್ಕಲಲಕ್ಷ್ಮೀನಿಧಿ ಸುಗ್ರೀವಪ್ರಭೃತಿವೀರಾಗ್ರಗಣ್ಯರ್ ಅರಣ್ಯಕನನಯೋಧ್ಯೆಯತ್ತಣ್ಗೆ ಬೀಳ್ಕೊಟ್ಟು ತಾಂ ಮುಂದೈದಿದಪುದುಂ; ಹಯಂ ತಾಂ ತನಗೆ ತೂಪಿಱಿದ ಕೂರ್ಪಿನ ಪೆರ್ಮೆಯಿಂ ಸೊಮ್ಮು ಮೆರ್ಚೆ ದೊಮ್ಮಳಿಸಿ ಕಿಚಿಕಿಲ್ದು ಬಿಮ್ಮನೆ ನಡೆದು ಬಱಿಯ ಪೊದೆಯಂ ಮಿಕ್ಕು ಪೊಕ್ಕು ದಿಕ್ಕುಗೆಟ್ಟು ಮುಱುಂಗಿ ಕಣ್ಮಾಯಮಾಯ್ತು. ಅನಿತಱೊಳಾಹಯದ ಬೆಂಬಱಿಯ ಕಾಪಿನಾಳ್ಗಳಿಂತಪ್ಪ ಕಣ್ಗಟ್ಟನಿರವಂ ಕಂಡಡಿಗಡಿಗಂಡಲೆದು ಕಂಗೆಟ್ಟು ಬೆದಱಿ ತಳಮಳಂಗೊಂಡು—ಜೀಯ! ಬಿನ್ನಪಂ ಬಿನ್ನಪಂ.

ನೀರ್ವೊಕ್ಕ ಕುದುರೆಯೆತ್ತವೋದುದೋ, ಕಾಣೆವು. ನೋೞ್ಪೊಡಿಂತೀಪೊಚ್ಚ
ಮುರಿಗುದುರೆಯನೊಳಕೊಂಡ ಕಡಲ ಗುಣ್ಪಿಂದೆಸೆಗುಂ. ಪುಗಲೆಮಗಂ ಬಸ
ಮಲ್ತು. ನೀಮೆ ನಡೆತರ್ಪುದೆಂದು—ದಾಶರಥಿಗೆ ತಿಳಿಸಲೊಡಂ; ಪಗೆಗಳ
ಪಗೆಯಂ ಕಟ್ಟುಚ್ಚರಿಯಿಂ ಟೆಬ್ಬರಿಸಿದ ಮನದಿಂ ವಾಜಿ ನೀರೊಳಾಯ್ತು!
ಹಾ! ಕೆಟ್ಟುದು ಕೆಟ್ಟುದು ಸಜ್ಜನ ಕಜ್ಜಂ. ರಾಘವನ ಜನ್ನಕ್ಕೆಡರಿಂದಿಂಗೆ
ಬಂದುದೇ, ಮುಂತೇಂ ಬಟ್ಟೆ, ದೈವಮೇ! ಎಂದು ಸುಮತಿಯುಂ ಮಂತಣಂ
ಗೇಳ್ವುದುಂ; ಸಚಿವನಿಂತೇಂ ಕಳವಳಂ! ಜಗದ ದೈವದ ಜನ್ನದ ಬನ್ನದ
ಮಾತುಂಟೆ! ಪೋಗದು ಪೋಗದು ಸಾಜಂ ವಾಜಿ! ಏಂ ಪೊಚ್ಚವೇಣ್ ತಾನೆ
ಬೈತಿಟ್ಟುದೋ? ಅಲ್ಲದೊಡೇಂ? ಕಿನ್ನೆಲದ ನಾಗರೇಂ ಕೊಂಡುಯ್ದು ಕಟ್ಟಿ
ದರೋ? ಅಂತದುಕಾರಣಂ ತಳ್ವದೆ ನೀನುಂ ಭಾರತಿಯುಂ ಮಾರುತಿಯುಂ ೧೦
ತೊೞೆಯ ಬಸಿೞಿಂ ಪೊಕ್ಕೞಿಸಿಂ. ನಿಮಗಿದು ಸಾಧ್ಯಮೆಂದೞಿಪದಂ. ಅನಂತರಂ
ಸುಮತಿಯೆಂದುದನೊಪ್ಪುಗೊಂಡು ಶ್ರೀರಘುವರನ ಪದಯುಗಮಂ ಜಾನಿಸಿ
ಜಲದೇವತೆಯಂ ಭಾವಿಸಿ ತಾಂ ಮೂವೞುಂ ದುಮ್ಮಿಕ್ಕಿ ಮಡುವಿನ ನಡುವಣ
ತಡಂಗುಂಡಿಯ ತಳಮಂ ಸಾರ್ದರ್. ಇಂತಿೞಿತಂದೆತ್ತಂ ನೋೞ್ಪುದುಂ; ನೀ
ರೊಳೊಳಗೊಳಗೆ ಪೊಸತೆನಿಪ್ಪ ನಾಡ ಗೋಹುರಂ ಕಣ್ಗೊಳಿಸಲೊಡಮಚ್ಚರಿ
ಯಿಂ ನಟ್ಟಾಲಿಯಿಂ ದಿಟ್ಟಿಸಿತುಂ ಪೊೞಲ ಬಾಗಿಲೆಡೆಗೆಯ್ತಂದರ್. ಅಲ್ಲಿ ಪಡಿ
ಯೆಡೆಯ ಪಡಿಯೞಿತಿಯರ್ ತುಂಬಿಗುರುಳ ಬಿಂಬಾಧರದ ಕಂಬುಕಂಧರದಂಬು
ಜನೇತ್ರೆಯರ್ ಕೆಯ್ಯ ಕಂಬಿಯೊಳ್—ಮಾಣ್ ಮಾಣಿಮೆಂದು ಗದೞಿಲೊಡ
ಮಾಂಜನೇಯಂ ಕಿನಿಸಿಂ—ಇಂತುಮೊಂದು ಪಡಿಬಂದಮೇಂ? ಕೇರಿಯ
ಮಂದೆಯ ಪಂದಿಯಂ ಜರ್ಪಿ ತಡೆವಂತಿರೆಮ್ಮಂ ಜಡಿದು ಮಾಣಿಪ ಕೀೞ್ನಾಡ ೨೦
ಪೆಣ್ಗಳ್, ನಿಮಗೆ ಮೂೞಿರ್ದೆ*ವೇಡಾ! ಪೋ! ರಘುರಾಮನ ಬಂಟರಂ
ತಾಂಟಲ್ ಬಗೆವ ದಿಟ್ಟೆಯರಂ ಪುಟ್ಟಿಸಿದ ಗಾಂಪಿನ ಬಿದಿಯೆ ತಲೆವೋಕಂ
ಎಂದಂ. ಆಗಳೂೞಿಗವೆಣ್ಗಳೊಳೊರ್ವಳೊಳಪೊಕ್ಕು ತಮ್ಮೊಡತಿಗೀಪರಿಯಂ
ವಿವರಿಪುದುಂ; ಜೋಗಿಣಿ ಬರವೇಪೆಂಬುದುಂ; ಬೀಡಂ ಬೀರರ್ ಪುಗುತರ್ಪು
ದುಮೊರ್ಮೊದಲೊಳಾಯ್ತು. ಇಂತು ಬಂದೆೞಗಿ ತಮ್ಮಿರವಂ ಕೇಳಿಸಿದ
ಮೂಜಗದ ಮುಂದಾಳ್ಗಳಂ ಮನ್ನಿಸಿ ಸರೆತ ನವಿರ ಬೞಿತ ಮೆಯ್ಯ ತವಸಿಣಿ—
ನಿಮ್ಮಾಬಲ್ಮೆಯ ಜಂಕಣೆಗಂ ಕಣೆಗಂ ಚಳಿತು ಮೆಯ್ಗಿಡುವರಾಗರೀನಾಡ
ಪೆಣ್ಗಳ್. ದೇವಿಯೊಂದು ನೆರವಿಂತುಟು. ಆದೊಡಂ ನೀಂ ಕೋದಂಡದೀಕ್ಷಾ
ಗುರುಗೆ ಬಂಟರಪ್ಪಿನಂ ನಿಮ್ಮೊಳೆಮಗೆ ಮನಂ ಬಾರದು. ಇದೆ ಬಂದ ಹಯದ
ಬಂದಿಗಳೆವರ್. ಅಂತದುಕಾರಣಂ ನಿಮ್ಮಾ ಕುದುರೆವೆರಸು ಮರಲ್ದು ತಿರೆಯ ೩೦

ತ್ತಲ್ ಪೋಗಿಂ. ಶ್ರೀರಘುವರಂಗೆಮ್ಮ ಬಿಕುತಿಯಂ ಪೇಟಿಮೆಂದು ಜೇಂಕರಿಸಿ
ನುಡಿವುದುಂ—ಶತ್ರುಘ್ನಂ ಮುಂತಪ್ಪ ಬಲ್ಪಿನ ಜಗಜಟ್ಟಿಗಳ್ ದೈನ್ಯಮಂ
ತೋಱಿ—ಮುತ್ತಜ್ಜೆ ಜೋಗಿಣಿ! ಇಂತೇರ್ಪಟ್ಟ ನಿನ್ನ ಪೈಮೆಯಂ ಬಗೆಯ
ದಱಿವುಗೇಡಿಂ ನಾಡೆ ನಿಮ್ಮವರಂ ಚಾಳಿಸಿದೆವು, ಎಂತುಂ ಮನ್ನಿಸಿ ಕಾವು
ದೆಂದು—ಮೇಣುಂ ತಲೆವಾಗಿ ನಿಂದಿರ್ದರ್. ಅದರ್ಕಾಜಕ್ಕಿಣಿ ಲಾಲಿಸಿ,
ಮಾಲಿಸಿ—ನಿಮ್ಮೊಳೆನಸುಂ ತಪ್ಪಿಲ್ಲ. ಪೈವಳಿಗಿದು ಸಾಜಂ, ಎಂದು ಸೈತಿಟ್ಟು
ಬಗೆವಗೆಯ ಕೋಲ್ಗಳಂ ಬೇಱವೇಱ ಮೆಚ್ಚನಿತ್ತು ಕಳಿಪಿದಳ್. ಮತ್ತ
ಮಾಬೀರರ್ ಹಸಾದವೆಂದು ಪಟಿಮುದುಪಿನ ಜೋಗಿಣಿಯಂ ಬಲವಂದು
ಬಲಂಗೊಂಡು ದೇವಿಯ ಪೆರ್ಮೆಯಂ ಭಾವಿಸುತುಂ ಹಯದೊಡಗೂಡಿ
೧೦ ಮುನ್ನಿನೆಡೆಗೈತಂದು ಸರ್ವಗರ್ಮೀಕತೆಯಂ ಬಣ್ಣಿಸಿ ಪೇೞ್ದು ಸಂತಸದಿಂ
ಮುಂತೆಮುಂತೆ ನಿಚ್ಚವಯಣದಿಂ ಪಯಣಂಬೋದರ್.

ಇಂತೆತ್ತಿ ನಡೆವ ಪಡೆಗೆ ಮುಂದೆಸೆಯೊಳೊಂದು ಪೊೞಲ್, ಪೊೞಲರಸಿಂಗೆ
ಪೊಸಕಟಿಲೆಂಬಂತಿರೊಪ್ಪುವ ಪುಟಿಲೊಟ್ಟಿಲಿಂ ಬಟಿವಿಡಿದ ತಣ್ಣೀರ್ಗೊಳದಿಂ,
ಬಿಡುಜಡೆಯೆನೆ ಪರಿವ ಕಾಲ್ವಾಯಿಂ ಪುರರಮೆಯ ಪಸುರುಡೆಯ ಮಾಪ್ಕೆಯಿಂ
ರಾಜಿಪಾರವೆಯಿಂ ನಿಡುಮೊಲೆಗಳೆನೆ ತೋರ್ಪ ಮಾಡುವೆಟ್ಟಂಗಳಿಂ ಕಣ್ಗೆ
ವಂದು, ಬಿಂಜದ ನಿಗರುಂ ಮುಂಜಿನ ಬೆಳ್ಪು ನಂಜುಂಡನ ಭೂತಿ ರಂಜಿಸಲೊಡ
ಮೆಸೆವ ಹರ್ಮ್ಯಂಗಳಿಂ ಚೆಲ್ವಾಯ್ತು. ಇಂತು ದೇವಪುರಂಬೋಲ್ ಪೆರ್ಮೆ
ವೆತ್ತ ದೇವಪುರಮಂ ವೀರಮಣಿವೆಸರ ವೀರಮಣಿಯೊರ್ವ ನರಸಾಳ್ಗುಂ. ಈತಂಗೆ
ರುಕ್ಮಾಂಗದನೆಂತಂತು ಹರಿಭಕ್ತಿಗಿಂಬಾಗಿ ಸೊಬಗುಸಿರಿಯ ನಳಿದೋಳ್ಗೆ
೨೦ ರುಕ್ಮಾಂಗದಮೆನೆ ಸಲ್ವ ರುಕ್ಮಾಂಗದನೆಂಬ ಸೀಮಂತಪುತ್ರನುಂಟು. ಇತ್ತ
ಲಾಗಳೀತನಂತವುರದ ಸೊರ್ಕುಂಜವ್ವನದ ಕನ್ನೆವೆಣ್ಗಳೊಡವೆರೆದು ವನವಿಹಾರ
ದೊಳಿರ್ದಂ.

ಆಗಳ್ ಬಡನಡುವಿನ ಪಿಡಿನಡೆಯ ಕಾಂತೆಯರ್ ಬಿಡುಜಡೆಯ ನಿಡುಬಾ
ಸೆಯ ಜೋಸೆಯರ್ ನಳಿದೋಳ ಸುಟಿವೊರ್ಕುಟಿ ಚೆಲ್ವೆಯರ್ ರಂಗುದುಟಿಯ
ಬಿಂಗಗೆಕ್ಕೆಯ ಜಾಣೆಯರ್ ಬಟ್ಟಮೊಗದ ಆಗಸಗಿವಿಯ ಸೊಗಸುಸುಡಿ
ಯಂಗನೆಯರ್ ಮೆಲ್ಲಡಿಯ ಚೆಲ್ಲೆಗಂಗಳ ಚೆಲ್ಲಗಾರ್ತಿಯರ್ ಸಂಕುಗೊರಲ
ಕೊಂಕುಗುರುಳ ನೀಱೆಯರ್ ತಳಿರ್ಗೈಯ ಬೆಳರ್ಮೆಯ್ಯ ಬಾಲೆಯರ್
ಸೆಂಡುಮೊಲೆಯ ದಿಂಡುದೊಡೆಯ ಮಿಂಡಿಯರ್ ಬಂಡುಣಿವೆದೆಯ ನ
ದಂಡಾಳ್ಗಳೆನೆ ಪಿಂಡೆಬ್ದಲ್ಲಿಗಲ್ಲಿಗೆ ಸಂಚರಿಸಿ ಮೆಲ್ಲಡಿಯೊದೆಯಿಂ ಚೆನ್ನಸುಗೆಯಂ
೩೦ ತಳರ್ಚಿಯುಂ, ಮುದ್ದುಮೊಗದ ಬೆಳ್ನಗೆಯ ಪರ್ಬುಗೆಯಿನರೆಮುಗುಳ

ನಲರ್ಚೆಯುಂ ಚಂಚಳಿಪ ಕಡೆಗಣ್ನೋಟದ ಕೂರ್ಪಿಂ ನಸೆಗೆ ಕೊನೆಗೆ ಮೊನೆ
ವೆರ್ಚಿಸಿಯುಮೋರೊಂದೆಡೆಯು ಚೆಂದಳಿರಂ ಚಿವುಡಿಯುಂ, ಬಿರಿಮುಲರ
ಗೊಂಚಲಂ ಮುರಿದೊಟ್ಟಿಯುಂ, ನೆಲನೊಳುದಿರ್ದ ಕಟಿವೂವನಾಯ್ದು
ಮೆಱೆಯನೊಡಗೂಡಿ ತಿರಿದರ್.

ಇಂತು ನಲ್ಮೆ ಮಿಗೆ ಬಿನದಿಪ ಕಾಮಿನಿಯರ್ಗೆ ಕಂಜೊಡರೆನಸುಂ ತಾಱೆ
ಮೊಗಂ ಬಾಡೆ ನೊಸಲೊಳ್ ಬೆಮರ್ ಪನಿಯೆ ತೆಳ್ಗದಂಪು ಕೆಂಪಡರೆ ಎರ್ದೆ*
ದಡದಡಿಸೆ ಸುಯ್ ಪೆರ್ಚೆ ನಡೆ ತಡೆವಡೆ ಬಿಸಿಲ ಜಳಕಂ ನೆಲಕಂ ಒಟಿಲ್ಕೆ
ತಲೆದೋಱಲೊಡಂ ಮುಂತೆಸೆವ ತಿಳಿಗೊಳನಂ ಕಂಡು ನೀರಾಟಕ್ಕೆಳಸಿದರ್.
ಅನಂತರಮಾಕಾಂತೆಯರ್ ಸರಸ್ಸಿಗಿಟಿತಂದು ಪಾಸಿನೊಸರ್ಗಲ್ಲ ಮೇಲೆ ತಿಱಿ
ತಂದ ಪೂಗಳಂ ಬೈತಿಟ್ಟು ಚೆಂದಟಿರಂ ಮುಚ್ಚಿ ನಿಚ್ಚದಲ್ಲದ ರನ್ನವಚ್ಚಮಂ ೧೦
ತೆಗೆದಿಟ್ಟು ಮಿಱುಮಿಱುಗುವ ಪಟ್ಟುಡೆಯುಂ ಸಡಿಲ್ಚಿ ಸಾಜದ ರಂಗುಸೀರೆಯು
ನುಟ್ಟು ಜಲಕೇಳಿಗೆ ಮೇಳವಿಸಿದರ್. ಅವರೊಳೊರ್ವಳ್ ಲಿಕುಚಕುಚದ
ನಸೆಗಾರ್ತಿ ಕಣ್ಣ ಮಿರೆ ಕನ್ನವುರಂ ಸೂಸೆ ಕೈವಳೆಯುಲಿಯೆ ಕೌಂಕುಳ
ಮೊದಲ್ ತೆಱಂಬೊಳೆಯೆ, ತನ್ನೊಂದು ಬೆಡಂಗಿನ ಬಾಮುದಿಂ ಬಳ್ಕಿ ಬಾಗಿ
ಕುಪ್ಪಸಮಂ ಸಡಿಲ್ಚಿದಳ್. ಮತ್ತಮೊರ್ವಳಟ್ಟಸದ ಜಗದಿಟ್ಟೆ ಸೋಮುರ್ಱ
ಡಿಯುಂ ತುಱುಬಿ ಕಟಿಲಂ ಕಟ್ಟಿ ಮುತ್ತಿಸೆಕ್ಕಸರಮಂ ಕೆಲಕಿಟ್ಟು ಮೇಲುದುಮಂ
ನಡುವಿನೊಳ್ ಬಿಗಿದು ದಿಮ್ಮನೆ ನೀರನಿಟಿದಳ್. ಪೆಱಳೊರ್ವಳ್ ಗಾಡಿಯು
ಸಿಂಗಾಡಿಯ ಪುರ್ಬಿನ ಗರುವೆ ಮೊಲ್ಲೆಯ ಚೊಲ್ಲೆಯುಮಂ ನೀಡಾಡಿ, ಹಿಣಿಲಂ
ಬಿದಿರ್ಚಿ ಕಿಱುವೆರಲ ಪರಲುಂಗುರಮಂ ತೆಗೆದಿಟ್ಟು ಉಡೆಯುಂ ಬಿಟ್ಟು ಚಲ್ಲಣಮ
ನುಟ್ಟು ಮೆಯ್ಗೊಟ್ಟು ಕೊಳನಂ ಪುಗುತಂದಳ್. ಆಗಳ್ ರುಕ್ಮಾಂಗದಂ ೨೦
ಬಾಸಿಗಮಂ ತೋಳಬಂದಿಯಂ ಕೊರಲ ಪದಗಮಂ ನೇವಳಮುಮನೆತ್ತಿಟ್ಟು
ದೇಸಿಯ ಗಂಡುಡಿಗೆಯನುಟಿದು ಲೇಸಿನುಡೆಯನಳವಡಿಸಿ ತೊಟ್ಟನೆ ಕೆಳದಿಯ
ರೊಡಗೂಡಿ ನೀರೊಳಾಟಂ ಬೊಕ್ಕಂ. ಸೀರ್ಪನಿ ಸಿಡಿಯೆ ತೆರೆ ಮಸಗೆ ಕೊಳಂ
ತಳಮಳವಾಗೆ ಮೀಂಗಳ್ ಮೆಯ್ಗರೆಯೆ ದಟಿಂಬಟಿನೆ ಕೈಕಾಲ್ಗಳೊಳೀಸುವ
ಕಾವನ ಪಟ್ಟದಾನೆಗಳೆಂಬೋಲಾಡಿದರ್ ಬಾಲೆಯರ್. ದುಮ್ಮಿಕ್ಕುವ ಮುಟಿಂ
ಕುವಟ್ದುವೊಗೆವ ನೆಗೆವಾಟಮ ನೀರೊಳಳುಂಬಂ. ಮತ್ತಮೊರ್ವಗೊರ್ವರ್
ನೀರಂ ಸೂಸಿಯುಂ ಪೂಸಿಯುಂ ಮುಕ್ಕುಳಿಸಿಯುಂ ಜಕ್ಕುಳಿಸಿಯುಮೊರ್ವರ
ನೊರ್ವರ್ ಪಿಡಿದುಮೆತ್ತಿಯುಂ ನೂಂಕಿಯುಮಡರ್ದುಂ ಪೊಯ್ದುಮೊಯ್ದುಂ
ಬಯ್ದುಂ ಕೊಳನೊಳಾಡಿದರ್.

ಇಂತು ಕಾಂತೆಯರ್ ನಡುಕಂ ತಲೆದೋಱೆ ಮೆಯ್ ಬೆಳ್ಪೇಱೆ ತುಟಿ ೩೦

ಬಣ್ಣಂಗುಂದೆ ಕಣ್ಗಳ್ ರಾಗಮನೊಂದೆ ಮೊಗಂ ಕಳೆವೆರ್ಚೆ ಮನಂ ದಣಿಯೆ
ಜೊಕ್ಕಳದಿಂ ನೀರೊಳಾಡಿ ಮಿಂದು ಬಂದು ತಡಿಯನಡರ್ದು ನನೆಗಪ್ಪಡಮ
ನುಟಿದು ಪೊಸಸೀರೆಯುಂ ನಿಱಿವಿಡಿದಿಟ್ಟು ಕಂಚುಕಮಂ ಬಿಗಿದು ಬೈತಲೆಯುಂ
ತಿರ್ದಿ ಮುಡಿಯುಂ ಗುಗ್ಗುಳದಿಂ ಪೊಗೆದಾಱಿಸಿ ಪೂವಂ ಸೂಡಿ ಪಣೆಗೆ ಪುಟುವ
ಚ್ಚೆಯ ಬೊಟ್ಟನಿಟ್ಟು ಕಣ್ಗೆ ಕಜ್ಜಲಮಂ ತೊಡೆದು ಕಪೋಲದೊಳ್ ಮಗರಿಗೆ
ಯಂ ಬರೆದು ಮೆಯ್ಗೆ ಬಾವನ್ನಮಂ ಪೂಸಿ ಅಡಿಗಲತಿಗೆಯಂ ಲೆಪ್ಪಂಬಟಿದು
ಬಗೆವಗೆಯ ಪೊಂದೊಡವುಗಳಿಂ ಪಸದನಂಗೊಂಡು ಮೀಂಬಟಿಯಿಗೆಯನ
ಕುಲದೇವಿಯರೆನೆ ಕಣ್ಗಿಂಬಾದರ್. ರಾಯುಗುವರನುಂ ಸಡಗರದಿಂ ಜಳಕಂ
ಬೊಕ್ಕು ಪೊಱವಂದು ಕೈಗುಣದ ಕಾಮಿನಿಯರಿಂ ಸಿಂಗರಂಗೊಂಡು ಕಪ್ಪುರ
೧೦ ವೀಳೆಯಮಂ ಸವಿದು ಬಳ್ಳಿವನೆಯ ಚೆಂದಳಿರ ನಲ್ವಾಸಿನೊಳ್ ಪೆಣ್ಬಡೆವೆರಸು
ತೆಂಗಾಳಿಗೆ ಮೆಯ್ಯನೊಡ್ಡಿ ಗಾಡಿಯಿಂ ಕುಳ್ಳಿರ್ದಂ.

ಎಲೆ ಸುಭಗೆ! ಆಪೊತ್ತಿಂಗೆ ಸೀತಾರಮಣನ ಯಜ್ಞತುರಂಗಮಂ ಪಲ
ನಾಡುಗಳಂ ತೊಟತೊಟಲ್ದಾವನಮನೆ ಪುಲ್ಗಳಸಿ ಪೊಕ್ಕುವಂದುದು. ಆಗ
ಳಂತದಂ ಕಂಡೊರ್ವ ಚಟುಲನಯನದ ಕುಟಿಲಕುಂತಳೆ ತಮ್ಮಾಳ್ದಂಗೀವಿವರ
ಮನಱಿಕೆಗೆಯ್ವುದುಂ ಚಿತ್ರಾಂಗದನಚ್ಚರಿದಾಳ್ದಿ ವಾಹಮಂ ಬರಿಸಿ ನೊಸಲೊ
ಳಸೆವ ಓಲೆಯಿರೆ ಕೊಂಡಿಂತು ವಾಚಿಸಿದನದೆಂತೆನೆ:—

ಲೇಸಿನ ನೇಸಱ ಬಟಿಯೊಳೊಗೆಯೆ ಪೆರ್ಚಿದ ಕಾಯ್ಪಿಂ ಮೇಲೆನಿಪ್ಪ ಮನು
ಕುಲದ ರಾಯರ ಪಟ್ಟವಣೆಯನೇಱೆ ಬಟಿಸಂದಱಿಮುಂ ತನ್ನೊಳೊಪ್ಪೆ ದಶರಥ
ರಾಮುಂ ತನ್ನಂ ನಿಚ್ಚಮೋಲೈಪ ಸಕಲಸಾಮಂತಸಂದೋಹಕ್ಕೆ ತನ್ನಯೆ
೨೦ ಕೂರ್ಮೆಗಡಲೆಡೆಯೆಡೆಯೊಳ್ ಮಱೆಗೊಟ್ಟು ಸಾಕೇತಪುರಮನಾಳ್ಗುಂ.
ರಾವಣ ಕುಂಭಕರ್ಣರ್ ಮುಂತಪ್ಪ ಬೊಮ್ಮರಕ್ಕಸರಂ ಕೊಂದು ಬಂದೊಂದು
ಬೊಮ್ಮೇತಿಯ ಶಾಂತಿಗೆಂದು ಮುನಿಯಾಜ್ಞೆಯಿಂ ಜನ್ನಮಂ ಕೈಕೊಂಡು
ತಾಂ ದೀಕ್ಷೆಯೊಳಿರ್ದು ಸೋದರನ ಲವಣಾಂತಕನ ಕಾಪಿನೊಳೆ ಹಸುವಂ
ತಿರೆಗೆ ಬಿಟ್ಟಿರ್ಕುಂ. ಎತ್ತಾನುಂ ಪೆರ್ಕಳಿಕೆಯ ಗಂಡರಿರೆ ಕಟ್ಟುವುದು ಕಾದು
ವುದು. ಮೊನೆಯೊಳ್ ಶತ್ರುಹಂ ಗೆಲ್ಗುಂ ಕೊಳ್ಗುಂ. ಕಟ್ಟಲಾಱದ ಬಣಗುಗಳ್
ಕಾಣ್ಕೆಗೊಟ್ಟೆಮ್ಮವರಂ ಕಂಡು ಬಾಳ್ವುದು.

ಕಮಲನೇತ್ರೆ! ಕಮನೀಯಗಾತ್ರೆ! ಇಂತು ಬರೆದೊಕ್ಕಣೆಯಂ ವಾಚಿಸಿ
ಬೆರಲ ಮೂಗಿನೊಳ್ ತಲೆದೂಗಿ ಶೌರ್ಯಾಟೋಪದಿಂ ರುಕ್ಮಾಂಗದಂ
ಮೇಳದ ಪೆಣ್ಬಡೆಯಂ ದಿಟ್ಟಿಸಿ—ಆಃ! ಮನುವಿನ ಮಾರ್ಗಂ, ಭಾನುವಿನ
೩೦ ತೇಜಂ, ತಕ್ಕಟಿಯದೆ ಬಟಿಸಲ್ವಿನನಿನಿತೊಂದು ಪೆರ್ವೆಗಡಪಾರ್ದನಕ್ಕುಂ

ರಾಮಂ. ಏಂ ದೆಸೆದೆಸೆಯ ಬಾಜ್ಗೆಟ್ಟ ಕೀೞರಸುಗಳ್ ಖೋಡಿಗಳಾಗರೆ? ತಾನೊರ್ವನೆ ಜಗಕ್ಕೆ ಗಂಡಂ, ಮಿಕ್ಕುೞಿದರಸುಗಳೆಲ್ಲರ್ ಬಾಂಬರೆಂದೆ ಬಗೆವಂ ರಾಮಂ; ಅಲ್ಲದೊಡೇಂ ಕೊರ್ವೊ? ಏಂ ಪನ್ನತಿಕೆಯೊ? ಏಂ ಜಂಬವೊ? ತಾಂ ಗಡ! ರಕ್ಕಸವಗೆಯುಂ ಗಡ! ಪಾತಕಂ ಗಡ! ಯಜ್ಞಂ ಗಡ! ಇಂತೊಂದು ನೆವದಿಂ ಪಣದಾಸೆಗೆ ಈಹಸುವನಾಡಿಸಿ ಬೇಡಿಸಿ ಕೂಡಿಸುವ ಗಾರುಡಿಗತನಮಂ ಕಂಡೊರೆದ ಜೋಗಿಯೆ ಜಾಣಂ. ಅಕ್ಕೆ, ಮೊಸೆಯೊಳ್ ಗೆಲ್ವ ಬೀರರ್ ಬರ್ಕೆ. ಅನ್ನೆವರಮೆಮ್ಮ ಸಾಲೆಯೊಳ್ ಕಿಱುಕುಳದ ಬಡವು ಕುದುರೆಗಳ ಸಾಲೊಳ್ ಕಟ್ಟುವೆನೆಂಬ ನಿಚ್ಚಯದಿಂ ಪಿಡಿದು ಸ್ತ್ರೀಜನಂಬೆರಸು ಪುರಕೆ ನಡೆತಂದಯ್ಯನೊಳೀಹದನನುಸಿರ್ದಂ.

ಆಗಳ್ ವೀರಮಣಿನೃಪವರಂ ಕುವರನಾಡಿದ ಪೊಸಪರಿಯುಗ್ಗಡದ ಕಾಳೆಗದ ಕಟ್ಟೆಸಕದ ಮಾತಂ ಕೇಳ್ದು ತನ್ನೊಳಾಲೋಚಿಸಿ ತನಗೆ ಮನೆಯಳಿಯನೆನಿಪ್ಪ ಮಾದೇವನೊಳೀಪವಣಂ ಮಂತಣಂಗೊಂಡಂ. ೧೦

ಮನೋರಮೆ—ಎಲೆ ಜಾಣ! ಅಂತೇಂ! ಮಾದೇವಂ ರಾಯಂಗೆಂತಳಿಯನಾದಂ?

ಮುದ್ದಣಂ—ಕೇಳಾರಾಯಂಗೆ ಇಕ್ಷುಮತಿವೆಸರೊಳೊರ್ವ ಮಗಳುಂಟು. ಈಪೆಣ್ಮಣಿಯೆಳವಯೊಳೆ ಪರಮೇಶ್ವರನ ಮೈಮೆಯುಂ ಕೇಳ್ದು ತನಗಾತನೆ ರಮಣನಾಗಲ್ವೇೞ್ಕುಮೆಂದು ಬಗೆದು ನಿಚ್ಚಂ ಶಿವನಂ ಜಪಿಸುತಿರ್ದಳ್. ಇಂತಿರ್ಪುದುಮೊಂದುದಿನಂ ಬಾಲೆಯ ಬಾಲಭಕ್ತಿಗೊಲ್ದು ಕಪರ್ದಿ ಕನಸಿನೊಳ್ ಬಂದು ನಾಳಿನ ಪಗಲೊಳ್ ತಾನೆ ವಿಪ್ರವೇಷದಿಂ ಬಂದು ನಿನ್ನಂ ವರಿಪೆನೆಂದೊರೆದುಂತರ್ಹಿತನಾದಂ. ಇಂತೀ ವಿವರಮನಯ್ಯಂಗಱಿಪುವುದುಂ ಮಱುದಿನಂ ಕನಸಿನೊಳೆಂದಂತಿರೊರ್ವನುರಿಗಣ್ಣ ಪಾರ್ವಂ ರಾಯನೋಲಗಕ್ಕೈತಂದು ಕನ್ಯಾರ್ಥಿ ತಾನೆಂದಂ. ಆಗಳರಸನೀತನೆ ಸಾಕ್ಷಾದೀಶ್ವರನೆಂದು ಬಗೆದು ಮಗಳಂ ಮದುವೆಯೊಳ್ ಕೊಟ್ಟಂ. ಇಂತು ಮದುವೆನಿಲ್ವುದುಂ ಶಿವಂ ರಾಯನ ದೃಢಕ್ಕೆ ಮೆಚ್ಚಿ ತಾಂ ಮೆಯ್ದೋಱಿ ವರಮಂ ಬೇಡೆಂದನ ದರ್ಕೆ ರಾಯಂ ನೀನೊಲ್ವೆಯಪ್ಪೊಡೆ ಮನೆಯಳಿಯನಾಗಿರ್ದು ಎಮ್ಮ ನಾಡಂ ಬೀಡಂ ಕಾವುದೆಂದು ಬಿನ್ನಯಿಸಲೊಡಂ, ಶಿವಂ "ತಥಾಸ್ತು" ಎಂದು ತನಗದೆರಡನೆಯ ಕೈಲಾಸಮೆನೆ ದೇವಪುರದೊಳ್ ನೆಲೆಗೊಂಡಂ. ೨೦

ಮನೋ—ಓ! ವೀರಮಣಿಯಂತುಟೊಂದು ಸೈಪಿಗಡಪರ್ವಾದನೆ!

ಮುದ್ದ—ಸಾಜಂ, ರಾಜಂ ಸಕುಟುಂಬಂ ಮುಕ್ಕಣ್ಣನ ಮಱೆಯೊಳಂದಿಂದಿಂಗುಂ ಪದುಳಂ ಬಾೞ್ವಂ. ೩೦

ಮಸೋ—ಮುಂತೇಂ ಮುಂತೇಂ?

ಮುದ್ದ—ಇಂತು ನೃಪಂ ಕಟ್ಟುಬ್ಬರದ ಹರಿಬಮಂ ಬೆಸಗೊಳ್ವುದುಮಾಶ
ನಿನಿಸುಂಬೊಲ್ತು ಜಾನಿಸಿ ರಾಯಂಗೆ—ಆಃ! ಲೇಸಿನ ಮಂತ್ರಮಂ ನೆನೆದಯ್!
ಪರಕೆ ಪರನೆನಿಪ ದೈವದೊಡನಿಂದು ಪಗೆಗಟ್ಟಿದನೆ! ಹಯಮಂ ಕಟ್ಟಿದನೆ!
ಯಜ್ಞಕ್ಕೆಡರ್ ಬಂದನೆ! ಏನೆಂಬೆನೀತರುವಲಿತನದ ನಿಮ್ಮ ನುಡಿಗಂ ನಡೆಗಂ.
ಶ್ರೀರಾಮಂಗಂ ನಿಮಗಂ ಚಲಮೆ! ಪುಸಿ ಪೊರ್ದದ ತನ್ನೊಂದು ಬಾಣದಿಸು
ಗೆಯಿಂ ರಾವಣಕುಂಭಕರ್ಣಮಾರೀಚಸುಬಾಹುಪ್ರಭೃತಿದಾನವರಂ ತತ್ತಱದ
ಱದ ರಾಮನೇಂ ಗಾವಿಲನೇ? ಈಗಳಾತನ ಸೇನೆಯನಿದಿರ್ಚುವನಾವನೊ?
ಉಃ! ಪೋಕೆ, ಎಂತಾನುಮವರೊಳ್ ಸಂಧಿಗೊಡಂಬಟ್ಟು ಹಯಮಂ ಬಿಟ್ಟು
೧೦ ಕಾಣ್ಕೆಗೊಟ್ಟವರಂ ಕಟ್ಟುವುದೊಳ್ಳಿತಯ್. ಕುವರನುರವಣೆಗೆ ಮರುಳ್ಗೊಂಡು
ನಿರ್ನೆರಂ ಸತ್ತು ಮಿತ್ತುವಿಗೆ ತುತ್ತಾಗದಿರ್, ಸಾಱಿದೆನೆಂದಂ. ಆನುಡಿಗೆ
ರಾಯಂ—ಎಲೆ ದೇವ! ಇಂತುಮೆಂಬರೆ! ಕಟ್ಟಿದ ಕುದುರೆಯಂ ಕೊಟ್ಟು
ಮಱೆವಾಳ್ವ ಬಾಹುಜರೊಳರೆ? ಇಂದಕ್ಕೆ ಸಾವು, ಮೇಣೆನ್ನೆಂದಾದೊಡ
ಮಕ್ಕೆ! ತನ್ನ ಕುಲಕಂ ಚಲಕಂ ಮುಂದಿಟ್ಟು ಕುಂದನೊಂದಿದ ದಂದುಗದೊಳ್
ಕೂಂಟಿ ನಡೆವ ಕಲಿಯುಂ ಕಲಿಯೇ! ರಾಮನಕ್ಕೆ! ಸೋಮನಕ್ಕೆ! ಸಾಮವ
ನೊಲ್ಲೆಂ. ಅದಱಿಂ ನಿನ್ನೊಲ್ಮೆಯೊಂದಿರೆ ಮೊನೆಯೊಳೆಮ್ಮ ಚಲಮಂ ಬಲಮಂ
ತೋಱಿ ಕಾದುವೆವು ದಿಟಂ. ಇದಱೊಳ್ ನೀನಳ್ಕದೆ ಕೈದೋಱುವುದೆಂದು
ವಿನಯದೊಳೆಂದಂ.

ಅದರ್ಕಾಧೂರ್ಜಟಿ—ನೀಂ ಕ್ಷತ್ರಿಯರುಂಟು. ನಿಮಗಕ್ಕುಮೀ ಬೆಸನಂ.
೨೦ ಎನಗೆ ಬಡಗೊರವಂಗೇಕೆಯೊ ಕಾದಾಳ್ತನಂ. ಅಂತುಮಲ್ಲದೆಯುಂ ಎನ್ನ
ಕುಲದೈವದೊಳ್ ಪಗೆಗೊಂಡಿರಲಕ್ಕುಮೆ! ಬಾರೆನಾಱೆನೀಹರಿಬಕೆ, ದೂಱದಿ
ರೆನ್ನನೆಂಬುದುಂ; ನೃಪತಿಲಕಂ ಫಣಿಭೂಷಣನಂ—ಎಲೆ ಮಾದೇವ, ನೀನೆ
ಗತಿಯೆಂದಿನ್ನೆಬರಂ ನಂಬಿದರನೀಪೊತ್ತಿಂಗಿಂತು ಪೋಱನೂಂಕಲಕ್ಕುಮೆ! ಏಂ
ಗೊಡ್ಡಾಟಮೊ! ಎಮ್ಮೊಳ್ ವಾತ್ಸಲ್ಯಮೇಂ ಪೋಯ್ತೆ! ಬಾಂಬೊಟಲಂ
ಗೆಲ್ದದಟೆಂದೆತ್ತವೋದುದೋ! ಇನ್ನೆಮಗಾರೊಳರ್? ಕಾವರಾರ್? ಎಮ
ಗಮೀವಿಧಿಯಾಯ್ತೇ! ಏವೆಂ? ಅಟ್ಟೆಯೊಳುಸಿರುಳ್ಳನ್ನೆಬರಂ ಮೊನೆಯೊಳ್
ಕಾದಿ ಮೋದಿ ಸಾವೆನಲ್ಲದೆ ಪಗೆಗಳ್ಕಿ ಕಟ್ಟಿದ ಕುದುರೆಯಂ ಬಿಡೆಂ, ಕುಡೆಂ,
ನಿಕ್ಕುವಮೆಂದು ದಿಟ್ಟನಾದಂ. ಆನುಡಿಗೆ ಗಂಗೋತ್ತಮಾಂಗಂ ಮನ
ಮೊಲ್ದು—ಅಂಜದಿರೆಲೆ ನೃಪತಿ, ನಿನ್ನೊಂದು ಬಗೆಯ ಬಗೆಯುಂ ಕಂಡೆನಲ್ಲದೆ
೩೦ ಕೊಳುಗುಳಕಳ್ಕಿ ಬಳ್ಕಿ ನುಡಿದೆನಲ್ತು. ರಾಘವಂ ತಾನೆ ಮೈದೋಱಿ

ವನ್ನೆಬರಮಣುವಗಿಣುವರಂ ಗೆಲ್ದು ಪೋಹರಮಂ ದೆಸೆಗಿಡಿಪೆನೆಂದು ಬೋಳೈಸಿದಂ.

ಆಗಳ್ ಕಾಳೆಗವಱೆಗಳ್ ಸೂಳಯಿಸಿ ಸಾಱಿದುವು. ಪಡೆವಳ್ಳರೊಂದಾಣತಿಗೆ ಕಾಲಾಳ್ಗಳ್ ಮೇಲಾಳ್ಗಳುಱವಣಿಸಿ ಯುದ್ಧಸನ್ನದ್ಧಮಾಯ್ತು. ಗಜಂಗಳ ವಾರುವಂಗಳ ರಥಂಗಳ ಪೋಹರಂ ಗಜಬಜಿಸಿದತ್ತು. ಅಂತಿರ್ಪುದುಮತ್ತಲ್ ಕಾಪಿನಾಳ್ಗಳ್ಗೆ ಹಯಂ ಕಣ್ಮಱೆಯಾಗೆ ನಾಲ್ದೆಸೆಯೊಳಮಱಸಿಯುಂ, ರಾಘವಾವರಜನೊಳೀಬಗೆಯಂ ಕಥಿಸಿದರ್. ಅನಂತರಂ ಚಿಂತಿಸಿ ಶತ್ರುಘ್ನಂ ಸುಮತಿಯೊಳ್—ಅಯ್ಯ ಮುತ್ತದಿನದ ಸಚಿವ! ಐವತ್ತಾಱಱೊಳಂ ನೀಂ ನೋಡದ ನಾಡಿಲ್ಲಕ್ಕುಂ. ಪಲವುಂ ಸೂಱಯ್ಯನ ಜನ್ನಗುದುರೆಯುಂ ಬಱಿಗೊಂಡು ಬಂದೊಡೀ ಅಱಿವು ನಿಸ್ಸೊಳಾಯ್ತು. ಸಾಜಂ. ಮಂತುಗಳಿಂತಿರವೇಡಾ! ಲೇಸು ಲೇಸು. ಆಳ್ದನ ಕಜ್ಜಕ್ಕೆ ನಿತ್ತೊ ನೆರಂ. ಕೇಳಾದೊಡಾರೋ ಪರ್ಪೊಱಲನೆಮ್ಮ ಕುದುರೆ ಪೊಕ್ಕುದೆಂದು ಚರರ ನುಡಿಯಿಂದಱಿವೆನಾನಾಡಾವುದಯ್? ಒಡೆಯನಾವಂ? ಹಯಮಂ ಕಟ್ಟುವನೆ? ಪೇಱೆಂಬುದುಂ; ಸುಮತಿ—ರಾಯಂಗೆ ಇದೆ ಇದೆ ದೇವಪುರಂ. ವೀರಮಣಿ ಆಳ್ವಂ. ಬಲ್ಪುಳ್ಳ ಕಡುಸಾಸಿ. ಅವನಂ ಮುಕ್ಕಣ್ಣನಳಿಯನಿರ್ದು ಪಾಲಿಸುವಂ. ಎಮಗೆ ಸಂಗರಂ ಕಡಿದಕ್ಕುಮಂತದುಕಾರಣಂ ತಳ್ವದೆ ಪಡೆಯನೆಬ್ಬಿಱಿಸಿ ಪುರಮಂ ಮುತ್ತಿಕೋಳುಗೊಂಬುದುಚಿತಮೆಂದು—ತಿಳಿಪುವುದುಂ; ಕಲಿಗಳೆಲ್ಲರ್ ಮೆಯ್ವೆರ್ಚಿ ತಾಂ ಮುನ್ನಮಾಂ ಮುನ್ನಮೆಂಬೊಂದಹಮಹಮಿಕೆಯಿನೆತ್ತಿ ನಡೆದು ಪುರಮಂ ಮುತ್ತಿ ಬೊಬ್ಬಿಱಿದು ಸನ್ನೆವಱೆಗಳಿಂ ಕಾಳೆಗಕರಿರಾಜರಂ ಕರೆದರ್.

ಇಂತು ನಾಡ ಕೋಂಟೆಯಂ ಬಾಗಿಲ್ಗಟ್ಟಿ ಮುಂಬರಿವ ಪಡಿಬಲದಿರವನಱಿತಾಗಳಣಿಯಿರ್ದ ರಾಯಮೋಹರಂ ಮುಂದೊತ್ತಿ ತಾಗಿ ಕೋಲ್ಮಱೆಗಱೆದು ದೆಸೆಗಿಡುವಿನಂ ಕಾದುವುದುಂ, ಗಾಱುಗೆಟ್ಟು ಕರಹರಿಪ ತಮ್ಮವರಂ ನಂಬಿಸಿ ನಿಗುಂಬಿಸಿ ಪುಷ್ಕಲಂ ಶರಧಿಯೊಳ್ ಪೆರ್ಚಿ ಮೇಲ್ವರಿವಂಬಿನ ಸೀವರಮೆನೆ ಕೋಲ್ಗಳಂ ಮೊಗೆಮೊಗೆದಿಸುತ್ತೆ ನುರ್ಗಿಪಂದಂ. ಆಗಳ್, ರುಕ್ಮಾಂಗದಂ ತೆಕ್ಕನೆ ಸೂಟಿಯಿಂ ತನ್ನ ಪೊಂದೇರಂ ನೂಂಕಿ ಪಗೆಯಂ ತಾಗಿ ಹುಂಕರಿಸಿ ಮೂಂಕರಿಸಿ—ಎಲೆ ಬಣಗು! ತೊಲಗು! ಇಂದಿಂಗೆ ಬಱಿದಾಯ್ತು ನಿಮ್ಮಾಳುಂ ಬಾೞುಂ; ಕಾಳಾಯ್ತು ಗಂಡಗರ್ವಂ, ಪಾೞಾಯ್ತು ಜಸಂ. ಇನ್ನೆಬರಂ ತಮಗೆ ಜಗಂ ತೋಡಾಗದೆಂದು ಸೊರ್ಕಿಸುರ್ಕಿಂ ಬಱುಗೊಂದೆ ಪಂದೆರಾಯರಂ ಕಾಡಿ ಬೇಡಿ ಕೂಡಿದ ಜಾಳಿಗೆವೊನ್ನಂ ಕೋಳುಗೊಂಬೆನಲ್ಲದೊಡೆ—ಎಂದಂ.

ಆನುಡಿಗೆ ಪುಷ್ಕಲಂ ಕಡೆಗಾಲದ ಮುಕ್ಕಣ್ಣನೊಂದು ಪೊಡರ್ಪಿಂ ಕೆಂಗಣ್ಣನಾಗಿ ಮೊತ್ತಮೊದಲ್ ಕೋಲ ಸೋನೆಯಂ ಕಱೆದು ಬಟಬಟಿಕಂ ಜಂಕಿಸಿ ಕೊಂಕಿಸಿ—ಆಃ! ಮಂಕು! ಅಂಕದರಸುಗಳೆಂಬ ಸಂಕೆಯಿಲ್ಲದೆ ಬಿಂಕದಿ ನೆಮ್ಮ ಕುದುರೆಯಂ ಕಳ್ಳರೆಂತಂತು ಕೊಂಡುಯ್ದು ಕೂಟ! ಎಮ್ಮ ನಣಕಿಪೊಂದು ಬಲ್ಪಾಯ್ತೆ! ಎಲೆ ಮರುಳೆ! ನೀಂ ಗಾಂಪಂ ನಿಕ್ಕುವಂ. ಪೋ! ಜಗದ ದೇವರ ಹಸುವಂ ಕಟ್ಟಿಯುಂ ಸೆಣಸಿಯುಂ ಬಾಪ್ಪೆನೆಂಬ ನೀಂ ಜಾಣನೆ? ಕಾಣೆನೆ ನಿಮ್ಮನ್ನರಂ ದಟವುಟದ ಕೊಳುಗುಳದೊಳಟಿದ ದೆಸೆಗೆ ಬಿಟ್ಟ ರಾಯರಂ! ಎಲೆ ಪಸುಳೆ! ನಿನ್ನೊಳ್ ಕಾದಿ ಗೆಲ್ದುಮೆನಗೆ ಗೆಲ್ಲಮಲ್ಲಂ; ಸೋಲ್ತುಂ ಸೋಲಮಲ್ಲಂ. ನೀನಱಿಯಯ್. ನಿನ್ನಯ್ಯನೊಳಿಂತಿದಂ ಕೇಳ್ದುಂ ಪೇಟ್ದುಂ
೧೦ ರಣಕಟ್ಟಲ್ಲದೊಡೀಗಳೆ ನಿನ್ನಂ ತಲೆಗಡಿದು ದೆಸೆವಲಿಗುಡುವೆಂ, ನೋಡೆನ್ನ ಕೈಗುಣಮನೆಂದಂ. ಆಗಳ್ ರುಕ್ಮಾಂಗದಂ ಪಗೆಯಂಬಂ ಕಡಿದು ಪಡಿಸರಲ ನಾರ್ದೆಚ್ಚು—ಎಲೆಲೆ! ಮೊನೆಯೊಳೊಡ್ಡಿ ನಿಂದುಂ ಹಯಮಂ ಬೇಡುವ ನೀನಾವ ನಾಡ ಗಂಡುಗಲಿಯೊ? ಆರ್ಪೊಡೆ ಕಡುಕೆಯ್ದು ಗೆಲ್ವುದು. ಅಲ್ಲ ದೊಡೆ ಹಯದ ಪಂಬಲನುಟಿದು ಕೆಮ್ಮನೆ ಪೋಪುದು. ಪಸುಳೆಗಿಸುಳೆಯೆಂದು ತೆಗಟ್ಟಿ ನೀಂ ಮೇಣಾವ ಮುದಿಗೂಗೆಯೊ! ಪಸುಳೆತನಂ ಕೋಲ್ಗೊಳವೆ! ಆಯ್ಯನಂ ಬರಿಪುದು ಗಡ! ನಿಮ್ಮಂ ಬಾರಿಸಿ ಕೈಮಿನಿಗೆ ಸೇರಿಸಿದಿಂಬಟಿಕ್ಕಂ— ಎಂದಾಡಿದಂ.

ಅನಿತಱೊಳ್ ಭಾರತಿ ಮುನಿಸಿಂ ರುಕ್ಮಾಂಗದನ ಸರಿಸದೊಳೊತ್ತಿ ಪತ್ತಂಬುಗಳಿಂ ಹಯಮನೇಟಂಬಿಂ ಸಾರಥಿಯನೈದಂಬುಗಳಿಂ ರಥಮನೆರ
೨೦ ಡಱಿಂ ಧ್ವಜಮಂ ಮುಱಿದು ಬೊಬ್ಬಿಱಿದು ಕೂರಂಬಿನಾತನಯೆ ಬಿಲ್ಲಂ ಮುಕ್ಕಡಿಗೆಯ್ದಂ. ಅನಂತರಮರಮಗಂ ಪಡಿದೇರನೇಱಿಯುಂ ಪೊಸಂಬನಂ ತೇರಾಳನೇರ್ಪಡಿಸಿಯುಂ ಪೊಸತೆನಿಪ್ಪ ಬಿಲ್ಲಂ ಕೊಂಡಳವಟ್ಟು ಜೇವಡೆದು ಮಾಕೊರ್ಂಡು ಕನಲ್ದೆಲೆಲೆ ಮೂಟ! ಅಂತುಟೇಂ ಸೊರ್ಕು! ತೇರುಂ ವಾರು ವಮುಂ ಪೋದೊಡೇಂ ಬಿಲ್ಮುಱಿದೊಡೇಂ, ಪಡಿದೇರಿರದೆ! ಸಾರಥಿ ಬಾರನೆ! ನಿನ್ನಂತಿರಾಂ ದೇಸಿಗನೆ! ತೋಳ ಬಲ್ಪಿಂಗೆ ವೆಯೊ?—ಎಂದು ಕಿಡಿಗೆದಱುವ ಪೊಂಗಱಿಯ ಕೋಲ್ಗಳಂ ಪಗೆಗೆಚ್ಚಂ. ಇಂತೆಚ್ಚಂಬುಗಳಂ ಕೊಚ್ಚಿ ಪುಷ್ಕಲಂ ಮೇಣೊರ್ಮೆಯುಂ ವರೂಥಮಂ ಮುಱಿದು ಸಾರಥಿಯುಂ ತಱಿದಂ. ಅಂತ ಪ್ಪುದುಮಿಾತೇರೇವುದೆಂದು ನೆಲಕಿಟಿತಂದು ಬೇರಿಗನನಪ್ಪಳಿಸುವೆನೆಂದೆ ಕೋಲ್ಗ ಳಂ ತಿರುವಾಯ್ಗೆ ಪೂಡಿ ಕಾದಿದಂ. ಆಗಳ್ ಪುಷ್ಕಲಂ ತಾನುಂ ತೇರನುಟಿದು
೩೦ ಧರೆಗೆ ದುಮ್ಮಿಕ್ಕಿ ಮಾಱಾಂತ ಕೈದುಗಾಱನೊಳ್ ಪೊಣರ್ದಂ.

ಇಂತಿಂತೋರೊಂದು ಪಗಲುಮಿರುಳುಮುಗಿಬಗಿಯಾಗೆ ಕಣೆಗಳಿನಿರ್ವರುಂ ಕಾದುತಿರ್ಪುದುಂ ಕಾಳೆಗಂ ಕಡಿದಾಯ್ತು. ಇಂತಿರಲೊಡಂ ರುಕ್ಮಾಂಗದಂ ದೊಣೆಯುಂ ಕಣೆಯುಂ ಕಟಿದು ಗದೆಗೊಂಡು ಮೋದುವುದುಂ, ಮಱುವಕ್ಕದ ಬೀರಂ ಪೆಱದೆಗೆದೆಡಕಂ ಬಲಕಂ ತಿರಿಗಿ ತನ್ನೊಂದು ಪೊಸಮಸೆಯ ಬಾಣದಿಂ ಕಡಿದಂ. ಮತ್ತಂ ಗಜೆ ಮುಱಿಯೆ ಕೂರಸಿಯುಂ ಕತ್ತರಿಸಲಾಟಿಪ ರಾಯು ಗುವರನಂ ನೋಯಿಸಿದಂ. ಅರಮಗನಿಂತೊಂದು ಮಾಷ್ಕೆಯಿಂ ನೊಂದು ಗಾಱುಗೆಟ್ಟು ಜೊಂಪಿಸಿ ಮೈಮಱೆವುದುಂ ಬೆಂಬಟಿಯ ಸೇನೆ ಬೆಂಗುಡು ವುದುಂ, ಆನೆಕುದುರೆಗಳ್ ದೆಸೆಗೆಟ್ಟು ಚದರಿದುವು. ಹಾಹಾರವಮೆತ್ತಂ ಮಾರ್ಬಲಸೊಳ್ ಮಾರ್ದನಿಗೊಂಡುದು. ಈಯೆಡೆಯೊಳೀವಿವರಮಂ ಚರರ್ ವೀರಮಣಿಗಱಿಕೆಗೆಯ್ವುದುಂ ಪಾವಡರ್ದಂತೆ ಸಿಡಿಲೆಱಗಿದಂತೆ ಸಂಜೇಱಿದಂತೆ ಸಂಜೆ ಕಾವಳಿಸಿದಂತೆ ರಾಯಂ ಮುಂದುಗೆಟ್ಟು ಕಂಗೆಟ್ಟು ಬಗೆಗೆಟ್ಟು ಬಟ್ಟೆ ಗೆಟ್ಟು ಬಸಗೆಟ್ಟು ನಡೆಗೆಟ್ಟು—ಎನ್ನರಗಿಳಿಗೇನಾಯ್ತು! ಎನ್ನ ಪಲ್ಲಮಱಿಗೇ ನಾಯ್ತು! ಎನ್ನ ಚಿಂತಾಮಣಿಗೇನಾಯ್ತು! ಎನ್ನ ಬಗ್ಗಿನ ಬಿತ್ತಿಗೇನಾಯ್ತು! ಎನ್ನ ಐಸಿರಿಯ ಸಿರಿಗೇನಾಯ್ತು! ಎನ್ನ ಬಾಷ್ಪೊಲಕೇನಾಯ್ತು! ಎನ್ನ ಸಂತಸದ ಸುಗ್ಗಿಯ ಮಱಿಗೋಗಿಲೆಗೇನಾಯ್ತು! ಎನ್ನ ಮುದ್ದಿನ ಕಣಿಗೇ ನಾಯ್ತು! ಎನ್ನ ಪುಟ್ಟಗುವರಗೇನೆಡರಾಯ್ತು! ಎಂದು ಕಡುದುಗುಡದಿಂ ತಾನೊರ್ವನೆ ಪೊಱಮಟ್ಟು ರಣಕ್ಕೈದಿವಂದಂ. ಅರೆಮುಗಿದ ಕಣ್ದಾವರೆಯ ಕುಂದಿದ ಪೆಱೆಮೊಗದ ಮುದ್ದುಗುವರನಂ ತೋಳದಿಂಬಿನೊಳ್ ಕಂಡು ತಾನುಂ ಹಮ್ಮದಂಬೋಗಿ ಕದಂಪಿನತ್ತಣಿನಿಟಿತರ್ಪ ಕಣ್ಣೀರ ತಣ್ಪಿನಿಂದೆಂ ತಾನುಂ ಚೇತರಿಸಿ ಸನಿಯುಮಂ ಸಾರ್ದು ತಳದಿನೆತ್ತಿ ಪೊಡೆಯೊಳೊತ್ತಿ ಪಣೆಗೆ ಪಣೆಗೊಟ್ಟು ಮಱುಮಱುಗಿ ಗುಣಮಂ ನೆನೆನೆನೆದು—ಹಾ! ಎನ್ನ ಕಂದ! ಸೊಗದ ಪೆರ್ಚುಂಬಗೆಯದುಕ್ಕಂದ! ಈಬಗೆಯೊಳೆನ್ನನುಟಿವ ಬಗೆ ನಿನಗಾಯ್ತೇ! ನಿನ್ನೊಂದು ಪೆಂಪಿನ ಬೀರದತ್ತಣಿನಿನಿಬರುಂ ಸಾವಂ ತರ್ ಅಳವಿನ ಪಿಡಿಯೊಳೆಡೆಗೊಂಡು ಕಪ್ಪಮನೀಗುಂ ಮಱೆವಾಱ್ಗುಂ ನೆರ ವಕ್ಕುಂ. ಇನ್ನೆನಗಾರೊಳರ್ಪೈ! ಇನ್ನೆಮಗೇವುದೊ ಚಲಮೇವುದೊ ಬಲಮೇ ವುದೊ ಪೂಣ್ಕೆಯೇವುದೊ ಮೊನೆಯೇವುದೊ ಪನ್ನತಿಕೆಯೇವುದೊ ಐಸಿರಿ ಯೇವುದೊ ನಾಡೇವುದೊ ಪಾಡು, ನೋಡಿರೆ ದೇವಾ! ಜಸಮುಂಟು, ಸಕಲ ಸೌಭಾಗ್ಯಮುಂಟು, ಸಂತಸದುಕ್ಕೆವಮುಂಟು, ಕಡುಪುಂಟು, ಮಾನ್ಯಮುಂಟು, ಹೂನ್ಯಮುಂಟು, ಪಣಮುಂಟು, ಗುಣಮುಂಟು, ನೀನುಳ್ಳೊಡುಂಟು ಪೆಱರು ಳ್ಳೊಡುಂಟೆ ಪೇಟೆಲೆ ಮಗನೆ! ಜಗದ ರಾಯುರೆನ್ನಂ ಪುಲ್ಗೆ ಲೆಕ್ಕಿಸರೆ! ಚೂಣಿಯ

ಜೋದರಿರೆ ಕಟ್ಟಂಕದ ಸಾದಿಗಳಿರೆ ರಥಿಕರಿರೆ ಬಾಹತ್ತರದ ಗೋಪಾಯ್ಲರಿರೆ
ಬೆಂಬಲಮಿರೆ ನಿನ್ನಸೊರ್ವನನೆ ಮಿಟ್ಟುವಾಯ್ದುಳಿ ಕುವರಾ! ಹಾ! ಹಾ!
ಇನ್ನೀ ನಿನ್ನ ಪೆಂಡಿರ್ಗೇಂ ಬಟ್ಟೆಯೊ! ಪೆತ್ತಬ್ಬೆಯೆಂತೊಡಲ್ವಿಡಿದಿರ್ಪಳೊ!
ಎನಗೇಂ ಗತಿಯೋ ಪೇಟ ಬಾಳ! ಅಕ್ಕಟ! ಪಗೆಗಳ್ ನಲಿವಂತು, ಬಳಗ
ಮುಬ್ಬಸಂಬಡುವಂತು, ಸಾಮಂತರ್ ಸೋರ್ಕುವಂತು ಆನಟಿಲ್ವಂತು ದಟಂ
ಕಣ್ಗಿಡುವಂತು ಮಾಡಿ ಪೋದಯ್ ಮಗನೇ! ಎಂತು ತಾಳ್ವೆನೊ! ಎಂತು
ಬಾಳ್ವೆನೊ! ಎಂತು ಕಾದುವೆನೊ! ಎಂತು ಗೆಲ್ವೆನೊ! ಎಂದು ಕುವರಂ ಮಡಿದ
ನೆಂದೇ ಭ್ರಾಂತಿಯಿಂ ಪಲವಗೆಯೊಳಟಿಲುತುಮಿರ್ಪುದುಮತ್ತಲ್ ಪುಷ್ಕಲ
ನೊಡ್ಡಿ ಬಂದು ನಿಂದು ರಾಯನೊಳ್—ಎಲೆ ಮರುಳೆ! ಕಾದುವೊಂದು ಬೆಸ
೧೦ ನದಿಂ ಬಂದೀಗಳೀ ಪೆಣನಂ ಕಂಡು ಮಱುಗುವ ಗಂಡಂ ಷಂಡಂ. ಚೀ! ಪೋ!
ಬಿಲ್ಗೊಂಡೆನ್ನೊಳ್ ಕಾದು. ಅಂತಾಱದೆಯಪ್ಪೊಡೆ ಕುದುರೆಯಂ ಬಿಟ್ಟೆಮ್ಮಂ
ನಂಬಿ ಬಾಳೆಂದು ಜಱೆವುದುಂ; ಪೊತ್ತಿದಗ್ಗಿಯೊಳ್ ನೆಯ್ಯನೆಱೆದಂತುಂ
ಕತ್ತಿದ ಕಡಿಯೊಳುಪ್ಪಂ ಲೆಪ್ಪಿಸಿದಂತುಮುರಿವ ಕಣ್ಣೊಳ್ ಸುಣ್ಣಮನಿಟ್ಟಂತು
ಮಾಗಿ ಕೋಪಶಿಖಿ ದಳ್ಳಿಸೆ ಕಿಡಿಕಿಡಿವೋಗಿ ಉರಿದು ಮುಱಿದೆರ್ದು ಪಗೆಯೊಳ್
ಮಾಱಾಂತು ತಱುಬಿ ಕಱುಬಿ ಪೂಱಂಬುಗಳಿನೆಚ್ಚು ಕಾದಿದಂ. ಆಗಳ್
ಬೆಟ್ಟು ಜರಿವಂತೆ ಕಾರೊಡಲ ಪೇರಾನೆಗಳುರುಳ್ದುವು. ಗಾಳಿಗೆ ಬಾಱೆ ದಿಂಡು
ಗೆಡೆವಂತೆ ಕಾಲಾಳ್ಗಳ್ ಕೆಡೆದುವು. ಬಲ್ಲಾನೆಯ ಮೆಟ್ಟಿನಡಿಯು ತೆಂಗಿನ
ಕಾಯಂತೆ ರಥಂಗಳ್ ಜಜ್ಜರಿವೋದುವು ಪಡಿದಟದೊಳ್. ಇಂತಪ್ಪುದುಂ ಪಗೆ
ಯತ್ತಣಿಂ ಗಾಱುಗೆಟ್ಟು ತಮ್ಮವರ್ಗೆ ಕೈದೋಱು ತಾಂ ನುರ್ಗಿ ಕಿನಿಸಿಂ
೨೦ ಪುಷ್ಕಳಂ ಪುಷ್ಕಳಂ ಶರದಿನೇಸಾಡಿ ಪಗೆಯೊಳ್ ಬೀರದಿಂ ಪೊಣರ್ದಂ.
ಇಂತೀಮಾಳ್ಕೆಯಿನೇಟಿರುಳುಂ ಪಗಲುಂ ಕಡುಕೆಯ್ದು ಕಡೆಯೊಳ್ ವೀರ
ಮಣಿಯ ಬಾಣಹತಿಗೆ ಮುಚ್ಛೆವೋಗಿ ಪೊಡಪಿಯೊಳೆಡೆಗೆಡೆದಂ. ಆಗಳ್
ಶತ್ರುಘನ ಸೇನೆಯೊಳ್ ಹಾಹಾಕಾರಂ ಪರಬಲದೊಳ್ ಭಾಂಕಾರಮುಱೆ
ಪೆರ್ಚಲೊಡಂ ತಾಂ ತಮಗೆ ಬೆಕ್ಕಸಂಗೊಂಡು ಸುಬಾಹು ಮುಂತಪ್ಪ ವೀರರ್
ನಡೆದರ್. ಶತ್ರುಘ್ನಾದ್ಯರುಂ ಕೈದುಗೊಂಡು ಮುಂಬರಿದು ವೀರಮಣಿಯಂ
ತಾಗಿದರ್.

ಆವೇಳೆಯೊಳಿತ್ತಲೀಶ್ವರಂ ಭಕ್ತನಂ ಕಾವೊಂದು ಬಗೆಯಿಂ ಪೊಱಮಟ್ಟು
ತನ್ನ ಪ್ರಮಥಗಣಂಬೆರಸು ರಣಕೆ ಪೋಪವಸರದೊಳ್ ತಱಿಮಿಂಡಿಯಪ್ಪ
ತನ್ನಯೆ ನುಡದಿಯನಿಕ್ಷುಮತಿಯಂ ಕಂಡು ನೇಹದಿಂ—ಎಲೆಗೆ ಜಾಣೆಯರ
೩೦ ರಸಿ! ಕೇಳ್ ಇದೆಕೊಳಿಂದು ನಿಮ್ಮಯ್ಯಂಗೆ ಕಡುಪಿನ ಪಗೆರಾಯರೊಳ್

ಕುದುರೆಯೊಂದು ನೆವದಿಂ ಸಂಗರಂ ನೇರಿಟ್ಟುದು. ಅಂತದುಕಾರಣಮಾತಂಗೆ
ಮಾವಂಗೆ ಬೆಂಬಲಮಾಗಿ ಪೋದಪೆನೀಗಳೆ. ನೀನಟಲದಿರ್. ಸೊಗದೊಳರಿಗಳಂ
ದೆಸೆಗಿಡಿಸಿ ಬರ್ಪೆನೆಂದಂ. ಆ ನುಡಿಗೆ ಬೆಕ್ಕಸಂಗೊಂಡು ಅಂತಪ್ಪೊಡೆ ತಳ್ವದೆ
ನೀಂ ಪೋಗಿ ಕಾದಿ ಕಾದೀವುದೆಮ್ಮಯ್ಯನನಣ್ಣನನೆಮ್ಮ ಬಳಗಮನೆಮ್ಮ ದಟ
ಮನೆಮ್ಮನೆಲ್ಲರನೆಂದು ತಡಂಬಡದಯ್ಯನ ನೇಹದಿಂ ತಾಂ ಮಱುಗದೆ ಬಗೆಗುಂ
ದದೆ ಕಾಂತನಂ ರಣಕೆ ಬೀಳ್ಕೊಟ್ಟಳ್. ವೀರಪತ್ನಿಯರ್ಗಿದು ಸಾಜಂ. ಇಂತಾ
ಪೊನಹುಗಾರ್ತಿ ಬಾಂಗುರುಳನ ಮುಂಗುರುಳನೊಪ್ಪದಿಂ ಸೈತು ನೇವರಿಸಿ,
ಮುಡಿಜಡೆಯನ ಕಡ್ಡಣಮಂ ಚೊಕ್ಕಳಂ ತುಱುಬಿ, ಪೆಱೆಸೂಡಿದನ ನಡು
ನೆತ್ತಿಯ ಬಟಲ್ಮಡಿಗೆ ಬಂದುಗೆಯ ಪೂಸರಮಂ ಮುಡಿಸಿ, ತೊಱೆದಲೆಯನ
ಮುಂದಲೆಗೆ ಸೀಸಕವನಳವಡಿಸಿ, ಫಣಿಕುಂಡಲನ ಕರ್ಣಕ್ಕೆ ಮಕರಕುಂಡಲಮ  ೧೦
ನಿಟ್ಟು, ಕಂದುಗೊರಲನ ಬೆಳ್ಗೊರಲೊಳ್ ಜಾಗವರಲ ಮಲಕನಮರ್ಚಿ,
ಪಂದಲೆವಚ್ಚಂಗಚ್ಚಸರಮಂ ತುಡಿಸಿ, ಬಗ್ಗದೊವಲುಡೆಯಂಗೆ ಪಟ್ಟಣೆಗೆಯ
ನುಡಿಸಿ, ಬೂದಿಬಡಿಕನ ಮೆಯ್ಗೆ ಬಾವನ್ನಮಂ ತಿಮಿರ್ದು, ಬೆಳ್ಳಡಿಯ ಬೆಳ್ಳಡಿಗೆ
ಮಿಸುನಿವಾವುಗೆಯನೊಪ್ಪಿಸಿ, ತಿಸುಳಿಯ ಕೈಗೆ ಬಲ್ಗಣೆಗಳನಿತ್ತು, ನೊಸಲ
ಕಣ್ಣ ಮಾದೇವನ ಮಿಸುಪ ನೊಸಲೊಳ್ ಬೀರಸೇಸೆಯನಿಟ್ಟು, ಐಮೊಗನ
ಮೊಗಸಿರಿಯಂ ಕಂಡೊಂದಲಂಪಿಂ ತಾನೆ ಮುದ್ದಿಟ್ಟು ಕಳಿಪುವುದುಮೆಲರುಣಿ
ವೆದೆಯಂ ಬೀರಂ, ಬಿಗುರ್ವರಿಜಂ, ಹಳಿಗಂ, ಕೊಂಡಂ, ಗುಳಿಕಂ, ಮುಂತಪ್ಪ
ಭೂತವೇತಾಳಂಗಳ ಮರುಳ್ವಡೆವೆರಸು ಅಗ್ಗಿಗೆ, ಬೆಂಗದಿರಂಗೆ, ಮುನ್ನೀರ್ವೆಂ
ಕೆಗೆ, ಸಿಡಿಲ್ಗೆ ನೂರ್ಮಡಿಯಿಂ ಕಾಯ್ದುಂ ಮಾಮಸಕಂ ಮಸಗಿ ಕೊಳುಗು
ಳಕೆ ನೆಡೆತಂದು ಕಡೆಗಾಲಕೆಂತಂತು ಜಡಿದಾರ್ದು ಪಗೆಯೊಳ್ ಕಾದುವ  ೨೦
ರಾಯಂಗೆ ಬೆಂಬಲವಾದಂ. ಮತ್ತಮಾಗಣಂಗಳುಂ ಬೊಬ್ಬಿಱಿದು ಮರ್ಕಟ
ಸೇನೆಯಂ ತಱುಬಿದುವು. ತಱುವಾಯಿಂ ಶತ್ರುಹನೊಳ್ ಮೊನೆಗೆ ನಿಂದ
ರಾಯನಂ ಪಿಂದೊತ್ತಿ ಪಣೆಗಣ್ಣಂ ತಾನೊಡ್ಡಿ ನಿಲ್ವುದುಮಣುವಂ ಸಿಡಿಮಿಡಿ
ಗೊಂಡಸನಸದಿಂ ದಪ್ಪಗವಗೆಯನಂ ಕೈಯ ಪೆರ್ವರನೊಳ್ ಸೆಲೆಯೊಳ್
ಮಲೆಯೊಳ್ ಮಲೆದು ತಾಗಿದಂ. ಸುರರಳ್ಕೆ ದಿಗಿಭಂಗಳ್ ಬಳ್ಕೆ ಕಮಠನ
ಕೊರಲ್ ಕುಸಿಯೆ ಭೋಗಿಪನ ಭೋಗಂ ನಸಿಯೆ ದೆಸೆಗೊಡೆಯರ್ ಸರಿಯೆ
ಬೆಟ್ಟುಗಳ್ ಜರಿಯೆ ಕಡಲ್ ಮೊಗೆಯೆ ಔತ್ಪಾತಕವೊಗೆಯೆ ಸಬ್ಬಸಬ್ಬರಂ
ಕಡಿದಾಯ್ತು. ಬೊಮ್ಮಾಂಡದೋಡು ಬಿರಿವಂತು ದೆಸೆಮೂಲೆಗಳ್ ಪಳಂಚಿ
ಮಾರ್ದನಿಗುಡುವಂತು ಕಡಲ ಸಬುದಮಡಂಗುವಂತು ಸಿಡಿಲ ಪೊಡರ್ಪು
ತೆಕ್ಕುವಂತು ಗುಡುಗುಡಿಸಿ ಗುಡುಗಿ ಬೊಬ್ಬಿಱಿದಂ ಕಲಿಯಣುವಂ. ಜವನಂ  ೩೦

ಜವಗಿಡಿಸಿದ ಮರ್ಬಿಗನಂ ತಱುಬಿದ ಗಜಾಸುರನಂ ಗೆಲ್ದ ಜಲಂಧರನಂ
ಗೋಣ್ಮುಱಿಗೊಂಡ ಬಾಂಬೊೞಲ ರಕ್ಕಸರಂ ಗಾಱುಗಿಡಿಸಿದ ತನ್ನೊಂದಧ
ಟೆಂದಣುವನನಿದಿರ್ಚಿದಂ ಫಣಿಭೂಷಂ. ಮುಂಬರಿದ ಸಿಂಬಿಣಿಯನಣೆದುಂ
ಸೊಣೆದುಂ ಕಟ್ಟಂಕೆಯ ಲಂಕಿಣಿಯುಂ ಕೊಂದುಂ ತಿಂದುಂ ಅಕ್ಷಯಕುಮಾ
ರನಂ ತೂಳ್ದುಂ ಪೋೞ್ದುಂ ಮಹಿರಾವಣನಂ ಕಡಿದುಂ ಕುಡಿದುಂ ಕಾಲ
ನೇಮಿಯುಂ ಜಡಿದುಂ ಬಡಿದುಂ ಸಂದ ತನ್ನ ಪನ್ನತಿಕೆಯಿಂ ಪೊಣರ್ದ ರಾಮ
ಭೃತ್ಯಂ ನಸೆಮಸೆಯ ತಿಸುಳಂ ಬೆಳಬೆಳಗೆ ಉರಿಗಣ್ಣ ಜಾಲೆ ದಳ್ಳಿಸೆ ನಿಚ್ಚವಚ್ಚದ
ಪಂದಲೆ ತೊಂಗಲಾಡೆ ಸಿರದ ಹುರಂ ಸೀೞುಂಬುಳಾಡೆ ನೇವಳದ ಪಾವಳವಿಂ
ಬುಸುಗುಟ್ಟೆ ಮಾರುತಿಗೈಮೊಗಂ ಮುಮ್ಮೊಗನಾಗಿ ಜಡಿದಂ. ತುಱುಗುಗೂಂ
೧೦ ದಲ್ ಕೊಕ್ಕರಿಸೆ, ಕೊನೆವಾಲಮಿನಿಸುಂ ನಿಮಿರ್ದು ಸಂಚಳಿಸೆ, ಮೈ ಪೆಟ್ಟು
ವೆರ್ಚೆ, ನಿಡುಮುಸುಡ ಕಡುಮುಳಿಸು ಪೊಱಪೊಣ್ಮೆ ಮುಂಬರಿದಣ್ಮಿ
ಮೇಲ್ವಾಯ್ದು ಕಪರ್ದಿಯೊಳ್ ಕೈದೋಱಿದಂ ಮರುತ್ಸಂಜಾತಂ.

ಎಲೆಗೆ ಸೊಬಗೆ! ಇಂತೊಂದು ಮಾಡ್ಕೆಯಿಂ ಕಾಮಾರಾತಿಯುಂ
ಮಾರುತಿಯುಂ ತಂತಮ್ಮೊಳ್ ಪಾಡುಪಂತದಿಂ ನೆಱೆದ ಬಿನ್ನಣದಿಂ
ಕಚ್ಚಱಿದ ಕಿನಿಸಿಂ ಸರಿಸಾಟಿಯಿಂ ಪಾಟಿಯಿಂ ಸೂಟಿಯಿಂ ಸೆಣಸುತಿರ
ಲೊಡಮತ್ತಲೋರೊಂದೆಡೆಯೊಳ್ ಶಿವಗಣದ ಕೋಡಗರ ಕಾಳೆಗಂ ಬಿಮ್ಮ
ನಾಯ್ತು. ಜನ್ನವಗೆಯುಂಗೆ ಸುಗ್ರೀವಂ, ಬಿಗುರ್ವರಿಜಂಗಂಗದಂ, ಸಂದಿಗೆ
ನೀಲಂ ಮಸಗಿ ಮಾಱಾಂತರ್. ಎತ್ತಂ ಬಡಿಯು ಕಡಿಯು ಕುಡಿಯು ಮರ
ಸೊಟ್ಟಿಲ್ ಬೆಟ್ಟಾಯ್ತು. ಇಟ್ಟಿಯ ಬಟ್ಟಗೈದಿನ ಕೊಡಲಿಯ ಮುದ್ಗರದ
೨೦ ಸೂಲದ ಕತ್ತಿಯ ಕೂರಂಕುಸದ ಶಿವಗಣರ ಕಡುಗಲಿತನದ ಪೊಣರ್ಕೆ ಬೆಟ್ಟಿ
ತಾಯ್ತು. ಇಂತಿರಾರಣಾಂಗಣಂ ಬೊಬ್ಬಿಱಿವ ಗಂಡರಱಚುವ ಶಿವಗಣಂಗಳ
ಪರ್ಚುವ ಮಂಕಡರಾರ್ವ ಮಾಲಿನಿಯರ ಊಟ್ಸ ಬಳ್ಳುಗಳ ಗೀಟಿಡುವಾನೆಗಳ
ಕಿಚಿಕಿಲ್ವ ಹಯಂಗಳ ಕುಣಿವ ಮರುಳ್ಗಳ ನಲಿವ ಬೇತಾಳಂಗಳ ಕೋಲಾಹಲಂ
ಬಿಱುಸಾಗಲೊಡಂ ಮುಱಿದಟ್ಟೆಯು ಸುರಿದ ಕರುಳ ನೆರೆದ ಕೆನ್ನೀರೆಡೆಯೊಳೆತ್ತಂ
ಕಾಕಂ ಘೂಕಂ.

ಮತ್ತಂ ಪೆಱತೊಂದು ತಾಣದಲ್ಲಿ ವೀರಮಣಿಗಂ ಶತ್ರುಹಂಗಂ ತುಮುಲ
ಯುದ್ಧಂ ಸಮತಳಿಸಲೊಡಂ ಬಲ್ಪೊಟ್ಟುಮೇಱೊಡಲ ಎಕ್ಕಲವುಲಿಗಳಂದ
ದಿಂ ಮಸಗಿ ಪೊಣರುತುಮಿರ್ದರ್. ತುತ್ತತುದಿಯೊಳ್ ರಾಘವಾವರಜಂ ತಾಂ
ಕೈಸೋಲ್ವುದುಂ, ಪಡೆ ಬಡವಪ್ಪುದುಂ, ಮಿಡುಕಿನ ಬೆಂಬಲಂ ಪಜ್ಜೆಗೆಟ್ಟು
೩೦ ಬೆಂಗುಡುವುದುಂ, ಕಟ್ಟುಬ್ಬರದುಬ್ಬಸದಿಂ ಮುಟ್ಟುಮಱಿದು ದಿಟ್ಟಿಗೆಟ್ಟು

ಇಂದಿಗೆಮಗರಿಯೊಳ್ ಸೋಲಮಾಯ್ತೆಂದು ತಱಿಸಂದು ಬಟಿಕ್ಕಂ ಮುಂದು
ಗಾಣದೆ ಶ್ರೀರಾಮಚಂದ್ರಮನ ಪದಕಮಲಮನೆ ನೆನೆನೆನೆದು ಪಲುಂಬಿದಂ.
ಆಗಟಿಗೆಗಯೋಧ್ಯೆಯೊಳ್ ದೀಕ್ಷೆಯೊಳಿರ್ದ ಕಾವ ದೇವರ ದೇವಂ ನೋದ
ರಂಗೆ ಮೆಯ್ದೋಱಿಯುಮನಿತೊಂದು ಬನ್ನಮಂ ಕೇಳ್ದುಂ ತನ್ನವನಂ ಸಂತ
ಮಿಟ್ಟುಮಿರ್ಪುದುಮಾಗಳ್ ತ್ರ್ಯಂಬಕಂ ತನ್ನೊಡೆಯಂ ತಾನೆ ತಮ್ಮನುಮಂ
ಸಮಂತೆಮ್ಮನುಮನುದ್ಧರಿಸಲ್ಕೆಂದು ಬಿಜಯಂಗೆಯ್ದನೆಂದು ಬಗೆದು ಮಾರುತಿ
ಯೊಳ್ ಕದನಮನಿನಿಸುಂಬೊಟ್ಟುಮುಟಿದು ರಾಘವನ ದರ್ಶನಕ್ಕೈತಂದಂ.
ರಾಮಭೃತ್ಯನುಮೀವಿವರಮನಱಿತು ಪಲವುಂ ದಿನದೊಂದಗಲ್ಕೆಯ ಬೇಸಱಿಂ
ತಿಳಿದು ತಾನುಮೊಡೆಯನೆಡೆಯೊಳ್ ಬಂದು ನಿಂದಂ. ಮತ್ತಮನಿತಱೊಳ್
ಸುಗ್ರೀವಾದಿ ಮರ್ಕಟರುಂ ಸುಭುಜಭೂಜಾನಿಯುಂ ಬಂದೊದವಿದರ್. ವೀರ ೧೦
ಮಣಿಯುಂ ತನ್ನಳಿಯನ ಬಟಿಯೊಳೆ ಬಂದಂ. ಆವೇಳೆಯೊಳ್ ಪರಮೇಶ್ವರಂ
ಜಗದೀಶ್ವರನಂ ಕಂಡೆಱಗಿ ಭಕ್ತರಂ ಪೊರೆವ ಪೊಱೆಯಂ ಪೊಱುವಿನಂ ತಾಂ
ತನ್ನೊಡೆಯನನಿದಿರ್ಚಿದ ದೋಷಮಂ ಮಱೆದು ಕಾವುದೆಂದು ಬಿನ್ನಯಿಸಿದಂ.
ಆಗಳ್ ರಾಜನುಮಱಿವುಗೊಂಡು ದೇವರ ಜನ್ನದ ಹಯಮಂ ಕಟ್ಟಿದಪರಾ
ಧಮಂ ಕ್ಷಮಿಪುದೆಂದು ಪ್ರಾರ್ಥಿಸಿದಂ. ರುಕ್ಮಾಂಗದನುಂ ಶ್ರೀರಘುಪ್ರವರ
ನಂ ಮಱೆವೊಕ್ಕಂ. ಬಟಿಕ್ಕಮಾಮಾದೇವಂ ತನ್ನವರಿಂ ಹಯಮಂ ಬರಿಸಿ
ಕಪ್ಪಮಂ ತರಿಸಿ ರಾಘವನ ಚರಣಕರ್ಪಿಸಿದಂ. ಮತ್ತಮಿಂತಿರೆ ತನಗಂ ಶಿವಂ
ಗಮಿನಿಸುಂ ಭಿನ್ನಮಿಲ್ಲೆಂಬ ಮಾಱ್ಕೆಯಿಂ ರಘುಪ್ರವರನೀಶ್ವರನಂ ನೇಹದಿಂ
ದೊಡಂಬಟ್ಟುಂ, ರಾಜವರ್ಗದೊಳನಿಬರುಮಂ ಸಂತವಿಟ್ಟುಂ, ತಮ್ಮವರಂ
ಸೇನೆಯಂ ಕೂರ್ಮೆಯಿಂ ಸೈತಿಟ್ಟುಂ, ತಾಂ ಮೈಗರೆದು ಮಾಯುಮುಪ್ಪು ೨೦
ದುಂ ಶತ್ರುಘ್ನಾದ್ಯರ್ ವೀರಮಣಿಯೊಂದು ಕೆಳೆತನದಿಂ ಹರನೊಂದು ನಲ್ಮೆ
ಯಿಂ ಮುಂತೆ ಬಿಜಯಂಗೆಯ್ದರ್.

ಎಂಬಲ್ಲಿಗೆ ಶ್ರೀರಾಮಾಶ್ವಮೇಧದೊಳ್
ದೇವಪುರ ವರ್ಣನಂ ಚತುರ್ದಶಾಶ್ವಾಸಂ ಸಂಪೂರ್ಣಂ.

---

## ಹನುಮತ್ಪರಾಜಯಂ

ಎಲೆಲೆ ಕಾಮಿನಿ! ಕಾಮಕಳಾನಿಧಾನೆ! ಕಾಮಮದಾಂಧಗಂಧ ಸಿಂಧುರ ಬಂಧುರಯಾನೆ! ಕಾಮಃಕಾಳೋರಗಕೇ . . .

ಮನೋ—ಎನ್ನ ರನ್ನ! ಇಂದಿನಿತಿಂತೇಂ ಚೆಲ್ವಿನೊಂದು ಬಿತ್ತರದ ಭಂಗಿಯ ಪೊಸ ಬಣ್ಣನೆ ಮಿಣ್ಣನೆ ನಿನ್ನ ನಚ್ಚುಮೆಚ್ಚಿನ ಕಾಮನೊಂದು ಜಾಣದೊಳೆ ಬೆರೆತುದು?

ಮುದ್ದ—ಸಾಜಂ. ಈಗಳಿವಱಲ್ತೆ ಎಮ್ಮನೊಲ್ದ—(ಓ ತಪ್ಪಿದೆಂ ತಪ್ಪಿದೆಂ) ನಿಮ್ಮನೆ ಒಲ್ದ ಮುಟ್ಟಿನ ಕಾಮನ ಪೇರುಕ್ಕೆವದ ಗಲಬೆಯ ಪಿರಿಯ ದೇವಸಂಗಳ್. ೧೦ ಇದೆ ಇದೆ ಗಾಡಿಯ ನಾಡವೆಣ್ಗಳ ರೂಢಿಸಿದ ಸಂತಸದುಮ್ಮಹಂ ತಲೆಮಿಾಱಿ ಬೀದಿವಱಿವುದು. ಅಂತದಱನೀಪೊಟ್ಟು ಕಾಮನ ನಾಮದೊಂದು ಸೆನಹು ತಾಂ ತನಗೆ ಬೇಡವೇಡೆಂದೊಡಂ ಕೊನೆ ನಾಲಗೆಯನೊತ್ತಂಬದಿಸಡರೆ ವರ್ಪುದು. ಇದು ಮೊದಲಾಗೆ ಬಿನ್ನನೆ ಸಿನ್ನನೆ ಕರೆವೆಡೆಯೊಳಂ ತಿಂಬ ಪುಟ್ಟಿಯೊಳೊಗ್ಗರಿಸಿದ ಕಡಲೆಯಂತೆಡೆಗೆಡೆಗೆ ಬಾಯ್ಗೇಱುವಂದಪುದೈಸೆ.

ಮನೋ—ಎಲೆ ಎಲೆ ರಮಣ! ಲೇಸುಲೇಸಯ್! ನಿನ್ನೀಬಣ್ಣದ ಬೆಡಂಗಿನ ಬಿಡುನುಡಿಯೊಂದು ನೆವದಿನೆನ್ನನೊಳ್ಪಗೆಯೊಳೆಟ್ಟಿಱಿಸಿದಯ್.

ಮುದ್ದ—ಅಂತಿದೇಂ ರಮಣಿ!

ಮನೋ—ನಾಳೆಗಲ್ತೆ ಕಾಮನ ಕಟ್ಟಾಯದ ಹಬ್ಬಂ.

ಮುದ್ದ—ಓ! ಓ! ಬಂಗಿಯುಃಂಡಂ ಮುನ್ನುಂಡಃದಂ ಮಱೆವಂ ೨೦ ತಿರಾನುಮಃಱಿವುಗೆಟ್ಟಂ. ಅಪ್ಪುದಪ್ಪುದು. ಆದೊಡೇಂ; ನಾಳೆಗೆ ಪೂರಣಗಡುಬೊ, ಸೆಂಡಿಗೆಯೊ, ಮಂಡಿಗೆಯೊ, ಹೋಳಿಗೆಯೊ, ಸಜ್ಜಿನ ಬಿರ್ದಿನೂಟಕೆ?

ಮನೋ—ನಿನಗೊಂದೆ ಭೀಮಂಗೆಂತಂತು ತಿಂಬ ಬಯಕೆ.

ಮುದ್ದ—ಮತ್ತಮದೇಂ?

ಮನೋ—ನಾಳೆಗೆನಗೊಂದು ನೋಂಪಿ.

ಮುದ್ದ—ಅಂತಪ್ಪೊಡಾನೋಂಪಿಯಿರವೆಂತು? ಬಗೆಯೆಂತು?

ಮನೋ—ಪಿರಿದೇಂ ಸಂಜೆಯೊಳ್ ಮಿಂದು ಮಡಿಯುಟ್ಟು ಕಲ್ಪೋಕ್ತಮಾಗೆ ಕಾಮನಂ ಪವಣಿನರ್ಚಿಪುದೈಸೆ!

ಮುದ್ದ—ನೀನೊರ್ವಳಯೆ ?

ಮನೋ—ನೀನುಮಾನುಂ.

ಮುದ್ದ—ಇದಱಿನೇಂ ಗುಣಂ ?

ಮನೋ—ಈಪುಣ್ಣಿವೆಯೊಳ್ ಕಾಮನಂ ಕೂರ್ಮೆಯಿಂ ಭಜಿಸಿದೆ ವಪ್ಪೊಡೆ ಕಾಮೇಶನೆಮಗೊಲ್ವಂ. ಮೇಣೆನ್ನೆಗಮೆಮ್ಮನಗಲದಿರ್ಪಂ.

ಮುದ್ದ—ಅಂತಿರೆ ಮುತ್ತಬ್ಬೆ ಪೆತ್ತಂತಿರೊಂದು ಸಂತಸಮೆನಗೀ ನೋಂಪಿಯೊಳ್.

ಮನೋ—(ನಸುನಕ್ಕು) ಆದೊಡಮಿನಿತೊಂದು ನಿಯಮಂ ಪೊೞ್ತಡೆ ವಿಡಿದು ಬೈಗುವರೆಗಮುಪವಾಸಮಿರಲೇವೇೞ್ಪುದು.

ಮುದ್ದ—(ಬೆಗಡುಗೊಂಡು) ಈಗಳಾಂ ಕತ್ತರಿಯೊಳಾದೆಂ. ಕಲ್ಲೊಳ್ ಕಾಲ್ಬೆಟ್ಟಿದ ರಾಮನ ಹಯಮೆಂತಂತು ಮನಂ ಮುಂಗೆಟ್ಟುದು. ಅಂತಪ್ಪೊಡೀ ನೋಂಪಿಯನೊಲ್ಲೆಂ.

ಮನೋ—ಅಂತೇಂ ! ನಡೆವ ಜನ್ನಗುದುರೆಯೆಂದು ಕಲ್ಲೊಳ್ ಕೀಲಿ ಪಿದುದು ಪೇೞ !

ಮುದ್ದ—ಅಪ್ಪೊಡಕ್ಕುಂ. ಆದೊಡಿನಿತೊಂದಂ ನಿನ್ನಂ ಬೇೞ್ಪೆಂ. ನಾಳೆಗುಪವಾಸಮನುೞಿದ ನೋಂಪಿಯನೇರ್ಪಡಿಸಲೆವೇೞ್ಪುದು.

ಮನೋ—ನೋೞ್ಪೆಂ. ಮುನ್ನಂ ಕತೆಯಂ ಬಿತ್ತರಿಸು.

ಮುದ್ದ—ಆಯ್ತಾಯ್ತು ಕೇಳ್ ! ತೞುವಾಯಿಂ ದೇವಪುರದಿಂ ತಳರ್ದು ಭಾರತಾಂತದತ್ತಣ್ಗೈದಿ ಪೋಪ ಬೆಡಂಗಿನ ಚೆನ್ನ ಜನ್ನಗುದುರೆ ತನ್ನೊಂದು ಲೀಲೆಯಿಂ ಹೇಮಕೂಟಮಂ ಪುಗುತರ್ಪುದುಮಾಲದ ಬೇಲದೆಕ್ಕೆಯ ಬಿಕ್ಕೆಯ ಕಕ್ಕೆಯ ಹೊನ್ನೆಯ ಬನ್ನಿಯ ಬೇವಿನ ಮಾವಿನ ಮುತ್ತಿಯ ಮುೞ್ತುಗದ ನೆಲ್ಲಿಯ ಕಂಕೆಲ್ಲಿಯ ನೇಱಿಲ ನೆೞಲಿಂ ಕೞ್ತಲಿಸಿದ ಪೞುವೊಳೊಂದು ತೞ್ಪಲಂ ನುಗ್ಗಿ ನೋಳ್ದು ಪೊದರಂ ಪಾಯ್ದು ಮುಳ್ಗಿ ನಡೆಗೆಟ್ಟು ತಡೆವಟ್ಟು ಕೊೞಗಂ ಪೞಗದ ನೆರೆಯ ಮೞಿಯುಱಿಯೊಳ್ ತಾಂಟಿದತ್ತು. ಇಂತಾಗಲೊಡ ಮೊಡನೆಯೆ ಕಾಲ್ ಕೀಲಂ ಬೆಟ್ಟಿದಂತೆ ನಟ್ಟು ನಾಂಟಿರ್ಪುದುಂ ವಾಜಿ ಯೊಂದು ನಡೆ ಕಲ್ಲ ಪಾಪೆಯೊಂದು ನಡೆಗೆ ಪಾಸಟಿಯಾಯ್ತು. ಆಪೊೞ್ತಿಂಗೆ ಪೊಲಂಬುಗೆಟ್ಟು ಬಸಗೆಟ್ಟು ಮರವಟ್ಟ ಕುದುರೆಯಿರವಂ ಕಂಡ ಕಾಪಿನ ಭಟರ್ ಮಿಡುಕಿಂದಾರ್ದುಂ ಸೋವಿಯುಮೆೞ್ಬಿಸಿಯುಂ ಪತ್ತೆಸಾರ್ದುಂ ಬಾಲದೊಳೀೞ್ದುಂ ಗೋಣೊಳಲುಗಿಯುಂ ಕೊಡಂಕೆಯೊಳೆತ್ತಿಯುಂ ಸುತ್ತಿಯುಂ ಗತಿಯಂ ಕಾಣದೆ ಮತಿವಿಕಳರಾಗೆ ತಮ್ಮಡಂಗಾಯ್ತುಗ್ಗೀ

ಪರಿಯಂ ಕೇಳಿಪುದುಂ ಪಡೆವಳರೆಲ್ಲರ್ ದಿಮ್ಮನೇೞ್ದು ಬಿಮ್ಮನೈತಂದು ತಾಮುಂ ಕೈಗೊಟ್ಟು ಕುದುರೆಯಂ ಕೀೞಲಾಟಿಸಲೊಡಮೆಳ್ಳನಿತಾದೊಡಂ ಚಲಿಸದಿರ್ದುದು.

ಇಂತೊಂದು ಮಾೞ್ಕೆಯಿಂ ಪೊೞಿನಲ್ಮೆಯು ಕವಡುಗಾರ್ತಿಯ ಕಲ್ಲೆರ್ದೆ* ಯೊಳ್ ನಾಂಟಿದ ನಾಡಾಡಿ ನನ್ನಿಗ ಚೆನ್ನಿಗನ ಮನೋರಥದೊಂದು ಹಯದ ಕಾಲ್ಗಳಂತಿರೆ ಕಲ್ಲೊಳ್ ಕೀಲಿಸಿರ್ಪುದುಂ ಕಂಡು ಮಾಣದೈದಿ ತಮ್ಮಾಣ್ಮಂಗೆ ಬಿತ್ತರಿಸಿದರ್. ಆಗಳ್ ಶತ್ರುಘ್ನಂ ವೀರರ್ವೆರಸು ಕಟ್ಟುೞಿದಿನಾಬೞಿಗೈದಿ ಹಸುವಂ ಮುಟ್ಟಿ ತಟ್ಟಿ ಮತ್ತೊಂದಾಯತಿಯಿಂ ದಾವಿಂ ಬಿಗಿದುಮುಗಿದು ಮಾೞದೆ ಬೇಸರ್ವುದುಂ ಮರಂ ಮರವಟ್ಟಂತುಂ ಕಲ್ ಕಲ್ಗಟ್ಟಿದಂತೆ ವೊಲೊಂದಚ್ಚರಿಯಿನಣುವಂಗೆ ಮುಸುಡು ನಿಡಿದಾಯ್ತು. ಜಾಂಬವಂಗೆ ಮೈ ಬಡವಾಯ್ತು. ಸುಗ್ರೀವಂಗೆ ಕೊನೆವಾಲಂ ಮುರುಂಟಿದತ್ತು. ಇಂತಿರೆ ಪೊಸಸುಸಿಲೊಳೆ ತಮ್ಮೊಂದು ಗೆಯ್ತಕ್ಕೆ ಬಸವೞಿದು ಮೆಯ್ಸೋಲ್ತ ಜವ್ವನಿ ಗರಿರವಂತಿರೆ ಬೀರರಿರವಪ್ಪುದುಂ, ರಾಯನೆಗ್ಗಿಂ ಕುಗ್ಗಿ ಬೆಗಡುಗೊಂಡಿರೆ ಬೞಿಯಂ ಬೞಿಯ ಮಂತ್ರಿ ಕೈಮುಗಿದು—ರಾಯ ! ಏತಱೊಂದು ಬೆಗಡೊ ? ಅಡಿಮುಡಿಯಂ ಪರಿಕಿಸದೆ ನೀನುಂ ಮಾಟದ ಬೆಲೆವೆಣ್ಣ ಕೈಮುಸಕಕ್ಕಱಿವು ಗೆಟ್ಟು ಕಳವಳಿಪೆಗ್ಗನೆಂತಂತು ಚಿಂತಿಪಯ್. ನೆರೆಯೊಳೆತ್ತಾನುಂ ಪುಣ್ಯಾ ಶ್ರಮಮಿರವೇೞ್ಕುಂ. ಮೇಣಾರಿಸಿಗಳತ್ತಣೊಂದು ಮೈಮೆಯಿಂ ಗೆಯ್ಮೆಯಿ ನಿಂತಾಯ್ತಕ್ಕುಮದಱಿನೀಯೆಡೆಯುನಱಿಸಿ ಸೋವನಱಿವುದು ಕರವೊಳ್ಳಿ ತೆಂದೆತ್ತಮಾಳ್ಗಳನೇರ್ಪಡಿಸಿ ಕಳಿಪಲೊಡಮವರೇಣ್ಮೆಯೊಳಂ ಪುಡುಕಿಯುಂ ಕಾಣದೆ ಬೞಿಕ್ಕಮೆನಸುಂ ದೂರದೊಳೊಂದು ತಾಣದೊಳ್—

ತಾಂ ತಮಗೋಲಾಡುವ ನೀರ್ವಕ್ಕಿಗಳ ಬಲ್ದನಿಯೊಳೊಡೆವೆರೆದ ಪೞಮೆ ವಱಿಗಳ ಮೆಲ್ಲುಲಿಗಸಿದು ಕಿಸಿದು ಪಿಸಿದೆಸೞ ತನಿಗಂಪಿಂ ಪೊರೆದ ಕಿಱು ಗಾಳಿಯ ತೀಟಕ್ಕೆ ಕದಡುಗೊಂಡ ತಣ್ಗೊಳದೊತ್ತಿನೊಳ್ ಬನರಾಣಿಯ ಮೊಗದ ಮೊಡವಿಗಳೊಂದು ಪಾಂಗಿನಿಂದೊಪ್ಪುವ ಮುಗುಳಿಂ ರಾರಾಜಿಪ ಕಾಡುಮಲ್ಲಿಗೆಯ ಬಲ್ಪೊದೞ ಬಳಸಿನೊಳೊತ್ತಿಡಿದಪವರ್ಗಲಕ್ಷ್ಮಿಗೆ ನೆಲೆ ವನೆಯೆನೆ ಕರಂ ಸೊಗಯಿಸುವ ಪುಣ್ಯಾಶ್ರಮವೊಂದು ಕಾಣಿಸಲೊಡಂ ಕಂಡುಂ ಮಾಣದೆ ಚೆಚ್ಚಱಿದಿಂ ಮರಲ್ದು ತಮ್ಮಾಣ್ಮಂಗೀಪರಿಯಂ ಬಿತ್ತರಿಸಿ ದರ್. ಆಗಳರಸಂ ಹರಿಸದಿಂ ಹನೂಮಜ್ಜಾಂಬವ ಪುಷ್ಕಳಾದಿವೀರರ್ವೆರಸು ಬೞಿವಿಡಿದೈದೆವಂದುಟಜಮಂ ಪೊಕ್ಕು ಪೞನುಡಿಯ ತೊಡಂಕನಡಿಗಡಿಗೆಡವ ದಂತಿರೆಡೆವಿಡದೆ ಬಿಚ್ಚಟಿಸಿ ಶಿಷ್ಯರ್ಗೆ ನಿರವಿಪ ಕುಲಪತಿಯಂ ಶೌನಕನಂ

ಸಾಗ್ನಿಯಂ ಬಲವಂದು ಕಟ್ಟಿದಿರೊಳ್ ಮುಗಿದ ಕೆಯ್ಗಳಿಂ ನಿಂದಿರ್ಪುದುಂ ಕೂರ್ಮೆಯ ಕುಡುನೋಟದಿಂ ಮಾಲಿಸಿ ಬಟಿಯಂ ಪುಲ್ಲ ಸಲ್ವಾಸಿನೊಳ್ ಕುಳ್ಳಿರವೇೞ್ದು ಪದುಳಮಂ ಕೇಳ್ದು ಪಚರಿಸುತಿತ್ತಣ್ಗೊಂದು ಬರವಿಂಗೆ ಕಾರಣಮಂ ಬೆಸಗೊಳೆ ರಾಯನಾಯುದಿಂ ಜನ್ನಗುದುರೆಯ ನಡೆಗೇಡಂ ತಮ್ಮ ಬಗೆಗೇಡಂ ಕೇಳಿಸಿದಂ.

ಆಗಟಿಗೆಗೆ ಶೌನಕನಿನಿಸುಂ ಪೊೞ್ತು ಜಾಸಂಬೊಕ್ಕು ಮೇಣಾಕಳಿಸಿ ಶತ್ರುಹಂಗೆ—ಎಲೆ ರಾಜ ಇದರ್ಕೆ ಮುನ್ನಿನೊಂದಿತಿಹಾಸಮುಂಟೇನೆನೆ—ಈನಾಡ ತೆಂಕಲ್ಗೆ ನಾಡರಸಿಯ ಜೀವನಾಳವೆನೆ ಪಿರಿದುವೊಪ್ಪಿ ಪರಿಯುತಿರ್ಪ ಕಾವೇರಿಯೆಂಬೊಂದು ನದಿಯುಂಟು. ಅದಱೊತ್ತಿನೊಳೊಂದು ಕೊಪ್ಪಲೊಳೊರ್ವಂ ಸಾತ್ವನವೆಸರ ದ್ವಿಜಂ ದ್ವಿಜರಾಜಧರನನೋರೊಂದು ದೆವಸಂ ೧೦
ನೀರುಂಡುಂ ಗಾಳಿಯುಂಡುಮುಣದೆಯುಂ ತಪಮನಾಚರಿಸುತಿರಲೊಡಂ ಕೆಲವಾನುಂ ದಿನಕ್ಕೆ ತಿಸುಳಿಗೆಯ್ಯಂ ಮೆಯ್ದೋಱಿದಂ. ಇಂತಿರೆ ವಿಪ್ರಂ ಜವನ ಮುಂಬಲ್ಗಳೆಡೆಯೊಳಾದನಪ್ಪುದುಂ ತನ್ನೊಂದು ಸುಕೃತವಿಶೇಷದಿನಂಬರದತ್ತಣಿನಿಟಿತರ್ಪ ವಿಮಾನಮನೊಂದಂ ಕಂಡನಾಗೆ ತಾನದನಡರ್ದು ಬಾಂಗೇಱಿದಂ. ಮತ್ತಮಾಗಳರೆಗಟಿಗೆಯೊಳೆ ತಾಂ ಪೊಂಬೆಟ್ಟಿನ ಕೋಡುಗಲ್ಲ ತುತ್ತತುದಿಯೊಳಿರ್ಪುದುಂ ಕಂಡಂ. ಇಂತು ದೇವಲೋಕಮಂ ಸಾರ್ದು ದೊರೆಕೊಂಡ ಪೊಸಸೊಗದ ಸುಗ್ಗಿಯ ಸುರ್ಗಿನೊಳ್ ಬಿಗಿವಡೆದಗ್ಗದ ಸಗ್ಗದ ಜೋಸೆಯರೊಂದು ನೆರವಿಯೊಳ್ ದೇಸಿಯಿಂ ಬೆರೆದಾಗಳುಂ ಬಿಸದಿಸುತ್ತೆ ಜಲಕೇಳಿಗದೊರ್ಮೆ ಮೊಗಸಿ ಪೆಣ್ಬಡೆವೆರಸು ಜಾಂಬವತೀನದಿಯಂ ಪುಗುತಂದು ಸೊರ್ಕಿನುರ್ಕಿನ ಬಿಡಿಬೀಸಱಿಂ ನೆರೆಯೊಳಘಮರ್ಷಣದೊಳಿರ್ಪ ೨೦
ಮುನಿಗಳಂ ಲೆಕ್ಕಿಸದೆ ತಕ್ಕಟಿದು ಮಕ್ಕಳಿಸಿ ಜಕ್ಕುಳಿಸಿದಂ. ಇಂತೊಂದು ಪೊಲ್ಲದ ಗೆಯ್ಮೆಯಂ ಕಂಡು ಮುನಿಗಳಾಂಗುಲಿಗೆಂತಂತು ಮುನಿದು ತಿರೆಯೊಳ್ ರಕ್ಕಸನಾಗಿ ಪುಟ್ಟೆಂದು ಬಯ್ದರ್. ಇಂತೀಬಯ್ಗಳ್ ಕೊಲೆವಿಡಿದಸ ಕಣ್ಣಾ ಸುಣ್ಣದ ಕಜ್ಜಳವಪ್ಪುದುಂ, ನೆತ್ತಿಯ ಮತ್ತಿಟಿದ ಕಳ್ಳುಣಿಗಳೆಂತಂತಱಿವುಗೊಂಡೊಯ್ಯಯ್ಯನಾಮುನಿಗಳೆಡೆಗೆ ಪರಿತಂದಡಿಯೊಳ್ ಪೊರಳೆ—ದೇವರೋವುದು ಕಾವುದು. ನಿಮ್ಮಡಿ ಮುನಿವೆಡೆಯೊಳೆಮಗಾವುದೊ ಕಡೆ! ಮುನಿಗಳೊಂದು ವೈಮೆಯೇನಿಟಿದೆ? ಇಂತಿದನಱಿತುಂ ಇರುಳ್ ಕಂಡ ಬಾವಿಯೊಳ್ ಪಗಲೊಳ್ ಬಿದ್ದಂತೆ ಪೊಲ್ಲಮೆಯಂ ತಗುಳ್ಚಿ ದುರ್ಗತಿಗಿಟಿದೆಂ. ನಿಮಗಂ ದುರ್ಜನನಾದೆಂ. ಪತ್ತೇಂ, ಪಲವೇಂ? ಒಲ್ವುದುಂ ಕೊಲ್ವುದುಂ ನಿಮಗಕ್ಕುಮೆಂದು—ಕಾಲ್ವಿಡಿವುದುಂ ಮುನಿಗಳ್ ಶಾಂತ ೩೦

ರಾಗಿ–ಆಯ್ತಾಯ್ತು. ಮೇಣೆಂದಿಂಗೆ ಬಟ್ಟೆವಿಡಿದು ಕಟ್ಟಾಯದಿಂ ಬೞಿವೋಪ
ರಾಮನಧ್ವರತುರಂಗಮಂ ತಡೆದು ನಡೆಗಿಡಿಪಯ್, ಮತ್ತಮೆಂದಿಂಗೆ ರಾಮ
ಚಾರಿತ್ರಮಂ ಮನದಣಿಯೆ ಕೇಳ್ವೆ, ಅಂದಿಂಗೆ ನಿನಗೆ ವಿಮೋಚನಮಕ್ಕೆ !
ಅನ್ನೆವರಂ ನೀನಾತೋರ್ಪ ಕಾಡೊಳ್ ಮಾಯದ ರಕ್ಕಸನಾಗಿರ್ಪುದೆಂದು
ಶೋಱಿ ತೊಱೆದರ್. ಸೌಮಿತ್ರಿ ! ಇಂತಿರೊಂದು ಬಿಱುಸುಡಿಗೆ ಸೊಮ್ಮೞಿದು
ಮೆಯ್ಗೆಟ್ಟ ಪಾರ್ವಂ ಕಕ್ಕಸದ ಬೊಮ್ಮರಕ್ಕಸನಾಗಿಯುಂ ಮಾಯದೊಂದು
ಪಜ್ಜೆವಿಡಿದೀಕಾಡೊಳ್ ಸಂಚರಿಸಿಯುಮೀಗಳೀನಿಮ್ಮ ಕುದುರೆಯಂ ನಡೆಗಿಡಿ
ಸಿದಂ. ನೀಮೀಗಡೆ ಪೋಗಿ ಹಯದ ಬೞಿಯೊಳ್ ನಿಲ್ತು ಶ್ರೀರಾಮಚರಿತಮಂ
ಕೇಳಿಸಲೊಡಂ ಬಾಡಬಂಗಂ ಬಾಡಬಕ್ಕಂ ವಿಮೋಚನಮಕ್ಕುಮೆಂದು
೧೦ ಪೇೞ್ವಿನಂ ; ರಾಯನಣುವಂಗೀಬಗೆಯುಂ ಬೆಸಸಿ ಕಳುಪಿದಂ. ಆಗಳ್ ರಾಮ
ಭೃತ್ಯಂ ಕುದುರೆಯೆಡೆಗೈದಿ ಪೋಗಿ ತಾನಱಿತಂತು ರಾಮಕಥೆಯಂ ಬಣ್ಣಿಸಿ
ಬಣ್ಣಿಸಿ ಪೇೞ್ವುದುಂ; ತಾಂ ತನಗೆ ಹಯಂ ತಡೆವಿಟ್ಟ ಪಾವೆಂತಂತು
ನಡೆವಟ್ಟು ತನ್ನಿಚ್ಛೆಯಿಂ ಪೋಗೆ ಕಂಡು ಸಾಲಿಗಂ ಮೂಲಿಗನಾದೊಂದು
ಸಂತಸದಿನಾಣ್ಮಸೆಡೆಗೈದೀವಿವರಮಂ ಬಿನ್ನಯಿಸಿದಂ. ಶತ್ರುಹನಾವಿವರಮಂ
ಮನದೆಗೊಂಡು ಸುಮತಿಯು ಸುಮತಿಗಂ ಮುನಿಯಱಿತಕ್ಕಮಣುವನ
ಸಾಹಸಕ್ಕಂ ಹಯದ ಬಗೆಗಂ ಕಟ್ಟಚ್ಚರಿದಾಳ್ದುವುದುಂ ; ಮುನಿ ಭೋಂಕನೆ
ಪುಷ್ಪಕಮನೇಱಿ ಪೋಪಾವಿಪ್ರನಂ ನಿಮ್ಮತ್ತಣ ರಾಮಕಥಾಶ್ರವಣದಿಂ
ಪಾವನನಾಗಿ ಮುನ್ನಿನ ಪುಣ್ಯಲೋಕಕ್ಕೆ ಪೋಪನಿದೆ ಎಂದು ತೋಱಿದಂ.
ಅದರ್ಕಾರಘುಜಾವರಜಂ ನಯದಿಂ—ಎಲೆ ದೇವ ! ಜೀವಿಗಾದಿಯೊಳಾಪುಣ್ಯ
೨೦ ಲೋಕಾವಾಸಮೆಂತೊಡರ್ಚಿದುದು ಪೇೞೆನಲೊಡಂ ; ಶೌನಕಂ—ಪಿರಿದೇಂ
ಮುಮ್ಮೆಯ್ಯ ಕರ್ಮಫಲಮಂತುಟು. ಅದಱಿನೀತಂಗೀವಿಧಿಯಾಯ್ತು. ಜಗದೆ
ಜೀವಿಗೆ ಪೂರ್ವಕರ್ಮವರ್ಮಮೇಗೆಯ್ದುಂ ಸಡಿಲದು; ಸುಖದುಃಖಂಗಳ್ಗಿದು
ತಮರ್, ನಿರಯಕ್ಕೆಱೆವೆಟ್ಟು. ಅಡಿಗಡಿಗೆ ಬರ್ಪ ಕುತ್ತಕೆತ್ತಂ ಬಿತ್ತೀಕರ್ಮ
ಮೆನುತ್ತೆ, ಕರ್ಮಿಗಳ್ಗೆ ನೇರಿಡುವ ಮಱುವುಟ್ಟುಗಳಂ ನರಕಂಗಳಿರವಂ ಬಿಯದಿ
ಗಳಂ ಬನ್ನಂಗಳಮಿನಿಸುೞಿಯದಂತು ಸಮಂತು ನಿರವಿಸಿದಂ. ಶತ್ರುಹಂ
ಮುನಿಯನೆಱಗಿ ಬೀೞ್ಕೊಟ್ಟು ಸೇನೆವೆರಸು ಹಯದ ಬಟ್ಟೆಯೊಳೆ ತೆರಳ್ದಂ.

ಎನ್ನ ಕಣ್ಮಣಿಯೆ ! ಪೆಣ್ಮಣಿಯೆ ! ಮಱುಗೊಂಡ ಕುತ್ತಮಡಂಗಿ
ಪದುಳಮಿರ್ಪ ತೋಟಿಯ ತೋಳ್ವಲನ ನರದ ಹಿಂಡಿಗೆಯ ಬಲ್ಪೆಂತಂತೊಂದು
ಬಲ್ಪಿಂ ಮೈವೆರ್ಚಿ ತನ್ನಿಚ್ಛೆಯಿಂ ಮುಂತೆ ಮುಂತೆ ಪೋಪೋಪ ಕುದುರೆಗೆ
೩೦ ತಿಂಗಳೆಂಟಾಗಲೊಡಂ ಅಂಗವಂಗಾದಿದೇಶಂಗಳ್ ಕಂಗೆಟ್ಟು ಕಪ್ಪಂಗೊಟ್ಟು

ಪಿಂಬಟ್ಟೋಲಯಿಸುತ್ತೆ ಬರುತುಮಿರ್ಪುದುಂ; ಮುಂದೆಸೆಯ ಕುಂಡಲಪುರಂ
ಮಲೆದು ನಿಂದುದು. ಸುತ್ತೇಂ ಸುರ್ಕೇಂ? ಶ್ರೀರಾಮಚಂದ್ರಮನಂ
ಕಣ್ಣಾಱೆ ಕಾಣ್ಬೊಂದು ಬಯಕೆ ಬೆಟ್ಟಿತಿರ್ಪಿನಮೂಗಳುಮಾಲಿ ಪೀಲಿಯುಪ್ಪಿ
ಸೆಗಂ ಬಿಡದೀಪಂಬಲಿಂ ಬೆಂಡಾಗಿ ಕಂದುವಗೆಯಿಂ ಸಂದಿ ಪೊಂದುಗುಂದಿರ್ಪ
ಪುರದಧಿರಾಜಂ ಸುರಥರಾಜಂ ತಾನೋಲಗದೊಳಿರ್ಪನ್ನೆಗಮೊರ್ವ ರಾಜ
ನೊಂದು ಭಕ್ತಿಯುಂ ಪರಿಕಿಸವೇಟ್ಪುದೆಂದು ಜವಂ ಜವದಿಂ ಕಿಱುವರೆಯ
ದೆಳದವಸಿಯೊಂದು ರೂಪಂದಾಳ್ದಿ ಬಿಮ್ಮನರಮನೆಗೆಯ್ತಂದಂ. ಅರೆಗೆಂಪಿಡಿದ
ಮುಡಿದ ಜಡೆಮುಡಿ ಬಾಂಗೂಂದಲನ ಕಪರ್ದಮಂ ಕೀೞ್ಮಾಡೆ, ಪಲಗೆವಣೆಯ
ಬಾಮದ ಕೊಂಕಿನ ಭಸಿತಲೇಖೆ ಬೆಳ್ವಕ್ಕದ ಬಿದಿಗೆಯ ಚಂದವನೊಂದಂದದ
ತಿಳಿದ ಕಳೆಯನಿಟಿಕೆಯ್ಯೆ, ತುಂಬಿ ತುಳ್ಕುವ ಮೊಗದ ಮೊಗಂಬಡೆದ ಸೊಬಗು　೧೦
ಪದ್ಮಸದ್ಮನ ಮೊಗಸಿರಿಯನೆಡವುತೆಡಂಮಾಡೆ, ಪೊದೆದ ದುಗುಲಂ ರಣನಿಶಾಟ
ಗಣದಿಶಾಪಟಮಲ್ಲನ ಚೆಲ್ವಿನ ಬೆಳ್ವಟ್ಟೆಯುಂ ಪಟಿಯೆ, ನಿಱಿವಿಡಿದುಟ್ಟ ಪಟ್ಟುಡೆ
ಯುಂದಿನ ತ್ರಿವಿಕ್ರಮಮೂರ್ತಿಯ ತೆಳ್ವಿನ ಪೊಗರ ನಿಗರದೊಳ್ಪುಡೆಯುಂ
ತಟ್ಟಿಸಿ ಕಟ್ಟಿಸಿ ಮುಟ್ಟಿಸೆ, ಕೊರಲೊಳೊಪ್ಪುವಚ್ಚಪೊಚ್ಚಚ್ಚಸರಂ ಮುಕುತಿ
ವೆಣ್ಣ ಸಿರಿಗೊರಲ ಕರ್ಮಣಿಸರಮನಡಿಗೊತ್ತೆ, ತನ್ನೊಂದು ತೇಜಮೋಜೆಯಿ
ನೋಲಗಸಾಲೆಯೊಳ್ ಪಳಂಚಲೆಯೆ ಬಂದ ಕಪಟವಟುವಂ ವಟುವಂ
ಕಂಡಿರದಿದಿರೆೞ್ದು ಬಟಿಸಾರ್ದು ಕಾಲ್ವಿಡಿದು ಕೆಯ್ವಿಡಿದು ಕರೆದುಯ್ದು ತನ್ನ
ಪೊನ್ನಗದ್ದುಗೆಯೊಳ್ ಕುಳ್ಳಿರಿಸಿ ವಿಧಿಯಿಂ ಪೂಜಿಸಿ ಮತ್ತಂ ದೈನ್ಯದಿಂ—
ಅಪೂರ್ವಂ ನಿಮ್ಮಡಿ ಬಿಜಯಂಗೆಯ್ದಿರೇಂ ನಿರವಿಪುದೆಂದು—ಬೊಗೊಳ್ವುದುಂ;
ಕನಡುದವಸಿ—ಎಮ್ಮಂದಿಗರೇನೆತ್ತಮಿರ್ಕುಂ ಪೋಕುಂ. ಮನವೊಲ್ದೆಡೆ　೨೦
ಗೈದಿ ಸದ್ಧರ್ಮಮಂ ಬೋಧಿಸಿ ಹಿತೋಪದೇಶಮನಱಿಯೆ ಪೇೞ್ವುದೊಂದೆ
ನೇಮಮೆಮಗಂತದುಕಾರಣಂ ನೀನೆಮಗೆ ಸನ್ನಿಯ ನೇಹಿಗನಿರ್ಪಿನಂ ನಿನಗ
ಮಂತಿರೆ ಧರ್ಮರಹಸ್ಯಮಸೊರೆವೊಡೆಂದೆ ಬಂದೆನೆಂದಂ. ಆನುಡಿಗೆ ಸುರಥಂ—
ಪಱಿದರ್ಗಿಂತುಟೊಂದು ಮೈಮೆ ಗಡ! ಏನೆಂಬ ಕೂರ್ಮೆಯೊ! ಲೋಗರೊಳ್
ಅಱಿಮೆ ತಾನಿಂತೊಂದು ಮೆಯ್ವೆತ್ತು ಬಂದುದಾಗದೆ! ಇಂದಿಂಗೆ ನಲಂ
ಧನ್ಯರೆವು. ಆದೊಡಮಿಂತಟಮಟಿಸಿ ನೋಯಿಪೊಂದು ಪುಟ್ಟುಟಿವಟಿವೆಂಬೀ
ಕೋಟಲೆಯಿಂ ಮುಕ್ತನಪ್ಪಂತಿರೆನಗೆ ಬಟ್ಟೆಯುಂ ತೋಱ!—ಎನೆ; ಮಾಯದ
ಜವನಿಕೆಯ ಜವಂ ಕಿಱುನಗೆಯಿಂ—ಎಲೆ ನಾಡೆಱೆಯ! ಪುಟ್ಟದೆ ಪೊಂದದೆ ಸುಖ
ಮೆಂತಿಹಪರಂಗಳೊಳ್ ದೊರೆಕೊಳ್ಗುಂ. ಮುಕ್ತಿಯೊಳೇನುಂಟು. ಲೋಕ
ಮಿಂತೀಬೆಮೆಯುಂ ನಿರ್ಣಿಮಿತ್ತಮುಗ್ಗದ ಸಗ್ಗದ ಸೊಗಮಂ ಪಾಟ್ಗಿಡಿಸಿ ಕೊಳ್ಗು　೩೦

ಮುದಱಿಂ ನಿಮಗೆ ಪೇಲ್ದ ಧರ್ಮಂ ಕರ್ಮಂ. ಕರ್ಮದಿನೆ ಇಂದಿರಂ ದೇವರ್ಕಳೊ
ಡೆಯನಾದಂ. ಬೊಮ್ಮಂ ಪೂರ್ವೊರ್ಕ್ಕಳ ಗಂಗಾವರ್ತಸನಾಭಿಯೊಳ್ ನಾಭಿ
ಯೊಳ್ ಪುಟ್ಟಿಯುಂ ಸತ್ಯಲೋಕಕ್ಕೊಡೆಯನಾದಂ. ತಗರ್ದೇರಂ ನೇಸ್ಗೈಯುಂ
ಮುಂತಪ್ಪರ್ ದೆಸೆವಳರಾದರ್. ಪತ್ತೇಂ, ಪಲವೇಂ? ಸರ್ವರುಂ ತಂತಮ್ಮ
ಸತ್ಕರ್ಮದಿಂ ಸೊಗಮನುಂಬರ್. ನೀನುಂ ಸಡಗರದಿಂ ಜನ್ನಂಗಳನೆಸಗಿ
ಸತ್ಪಾತ್ರದಾನಂಗಳಿನಿಲ್ಲಿ ದೆಸೆಮುಟ್ಟೆ ಜಸದಿಂ ಪೆರ್ಮೆವಡೆದಲ್ಲಿ ದುರ್ಲಭಸ್ವರ್ಗ
ಸುಖಲಾಭಮಂ ಪಡೆವುದೊಳ್ಳಿತು—ಎಂಬುದುಂ; ರಾಜಂ—ಜೀಯ! ಇಂತಿ
ದೆನ್ನ ಮನಕೆ ಸೇರದು, ಬಾರದು. ಕರ್ಮಂಗಳತ್ತಣಿಂ ದೊರೆಕೊಳ್ವ ಸುಖಂ
ಭಂಗುರಮಲ್ತೆ. ಇಂದ್ರಂಗಂ ಕರ್ಮಫಲಾನುಭವಂ ಮುಡಿಯಲೊಡ
೧೦ ಮೊಡನೆಯೆ ಪತನಮಿರ್ಕುಮಂತಿರೆ ಬೊಮ್ಮಂಗಂ. ಅದಱಿನಿದಾಗದಾಗದು.
ಮುಕ್ತಿಯನೆ ಬಯಸುವೆಂ—ಎಂದುಸಿರ್ದಂ. ಅದರ್ಕಾ ತಾಪಸಂ—ನೀನುಂ
ಬಱಿದೆ ಬೆಮೆಗೊಳ್ಳದಿರ್. ಮರುಳರ್ಗಕ್ಕುಮೀಬಗೆಯ ಜಾಣಂ. ನಿನ್ನನ್ನರ್ಗೆ
ಸತ್ಕರ್ಮಫಲಮೆ ಫಲಂ ವಲಂ. ಮುನ್ನಿನ ರಾಯರ್ ಕರ್ಮಂಗಳಿಂ ನಾಕಮ
ನೇಱಿ ಸುರಪನೊಳ್ ಬಲದೆ ಗದ್ದುಗೆಗೊಂಡು ಸುರವೆಂಡಿರಿಂ ಸೇವಿಸಿಕೊಂಡ
ರುಂಟು. ಅದುಕಾರಣಂ ಕಣ್ಬೆಗಡಿನ ಮುಕುತಿಯ ಯುಕುತಿಯಂ ಪಾರದೆ
ನಿಜದಿಂ ದಾನಧರ್ಮಂಗಳಿಂ ಸಗ್ಗದ ಮುಂಬಾಗಿಲ ಪೇರಗುಳಿಯಂ ಮುಱಿ
ವಂತುಟಾಗಿಸೆನಲ್ಕೊಡನೆ ಜನಪಂ—ಒಡಬಡೆನೊಡಂಬಡೆಂ. ಈನಿನ್ನ ಕವಡು
ನುಡಿಗೆ ನೀನೇವೂರ ಕೊನೆಯ ತಿರುಕದವಸಿಯೊ? ಮುನ್ನಿನ ರಾಯರ್
ಕರ್ಮಫಲಾ(ವಾ)ಪ್ತಿಯಿಂ ಸಗ್ಗಮಂ ಪೊಕ್ಕರುಂಟು; ನಿರಯಕಮಿಟಿದರುಂಟು.
೨೦ ಪಾಪ್ಪೋದ ಕರ್ಮದಿನೇಂ? ಶ್ರೀರಾಮನ ಧ್ಯಾನಮೊಂದೆ ಮುಂದುಂ ಪಿಂದು
ಮೆಂದುಮೆಂದಂ. ಆಗಳ್ಗೆ ಮುನಿ ತಾಂ ಕಟ್ಟಚ್ಚರಿಗೊಂಡನಂತೆ—ಆವನೊರ್ವಂ
ರಾಮಂ, ಆತನ ಧ್ಯಾನದಿಂ ಭಕ್ತಿಯಿನೇಂ ಮುಕ್ತಿ? ಮರ್ತ್ಯರ ಧ್ಯಾನದಿಂ
ಮರ್ತ್ಯರ್ ಮುಕ್ತರಪ್ಪರೆಂತೊ! ನಿನಗೆಗ್ಗಂಗಿನಿತೊಂದು ಜ್ಞಾನಮಾರ್ಗಮಂ
ಬೋಧಿಸಿದ ಮರುಳಂ ಪೆಱನೊರ್ವನಾವನೊ! ಎಲೆ ರಾಯ! ಎನ್ನಂ
ಮನ್ನಿಸು! ಎನ್ನುಪದೇಶಮಂ ಲಾಲಿಸು! ಹರಿಯೆಂದುಂ ಹರನೆಂದುಂ ರಾಮ
ನೆಂದುಂ ಕಾಮನೆಂದುಂ ಪುರ್ಚುಗೊಳ್ಳದೆ ನಿನ್ನ ಪೂರ್ವಜರೆಂತಂತು ಸುಖದಿಂ
ಬಾಳ್ವುದು ಕರಂ ಮೇಲೆಂಬುದುಂ; ಕಡುಮುನಿಸಿಂ ಕಿಸುಗಣ್ಣೆ—ಎಲೆಲೆ
ಧೂರ್ತ! ನೀಂ ಮುನಿಯಲ್ತು. ಎಮಗೀಬಗೆಯೊಂದುಪದೇಶಂಗೆಯಲ್ ಬಂದ
ನೀನಂದಿನ ಕಾಲನೇಮಿಯಕ್ಕುಂ. ಶ್ರೀರಾಮನಂ ಪಟಿವ ನಿನ್ನೀಕೊನೆನಾಲ
೩೦ ಗೆಯುಂ ಕೂರಸಿಯಿಂ ಪೋಟಲ್ವೇಡಾ! ವಿಭೀಷಣಾದ್ಯರಾವನೊಂದು ಜಾಣದಿಂ

ನಿಶ್ಚಲಪದವಿಯುಂ ಪಡೆದರೆಂದು ಬಗೆಯುದ ಕಡುಕೂಟಸನಿವನಂ ಸೂಂಕಿ
ಕಳೆಯದೇಂ ಮಾಣ್ದರೆಂದು ಗುಡಿಗುಡಿಸಿ ಜಡಿದು ತನ್ನಾಳ್ಗಳಂ ನೋೞ್ಪುದುಂ ;
ಅಱಿಂ ತಾನೆ ಮೆಯ್ದೋಱಿ—ಎಲೆ ಜನಪ ! ಮೆಚ್ಚಿದೆನೀನಿನ್ನ ದೃಢಭಕ್ತಿಗೆ. ಆಂ
ಜವಂ. ಇಂತಿವಱೊಂದು ಪಡಿಸಣದುಜ್ಜುಗದಿನೆ ಬಂದೆಂ. ನಿನ್ನಿನಾವನನ್ಯಂ
ಧನ್ಯಂ. ಭವದ ಭಯುಂ ಪಿಂಗುವೊಡಿಂತಿದೊಂದೆ ಬಟ್ಟೆ ಲೇಸು ಲೇಸಯ್. ನಿನ
ಗೇತಱೊಳುಂಟು ಬಯಕೆ ಪೇೞ್. ಕುಂದದೆ ಸಲಿಪೆಂ—ಎಂಬ ಧರ್ಮರೂಪನಂ
ಮೂಱುಂ ಸೂೞ್ ಬಲವಂದಡಿಗೆಱಗಿ ಕೆಯ್ಗಳಂ ಮುಗಿದು—ಜೀಯ !
ಗಾವಿಲದವಸಿಗೆತ್ತೆ ನಿರ್ನೆರಂ ನಿಮ್ಮಂ ಬಯ್ದೆಂ. ದೇವರೆಂದಱಿತೆನಿಲ್ಲಂ.
ಎನ್ನೊಂದು ಪೊಲ್ಲದ ಗೆಯ್ಮೆಯುಂ ಮಱೆವುದು, ಕಾವುದು. ಮೇಣೆನ್ನೊಳ್
ಕೂರ್ತಿರಪ್ಪೊಡೆ ಬರ್ದಿನ ಪೊರ್ದಿನ ಮುನ್ನಮೆ ಶ್ರೀರಘುನಾಯಕನಂ ೧೦
ಕಣ್ಣಾಱೆ ಕಂಡು ಧನ್ಯನಪ್ಪಂತು ವರಮಂ ಕರುಣಿಪುದು—ಎಂದು ಸುರಥಂ
ಸೆಱಗನೊಡ್ಡಿ ಬೇಡಿಕೊಂಡ. ಈ ನುಡಿಗೆ ಯಮಂ—ನಿನ್ನಾಣೆ ನಿನ್ನಂ ಪಗೆಯೆಂ.
ನೀಂ ನಿಚ್ಚಟದ ರಾಮಭಕ್ತನಿರ್ಪಿನಂ ಕಿಱಿದಾನುಂ ದಿನಕ್ಕೆ ರಾಘವಂ ತಾನೆ
ಬಂದು ಮೆಯ್ದೋಱಿಯುಂ ಬೇಡಿದಿಷ್ಟಾರ್ಥಂಗಳನಿತ್ತುಂ ಪೋಪನಿವಱೊಳ್
ಸಂದೆಯುಮಣಮಿಲ್ಲಮೆಂದು ಸಂತವಿಟ್ಟು ತಾನಂತರ್ಹಿತನಾದಂ ಗಡ.
ಇಂತೆಂಬ ಕತೆಯಂ ಸುಮತಿ ತನ್ನಾಣ್ಮಂಗೆ ಬಿತ್ತರಿಸಲೊಡಂ ಶತ್ರುಹಂ ತಲೆ
ದೂಗಿ ಮುಂತಣ ಕಜ್ಜದುಜ್ಜುಗಕೆ ಮಂತಣದೊಳಿರ್ಪುದುಮತ್ತಲ್ ಹಸುವಂ
ಬಂದಿಗೊಂಡ ಪೊಱಲ ತಳವಾಱರೊರ್ಮೆಗಂ ಕಟ್ಟೋಲಗದ ರಾಯನೆಡೆಗೆ
ಯ್ತಂದು ನಾಡಂ ಪುಗುತಂದ ಬಾಡಬದಿರವನೊಕ್ಕಣಿಸಿ ಪಣೆಯೊಳೊಪ್ಪಿ
ದೋಲೆಯನೊಪ್ಪಿಸಿ ತಾಮಾಣತಿಯುಂ ಪಾರುತುಮಿರ್ಪರಾದರ್. ಇಂತಾಗ ೨೦
ಲೊಡಂ ಸುರಥಂ ತಳಾಱರಿತ್ತ ಕಟ್ಟೋಲೆಯುಂ ತಾನೆ ಬಿಡದಾಮೂಲಾಗ್ರ
ಮೋದಿ ಮೋದಂಬೆತ್ತು ತನಗೆ ತಾಂ—ಕಡುಲೇಸಾಯ್ತು. ಪುಸಿಯಾಗದಾ
ಯ್ತಂದು ಬಂದ ಧರ್ಮರೂಪನೊಂದಮರ್ದುನುಡಿ ! ಎನ್ನಂ ಕಾವ ಬಗೆಯಿಂ
ಮುಂತಟ್ಟಿದನಕ್ಕುಂ. ಏಂ ಕರುಣಾಕರನಾಗನೆ ದೇವಂ ! ಇರ್ಕೆ ! ರಘುಕುಲ
ವಾರ್ಧಿರಾಕಾಶಶಾಂಕಂ ತಾನೆ ಮೆಯ್ದೋಱುವನ್ನೆ ಬರಂ ಕ್ಷತ್ರಿಯರ ಪಂತಮಂ
ಬಿಡದೆ ಬಿಡದೆ ಹಯಮುಂ ಕಟ್ಟಿ ಕಾದುವೆನೆಂದು, ನೀಡುಂ ಬಗೆದು, ತನ್ನ
ಪಡೆವಳರಂ ಬರಿಸಿ, ದಂಡಂ ಬಂಡಣಕನುವಪ್ಪಂತು ಸಾಱಿಸಿ, ಚಂಪಕಮೋಹ
ಕರ್ ಮುಂತಪ್ಪ ಪದಿಂಬರ್ ಕುವರರ್ವೆರಸು ತಾನುಂ ಬದ್ಧದಿಂ ಯುದ್ಧಸನ್ನದ್ಧ
ನಾದಂ. ಇತ್ತಲ್ ಶತ್ರುಹಂ ತಾನೆ ತನಗೆ ತಱಿಸಂದು ಬಂದು—ಅಂತ
ಪ್ಪೊಡೆ ಮಗಾರಾಯನೊಳ್ ಕಾಳೆಗಂ ಸಲ್ಲದು ಪೊಲ್ಲದು. ತನ್ನವನಂ ನೋಯಸಿ ೩೦

ದರೆಂದೆಮ್ಮಣ್ಣಂ ಮುನಿಗುಂ. ಅದಱಿನೀಬಗೆಯಿನೆಮ್ಮೊಳೊರ್ವನಂ ದೂದಟ್ಟಿ
ರಾಯಂಗೆ ತಿಳುಪಿ ಹಯಮಂ ತರಿಪುದೆಮಗಕ್ಕುಮೆಂದು ಬಗೆದಂದು ಸುಮತಿ
ಗೊರೆವುದುಮಾತನುಮಂತಿರೊಡಂಬಟ್ಟಂಗದನನಿದಱೊಳ್ ನಿಯೋಗಿಸಿ
ಕಳಿಪಿದರ್.

ಅಂತಪ್ಪುದುಮಾಗಳುರ್ಕಿನ ಸೊರ್ಕಾಳ್ತನದಿಂ ನೀಳ್ದಂಗದಂಗದನಂದಿನ
ರಾವಣನೆಡೆಗೆಂತಂತು ಕಡುಸಡಗರದಿಂ ದೂದ್ಯೈದಿವಂದು ರಾಯಂಗೆ ಕಾಣಿಸಿ
ಕೊಂಡು ಪಸಾಯನಮನೊಪ್ಪಿಸಿ ಮನ್ನಣೆಗೊಂಡು ಸಮುಚಿತಾಸನದೊಳ್
ಕುಳ್ಳಿರ್ದುದುಂ; ಬಿತ್ತರದ ಬಿತ್ತರಿಗೆಯೊಳೊತ್ತರದ ಗಾಡಿಯಿನೊಪ್ಪಿರ್ದ
ರಾಯಂ—ಎಲೆ ಬೀರ! ಎತ್ತಣೆನೀಪಾವುಡಂ? ನೀನಾವನಾರವನೇನುಂಟಿ
ಮ್ಮೊಳ್ ನಿನಗೆ ಕಜ್ಜಂ? ಪೇೞೆಂದೊಡೆ—ಎಲೆ ಮಾರಾಯ! ಮುನ್ನಂ
ಕೇಳ್ದುಂಟೆ ದಶಕಂಠನ ಕಂಠನಾಳಂಗಳಂ ಕೊಳ್ಳಿಪುಳ್ಳಿಯುಪ್ಪಿನೆಗಂ ಸದೆದು
ಕೊಂದು ಕಳೆದ ಶ್ರೀರಾಮಾರಾಮನಂ ರಾಮನಂ? ಆತನಡಿಯುಚ್ಚಳಾಯ್ತ
ನಂಗದನೆಂ. ದೇವರ್ ಜಗಮಂ ಕಾವರೆಂಬೊಂದಗ್ಗಳಿಕೆಯುಂ ಜನಕೆ ತೋಱಿಪ
ಬಗೆಯಿಂ ಬೇಳ್ಪರಕ್ಕುಂ. ಅದಱಿನವರ ಯಜ್ಞೀಯಾಶ್ವಂ ನಿಮ್ಮ ನಾಡಂ
ಪುಗುತರ್ಪುದುಂ, ನಿಮ್ಮವರ್ ಕಟ್ಟಿದರ್ ಗಡ! ಅದುಕಾರಣಮಾಕುದುರೆಯು
ಬೆಂಗಾಪಿನ ದಕ್ಕಡದ ಗಂಡುಗಲಿಗಳ ಗಂಡಂ ರಾಘವಾವರಜನೆನ್ನನಿಂತು
ಪೇೞ್ದಟ್ಟಿದನೆಂತೆನೆ :— ನೀಮೆಮ್ಮಂದಿಗರಿರ್ಪುದುಂ ರಣಕಂ ಪಣಕಮಾಸೆಮಾ
ಡದೆ ಹಯಮಂ ಬಿಟ್ಟು ಕಪ್ಪಮಂ ಕೊಟ್ಟು ನೆರೆವಾೞ್ವುದು ಕರಮೊಳ್ಳಿತ್ತು;
ಬಱಿದೆ ದೇವರೊಳ್ ಪಗೆದು ಇಹಕಂ ಪರಕಂ ಬೆನ್ನಾಗದಿರಿಂ. ಇಂತಿದಂ
ಬಗೆಯೊಳೊರೆದು ಮೇಲಣ ಕಜ್ಜಮಂ ಕಾಣ್ಬುದು ಲೇಸು—ಎಂದಂ.

ಈಪರಿಯಿಂ ಕಂಚುಮಿಂಚಾಗಿ ನುಡಿದಂಗದನ ಪೊಂಗದ ನುಡಿಗಳನಾಲಿಸಿ
ಸುರಥಂ—ಅಪ್ಪುದಪ್ಪುದು. ಬಲ್ಲೆಂ ಬಲ್ಲೆನಾಜಗದ ದೈವಮಂ. ಪಗೆಯುಂ ಬಗೆ
ಯೆಂ. ಕೇಳ್ವೊಡಿಂತಿದೊಂದು ಬಿನ್ನಪಂ. ದೇವರಡಿಯೊಳ್ ತಾಂ ಪೇೞ್ವಂತು
ತನ್ನ ಹಯಮಂ ತಾನೆ ಬಂದು ಕೇಳ್ದೊಡಾಗದೆ! ಕಾಣ್ಕೆಯುಂ ಕಪ್ಪಮಂ
ನಾಡಂ ಬೀಡಂ ವಸುವಸುವನೊಡಲನೊಡಮೆಯುಮನೆಲ್ಲಮುಮನೊಪ್ಪಿ
ಸೆನೆ! ಆದೊಡೆನ್ನೆವರಂ ಶ್ರೀರಾಮಂ ತಾನೆ ಮೆಯ್ದೋಱಿಂ ಬಾರನನ್ನೆವರಂ
ವಾಜಿಯುಂ ಸಾಜದಿಂದೀಯೆಂ ಬೀಯೆಂ. ಮಿಕ್ಕುಟಿದ ನಿಮ್ಮ ಸೊರ್ಕುಜವ್ವನಿ
ಗರಂ ತಿಕ್ಕಿತೆಕ್ಕೆಯಾಡುವೆನಿಂತಿದು ದಿಟ್ಟಮೆಂದಂ. ಆಗಳಂಗದಂ—ಏನೈಯ!
ಪೊಂದುವ ಸಂಧಿಯ ನುಡಿಗಳನಾಡದೆ ಸಲ್ಲದ ನಿಲ್ಲದ ನಾಡ ನುಡಿಗಳನೆಮ್ಮವರ್
ನೋವಂತಿರೆ ಸುಡುವಾತುಗಳಂ ಗಟಪುವಯ್! ಏಂ ಲವಣಾಂತಕಂ ಸಾಲನೆ!

ಪುಷ್ಕಲಾದ್ಯರ್ ಸಾಲರೆ! ಆಂ ಸಾಲೆನೆ! ಇದಱಿಂ ನಿನಗೆ ಸುಖಮಾಗಲಱಿಯದು. ಅಂತು ರಾಮನನೆ ಕಣ್ಣಾಱೆ ಕಾಣಲ್ಕೆಂದು ಬಯಸುವೆಯಪ್ಪೊಡೆ ಎಮ್ಮನೊಡೆವೆರಸಯೋಧ್ಯೆಗೆಯ್ತರಲೊಡಂ ಕಂಡು ಪಾವನನಾಗಲಕ್ಕುಂ. ಚೀ! ಮರುಳೆ! ದೇವರ್ ನಿನ್ನೆಡೆಗೆ ಬರ್ಪುದುಂಟೆ! ಬಾರರ್. ಅದುಕಾರಣದಿಂ ದೇವರ್ ಮುನಿಯದ ಮುನ್ನಮನುಜಶತ್ರುಹನ ಶರಹತಿಗೆ ಸೋಯದ ಮುನ್ನಮಗ್ಗದ ಪುಷ್ಕಳನ ಕವಲಂಬಿನಿಸುಗೆಗೆ ಗಾಱುಗಿಡದ ಮುನ್ನಮಣುವನ ಸಿಂಹಗರ್ಜನೆಗೆ ಬೆಬ್ಬಳಿವೋಗದ ಮುನ್ನಮೆನ್ನ ಗುರ್ದಿಂ ಬರ್ದದ ಮುನ್ನಮೆಂತಾನುಮೆಮ್ಮವರಂ ಕಂಡು ಮಱುವಾಟ್ಪುದು ಮೇಲೆಂದು ಸಭೆ ಬಿಲ್ಲುಂಬೆಱಗಪ್ಪಂತು ಜರ್ವಿ ಬೆಸೆದು ನುಡಿವುದುಂ; ಮಾರಾಯಂ ಪಿರಿದುಂ ಕನಲ್ದು—ತೆಗೆತೆಗೆ ನಿನ್ನ ಶತ್ರುಹಗಿತ್ರುಹರಂ! ಮುಕ್ಕಣ್ಣನೆ ರಣದೊಳಿದಿರಾದೊಡಂ ಬಗೆವೆನೆ? ನಿಮಗಂ ದೇವರ್ಗಂ ನಯಕಂಜುವೆನಲ್ಲದೆ ಭಯಕಲ್ತು. ಅಂತಾಗದಂದು ನೀಮೆ ಬಿಲ್ಲಾಳ ಬಲ್ಲಾಳರಪ್ಪಿಸಂ ಮೊನೆಯೊಳೆ ಹಯಮಂ ಕೊಳ್ಪುದು ರಾಮನಂ ತೋಱದೆ ಸಂಧಿಗೊಂದೆಂ. ಬಿಣ್ನುಡಿಗೆ ಬೆಱಗಾಗೆಂ. ಇದು ಸಿದ್ಧಂ ಬದ್ಧಮೆಂದು ಪೂಣ್ದು ನುಡಿದು ಬಂದ ನಿಯೋಗಿಯುಂ ಪಿಂತಟ್ಟಲೊಡಂ; ವಾಲಿಪುತ್ರನಿಚ್ಚೆ ಪಚ್ಚೆಯಾಗಿ ಚೆಚ್ಚಱದಿಂ ಬಂದು ತಮ್ಮಾಣ್ಮಂಗಿಂತಿದಂ ಕೇಳಿಸಿದಂ. ೧೦

ಬೀರದೇಪ್ಗೆಗೆ ತಮಗಾನುಡಿಯೆ ಗುಡಿಯಾಗೆ ಆಕೆವಾಳರೆಲ್ಲರ್ ಕಲಿಯಾಗಿ ಕಣೆಯ ದೊಣೆಯ ಕಲ್ಲ ಬಿಲ್ಲ ಬೆಟ್ಟಿನ ಮುಟ್ಟಿನ ಮರನ ಗಿರನ ಪೊಱೆಯೊಳೆತ್ತಿನಡೆದು ಮತ್ತಮೆತ್ತಂ ಮುತ್ತಿ ಗರ್ಜಿಸಿದರ್. ಆ ಗರ್ಜನೆಗೆ ಮುಂಗಾರ ಸಿಡಿಲ ಗರ್ಜನೆಗೆ ಮೊರೆದು ಮುಱಿದೇಳ್ವ ಸಿಂಗನಂತೆ ಬೊಬ್ಬಿಱಿದುಬೆಟ್ದು ಸರಥಂ ಸುರಥಂ ದಂಡಂಗೊಂಡು ದಾಟಿಡುವ ದೆಖ್ಖಾಳದ ದಕ್ಕಡಿಗರಂ ತಱುಬಿ ನಿಂದಂ. ಅನಿತಱೊಳ್ ಸಹದೇವ ಭೂರಿದೇವ ರಿಪುಂಜಯ ಪ್ರಮುಖ ಪುತ್ರವರ್ಗಮುಂ ಮಂತ್ರಿವರ್ಗಮುಂ ಮೂಲಬಲಂಬೆರಸು ಬೆಂಬಲಮಾಗೆ ಬಂದೊದವಿದರ್. ಆಗಳಿರ್ಕಡೆಯೊಳಂ ನಿಡುಗೋಲ ಬಲ್ಸರಿ, ಬೋಱೆಯಂಬಿನ ಸೂಟ್ಸರಿ, ನಿಡುಗಲ್ಲ ಮೆಲ್ಸರಿ, ಬಡಿಗೋಲ ಜಡಿ, ಪೊಯ್ಮ್ಮರನ ಪೊಯ್ಮ್ಮಱೆ, ಬಟ್ಟಕೈದಿನ ದಿಟ್ಟಸೋನೆ ಎತ್ತಂ ಕಱೆದತ್ತು. ಇಂತಪ್ಪುದು ಮುರ್ಕಿನ ಕೇಣಿಯ ಚೂಣಿ ಸೊರ್ಕುಂಜೆಕರ್ಗಲೊಡಂ ಕಂಡು ಮಿಂಡೆಬ್ದು ಪಡೆವಳರೆಲ್ಲರುರವಣಿಸಿ ಮುಂಬರಿದೊಡ್ಡಿ ನಿಂದರಾಗೆ ಕಾದಿ ಮೋದಿ ತಾಂ ತಮಗೆ ಜವಹುರದ ಪಡಿವಳರಾದರ್. ಈಗಳಿರ್ವಕ್ಕದೊಳತಿರಥರ್ಗರ್ಧರಥರ್ಗೆ ಮಹಾರಥರ್ಗೆ ತಂತಮ್ಮೊಳ್ ಪೊಣರ್ಕೆ ಗಡ! ರಿಪುಂಜಯಗೆ ವಿಮಲಂ ೨೦ ೩೦

ಸಾಟಿ, ದುರ್ವಾರಂಗೆ ಸುಬಾಹು ಪಾಟಿ, ಹರ್ಯಕ್ಷಂಗೆ ನೀಲರತ್ನಂ
ಹೋಟಿ, ಬಲಮೋದನಂಗದಂಗೆಣೆ, ಸಹದೇವಂಗೆ ಸತ್ಯವಂತಂ ತೊಣೆ.
ಇಂತೋರಗೆಯಿಂ ತಾಮುರ್ಬಟ್ಟಾಗೆ ಕಾದುತಿರಲೊಡಮತ್ತಲೊಂದೆಡೆಯೊಳ್
ತನ್ನೊಂದು ಪನ್ನತಿಕೆಯಿಂ ಪಡಿದಱಮನರಿಯುತಿಱಿಯುತೆ ಬೀದಿವರಿಯುತೆ
ಬರುವರುತುಮಿರ್ಪ ಚಂಪಕನನಿದಿರ್ಚಿ ಕೋಲ್ಗಱೆದು ಪುಷ್ಕಲಂ—ಎಲೆಲೆ
ಗಬ್ಬದುಬ್ಬರದ ಗರುಡಿಯ ಬೀರ! ನೀನೇವೂರ ರಾಯಗುವರನೊ? ಕೆಮ್ಮ
ನಿರದೆ ಬಱಿದೆ ಪೆಱರೊಡವೆಯು ಜನ್ನದಸುವಂ ಪಸುವಂ ಕವರ್ವ ಕಿತವ
ರೆಂತಂತು ಬಲ್ಪಿಂ ಕೊಂಡುಯ್ಯುದ್ದ ನಿಮ್ಮವರ್ಗೆ ನೀಂ ಗಂಡನೆ! ಬಂಡನೆ! ನುಡಿ
ನುಡಿಯೆಂದಂ. ಆಸೊಲ್ಲಂ ಪುಲ್ಲಂ ಬಗೆದು ಪಲ್ಲಮುಱಿಯೊಂದಾಯುತಿಯಿಂ
೧೦ ಮಿಕ್ಕುಮೀಱಿ ಪೊಕ್ಕಿಱಿದಟ್ಟಿಯುಂ ಮುಟ್ಟಿ ಮುಱಿದು ಮುಂಡಮಂ
ದಿಂಡುರುಳ್ಚಿ ರುಂಡಮಂ ಸೆಂಡಾಡಿ ಕೊರ್ವನಾಲೆ ಕರ್ವನೆಂತಂತು ಪಿಟಿದು
ಮುಳಿದು ಮುಂದೊತ್ತಿ ಪೋಪನಂ ಕೋಪದಿಂ ತಱುಬಿ ಮತ್ತಮೆಂಗುಂ.
ಓ! ಓ! ಗರುವಾಯ ಬಲ್ಗಡಸುಗಾಱ! ನುಡಿವಂಗೆ ನುಡಿಯದುಸಿಕನೆ
ಪೋಪ ಪೆರ್ಮೆಯದೊಂದು ಪೆರ್ಮೆಯೆ! ಪಡಿನುಡಿಗುಡವೇಡಾ! ಬಲ್ಪು
ಳ್ಳೊಡೆನ್ನನ್ನರೊಳ್ ತೋಱದೆ ಆಱದ ಬಾರದ ಬಱುಬಡವುಬಣಗುಗಳಂ
ಕೊಂದೆಂ ತಿಂದೆನೆಂದೊಡೊಂದು ಕಾದಾಳ್ತನಮೆ! ಮತ್ತಂ ಮೇಣುಮಂತದ
ನೊರ್ಮೆ ನಿನ್ನಂ ಕೇಳ್ವೆಂ. ನೀನಾವನೇವಂ? ನಿರ್ನೆರಮೆಮ್ಮಂ ತಿಣುಕಿ
ಕೆಣಕಿ ನೋಯದೆ ಸಾಯದೆ ಬಂದ ಬಂದಿಯ ಕುದುರೆಯಂ ಬಿಟ್ಟು ಕಾಣ್ಕೆ
ಗೊಟ್ಟು ನೆಱೆ ಮಱೆವಾಟ್ಟುದು ಕರಂ ಲೇಸೆಂದಂ. ಆಗಳ್ ಚಂಪಕಂ
೨೦ ಕಿನಿಸಿಂ—ಎಲೆ ಎಲೆ! ಕಡುಸಡಗರದ ಬಡಿವಾರದ ತೋರದೋಟಿಗ! ರಣಕ್ಕೆ
ಮೆಯ್ಯಾಂತು ನಿಂದೆನ್ನಂ ಮುನ್ನಮಾರೆಂದು ಕಿಱುಕುಳನೆಂತಂತು ಬೆಸಗೊಳ್ವ
ಬೆಸೆಗಾಱ! ನಿನ್ನ ಗರುವಿಕೆಗೆ ನಾಡೆ ನೋಡೆ ತೋಡೆ! ಒಡ್ಡಿ ನಿಂದ ಗಂಡು
ಗಲಿಗಳ್ಗೆ ಸೊಲ್ಲೆ ಬಿಲ್ಲಪ್ಪಿನನೀಗಳ್ ನಿನ್ನೊಳ್ ನುಡಿವೊಡೆಂದೆ ನಿನ್ನಂ ತಾಗಿ
ವಂದೆಂ. ನಿನ್ನೊಳುಟಿದೆನಗಾವುದನ್ಯಂ ಜನ್ಯಂ? ಪೆಸರೇನೆಂಬೆಯಪ್ಪೊಡೆ
ನಿನ್ನನ್ನರಪ್ಪ ಸೊರ್ಕಿನ ಬಂಡುಣಿಗಳ್ಗೆ ತಲೆವೇನೆಯುನೊದವಿಪ ಚಂಪಕನಪ್ಪ
ಚಂಪಕಂ. ತೋಳ್ವಲಮುಳ್ಳೊಡೆ ಕಾದಿ ಕುದುರೆಯಂ ಕೊಳ್ಳೆಂಬುದುಂ—
ಪುಷ್ಕಲಂ—ಏನೆಂಬ ಪೆಂಪೊ! ತಾಂ ಗಡ! ಚಂಪಕಂ ಗಡ! ಬಂಡುಣಿಗಳ್
ಗಡ! ಏಂ ನಿನ್ನ ಪ್ರಾಣಂಗಳ್ಗೆ ದರ್ವೀಕರನಾಗೆನೆ! ನೋಡೆಂದಂ.
ಅದರ್ಕಾ ಚಂಪಕಂ—ನೀಂ ದರ್ವೀಕರನಪ್ಪೊಡೀಕಳಸೂಳೇನಡುಕಳದೊಳಡುವಳ
೩೦ ನಕ್ಕುಂ. ಭಾರತಿಯೆಂಗುಂ—ಅಂತಪ್ಪೊಡೆ ತಳ್ವದೆ ತಱಿದು ಸುಂಟಿಗೆ ಪಂಟಿಗೆ

ಸಲ್ವಿಸಂ ನಿಮ್ಮನೆ ಬಾಣಸುಗೆಯ್ದು ಪರ್ದಿಂಗೆ ಬಿರ್ದಿಕ್ಕುವೆಂ, ನೋಡೆಂದು ಪೊಂಗಱಿಯ ಕವಲಂಬಂ ಚವಲಂಬವಾಡದ ಮುನ್ನವೋಡುವಿನಂ ಪೋಗೆಚ್ಚಂ. ಇಂತಿರೆ ಪಗೆಯ ಸವಗದೊಳೆಚ್ಚ ಕಣೆ ಬೆಚ್ಚಂತಾಗಲೊಡಂ ನಾಂಟಿದಲಗನಲಘುಭುಜಪ್ರತಾಪಂ ಎನಸುಂ ಬಗೆಯದಕ್ಷಯಬಾಣಂಗಳಿಂ ಪುಷ್ಕಳಂ ಪುಷ್ಕಳನಂ ನೋಯಿಸಿದಂ. ಇಂತಪ್ಪುದುಂ ಶರಹತಿಗೆ ಗಾಱು ಗೆಟ್ಟುಬ್ಬಸಂಬಟ್ಟು ಮೈಮಱೆದನಾಗೆ ಬಲದೊಳೆತ್ತಂ ನಿಬ್ಬೆಱಗಿನ ಕಲಕಲಂ ಪಿರಿದಾಯ್ತು. ಅನಿತಱೊಳೆ ಶತ್ರುಹಂ ಭಾರತಿಗೊಂದು ನೋವು ತನಗೊಂದು ಮನಕ್ಕೆ ಬೇವಾಗೆ ಮುಂಬರಿದೊತ್ತಿಮುತ್ತಿ ಗಜಱಿ ಗೆಲ್ಲದ ಚಲ್ಲದ ಪಱಿಮಱಿಯ ಗಂಡರನೆತ್ತಂ ಪಿಂಡುಗೆಡೆಪುತಂಡಲೆದು ಬೆಂಡಾಗಿ ಮತ್ತ ಮಗ್ಗದ ಪುಗ್ಗಿನ ಚಂಪಕನನಱಿಸಿ ಮಾಱಾಂತು—ಓವೊ! ಹೋಟಿಗರಿ ತ್ತಲಿರ್ಪರೆ! ಬವರಿಗರ ಬಲ್ಪುಳ್ಳರ್ ನಿಮಗಮೀಗಡೆಯೆಡೆಯಾಯ್ತೋ! ಪೇಡಿ ಯಂತುಂ ಖೋಡಿಯಂತುಮಿಂತು ತಲೆಗರೆದಿರ್ಪುದಿದಾವ ರೂಢಿಯೋ? ಕಿಱುಕುಳರಂ ತರುವಲಿಗಳಂ ತಱುಂಬಿ ಗೆಲ್ವೊಂದು ಗೆಲ್ಲಮೆ ಪೊಲ್ಲಮೆ ಯಾಗದೇಂ ನಿಮಗೆ! ಇತ್ತಲಿತ್ತಲ್ ಚಿತ್ತವಿಪುದೆನ್ನ ಸರಿಸಕ್ಕೆ! ಆನುಂಟು; ತೋಳ್ವಲರ್ ನೀಮುಂಟು. ಇಂತಿದೆನ್ನ ಸಜ್ಜೆಸೆಱೆಗೋಲ ಸವಿಯಂ ಇನಿಸಿ ನಿಸುಂ ಕಾಣಿಮೆಂದು ಬಲ್ಗೋಲ್ಗಳಂ ತಿಱುವಾಯ್ಗೆ ಸಂಧಿಸುತೆಚ್ಚಂ. ಆಗಳ್ ಚಂಪಕಂ ಪಿಳ್ಕು ಪೆಱಗಾಗಿ ಬರ್ಪ ಶರಮಂ ತನ್ನೊಂದಂಬಿನಿಂ ಮುಱಿದು ಮೇಣ್ ಪುಂಖಾನುಪುಂಖಮಾಗೆ ಪತ್ತಂಬುಗಳಂ ಗೊಲೆ ಸೆಲೆದಪ್ಪುವಿನಂ ಸೆಳೆದಾರ್ಪೆಸಾಡಿದಂ. ಅಂತೇಸಾಡಿ ಬರ್ಪ ಪುಣಂಬುಗಳಂ ನಡುವಟ್ಟೆಯೊಳೆ ಕೊಚ್ಚಿಪಡಿಸರಲಿಂ ತೇರ ಕೀಲಂ ವಾರುವದ ಕಾಲಂ ಮುಱಿದಂ. ಇಂತಾಗ ಲೊಡಂ ಮೂಱಡಿಯ ಪೇರಡಿಯೊಂದು ಪಾಂಗಿನಿಂ ಹಯಂ ಕೂಂಟಿ ನಡೆವುದುಮಾರಥಮುಸುಟಿದು ಮೇಣೊಂದು ಬಿನ್ನಣದ ತೇರನಡರ್ದು ಚಂಪಕಂ ನೊಂದ ಪಂದಿಯೊಂದು ಮುಸಕದಿಂ ಕೆರಳ್ದಣ್ಮಿಣ್ಮೆಂದು ಮಂತ್ರಾ ಸ್ತ್ರಂಗಳಂ ಭರತಾಪರಜಂಗೆ ಪೂಡಿದಂ. ಆಗಳ್ ಮಂತ್ರಮಂ ತಂತ್ರದಿಂ ತಱಿದು ಪೊಸಮಸೆಯ ವಿಶಿಖಂಗಳಿಂ ಪಗೆಯ ಬಿಲ್ಲಂ ಪುಲ್ಲಂ ಕಡಿವಂತು ಮುಕ್ಕಡಿಗೆಯ್ದು ಬೊಬ್ಬಿಱಿದಂ. ಚಂಪಕನೆಂಗುಂ:—ಕಣ್ಬೇಸೆಯ ಕರಡಿಯಂ ತೊರಲದಿರೆಲೆ ಕೂಟ! ಚಾಪಂ ಪೋದೊಡೇನಕ್ಕುಂ. ನಿನ್ನೊಂದು ವಧೆಗೀ ಗದೆ ಸಾಲದೆ? ನೋಡೆಂದು ದಂಡಂ ಖಂಡಮಪ್ಪಂತು ಪೊಯ್ದಂ. ಅನಿತ ಱೊಳೆ ಗದೆಯಂ ಸದೆದು ಮೇಣೆರಡಂಬಿಂ ಮುಂಬಿಗನಂ ನಿರಾಯುಧನಂ ಗೆಯ್ದು ನಿಶ್ಚೇಷ್ಟಿತನಪ್ಪಂತು ನೋಯಿಸಿ ಕಣದೊಳ್ ಕೆಡೆಪಿದಂ. ಇಂತು

ಚಂಪಕಂ ಜೋಂಪಿಸಿ ತಿರೆಯೊಳ್ ಕೆಡೆವುದುಂ ಅಱಿದುಱಿದ ಬೆಂಬಲಂ ಮುಂಬಲ
ವಾಗೆ ಬೆಂಗೊಟ್ಟೋಡಿ ತಮ್ಮಾಣ್ಮಂಗಿಂತಿದಂ ಕೇಳಿಸಿದರ್. ಒಡನೆಯೆ
ಸುರಥಂ ರಥಮನಾ ಎಡೆಗೆ ನೂಂಕಿ ಪಗೆಯುನಸ್ತ್ರಜಾಲದಿಂ ಸೆಱೆವಿಡಿದುಯ್ವೆ
ನೆಂಬಾವೇಳೆಯೊಳಣುಗನರಿಯುಂ ಕರಿಯನೆಱಗುವ ಬಲ್ಸಿಂಗನಂತಿರೆ ತನ್ನೊಂ
ದಾಟೋಪದಿಂ ತಾಗಿ ತೂಗಿ ಪಿಡಿಯಿಂ ಗುರ್ದಿದನಾಗೆ ತೇರ್ ಜಜ್ಜರಿ
ವೋಯ್ತು. ಆಗಳ್ ಸುರಥಂ ವಿರಥನಪ್ಪುದುಮಿರ್ವರುಂ ಕಣಸೊಳ್ ಸಮ
ದಂಡಿಯಿಂ ಪೊಣರ್ದರ್. ಹಯಮಂ ತಾರೆಂಬ ರಾಘವನಂ ತೋಱೆಂಬ
ಕೆಲಸಾರೆಂಬ ನೀನಾರೆಂಬ ಪೋರೆಂಬ ಬಾರೆಂಬ ಸಡಗರದ ನುಡಿಯೆ ನುಡಿ
ಕೊಳುಗುಳದೊಳ್. ಸುರಥನಿಟ್ಟ ಗದೆಯನಣುವಂ ಮುಱಿದಂ; ಪೊಯ್ದ
೧೦ ಕೂರಸಿಯುಂ ಮುಱಿದನೆಚ್ಚಗ್ನಿ ಬಾಣಮುಂ ಮುಱಿದಂ; ಗರುಡಾಸ್ತ್ರಮುಂ
ಮುಱಿದಂ; ವಜ್ರಾಸ್ತ್ರಮಂ ಮುಱಿದಂ; ಬ್ರಹ್ಮಾಸ್ತ್ರಮುಂ ಮುಱಿದಂ;
ವಾಯುಬಾಣಮುಮಂ ಮುಱಿದಂ; ರಾಮಬಾಣಮೆಂದೊಡೆ ಸರಿದಂ.
ಏನೆಂಬ ಭಕ್ತಿಯೊ ದೇವರೊಳ್! ಅಂತು ಚಳಚಳಿಸಿ ಬೆಳಬೆಳಗಿ ತೇಂಕಿವರ್ಪ
ಪೊಂಗಱಿಯ ರಾಮಬಾಣಮಂ ದೂರದೆ ಕಂಡಡಿಮುಡಿಯೊಂದಾಗೆ ಮಣಿದು
ಕೈಯೊಳ್ ಕೊಂಡೆರ್ದೆ*ಗೊತ್ತಿ ತಲೆಯೊಳಿಟ್ಟು ಪೆಗಲೊಳಾಂತು ಪಕ್ಕೆಗೆಯ್ದು
ತಳ್ಕೈಸಿ ಸೊಗದಾಲಿನೀರಿಂ ಮೀಯಿಸಿ ನಿಜಭಕ್ತಿಯೊಂದು ಹರವಸದಿಂ
ಮೆಯ್ಮಱೆದೆೞ್ಚರ್ಗೊಂಡು ಸಂತಸದ ಸವಿಗಡಲೊಳೋಲಾಡಿ ನೋಡಿ ಪಾಡಿ
ಮತ್ತಂ ಕಟ್ಟಿದಿರೊಳಿರ್ಪ ಸುರಥನು ಕಂಡೆಲೆ ರಾಯ! ಇಂದಿಗೆ ನೀನೆ
ಗೆಲ್ದಯ್. ನಿನ್ನನೆ ದೇವರೊಲ್ದರಕ್ಕುಂ. ಎಲೆ ದೇವ! ಭಕ್ತವತ್ಸಲನಾಗೆಯೆ?
೨೦ ಕರುಣಾಕರನಾಗೆಯೆ? ಮುಂ ಜಗದೊಡೆಯನಾಗೆಯೆ? ಎನ್ನೊಡೆಯನಾಗೆಯೆ?
ಆಂ ಬಂಟನಾಗೆನೆ? ಮುನ್ನಿನ ನನ್ನಿಗನಾಗೆನೆ? ಎನ್ನೊಳೇನಪರಾಧಮೊ?
ಏನುಪೇಕ್ಷೆಯೊ? ಪೇೞಿರೆ, ದೇವಾ! ಈಬಣಗುರಾಯನೊಳಗೆ ಜುದ್ದಂ
ಕೈಗಟ್ಟುವೊಡಕ್ಕುಮೆ? ನೀನೆ ಬಂದು ಜಡಿವೊಡಕ್ಕುಮೆ! ಬಡಿವೊಡಕ್ಕುಮೆ!
ಸೆಱೆವಿಡಿವೊಡಕ್ಕುಮೆ! ನಿನಗಮೀಪಂದೆ ಗೊಂದೆರಾಯನೊಳೇಂ ಪಕ್ಷ
ಪಾತಮೊ! ಸಾಜಂ. ನಿನ್ನತ್ತಣಿನರಿಗಮಂಜುವೊಡಾದೆಂ. ಬೆನಕನಂ ಕಂಡು
ಕಿತ್ತಿಲಿಗೆ ಕುಂಬಿಟ್ಟಂ. ನೀನಿಲ್ಲದಂದೆನಗೇತಱ ಕೂರ್ಪು? ಏತಱೊಂದಾರ್ಪು?
ಮೇಣೇತಱ ಪೊಡರ್ಪು? ಎನಗೇಕೆ ಬಂಟತನಮೇತರ್ಕೆ ಹಯದ ಬೆಂಬಱಿ
ಯೆಂದು ಪಲವಂದದೊಳ್ ಮಣಿಮಣಿದು ಪಾಡಿ ಬೇಡಿಕೊಳುತಿರ್ಪುದುಂ—
ಬಾನ ಮೀನನಿಱಿಕೆಯ್ವೊಂದುಜ್ಜಳದ ಕುಂಡಲಂ, ಬಣ್ಣಿಸಿ ನುಣ್ಣಿಸಿದ ಕರ್ಮಣಿ
೩೦ ಗಲ್ಲ ಕೈಗನ್ನಡಿಯೆಂತಂತು ತಳತಳಿಪ ಗಂಡಮಂಡಲಂ, ಮುಗಿಲ್ ಪಗಿಲ್ತಾಗ

ಸದ ಪಸುರ್ವಣ್ಣದ ಮೆಯ್ಸಿರಿ, ತುಂಬುವೆಱೆಯ ಕಳೆಗೆ ಕೆಳೆಯಪ್ಪ ಮೊಗಸಿರಿ, ಪಲಗೆನೊಸಲಂದಂ, ನಿಱುಗುರುಳ ಚೆಂದಂ, ಕಿಱುನಗೆಯ ಗಾಡಿ, ಚೆಲ್ವಿಸಲರ್ಗಣ್ಗಳ ಕಡೆನೋಟದ ಮೋಡಿ, ಬಗೆಯೊಳಿಂಬುಗೊಳಲೊಡಂ ಮಿಗಗೋಡುಂ ನಾಱು ಸೀರೆಯುಂ ತನ್ನ ಲಚ್ಚಣಮಾಗೆ ದೀಕ್ಷೆವೊತ್ತ ಕೋದಂಡದೀಕ್ಷಾಗುರುವಂ ತನ್ನಿದಿರೊಳ್ ಕಂಡಂ. ಇಂತು ಪ್ಪೈದೋಱಿದ ತನ್ನೊಡೆಯನಂ ಸುಖಾಶ್ರು ತಾಂ ತನಗೆ ಕಾಟ್ಪುಱಮಾಗೆ ಸೋರ್ಪಿನಂ ಎಮೆಯಿಕ್ಕದಾಲಿಸಿ ಮೇಣುಂ ಮೇಣುಂ ದೇವರಡಿಯೊಳ್ ಪೊರಳ್ದು ತನ್ನ ಬನ್ನಮಂ ನಿರವಿಪುದು ಮತ್ತಲ್ ಮಱುವಕ್ಕದ ಸುರಥಂ ತಳ್ವದೆ ಹಯಮುಂ ಕಪ್ಪಮುಂ ಕಾಣ್ಕೆಯುಂ ಪೊನ್ನ ಭಂಡಾರಮುಂ ತರಿಸಿ ರಾಘವನಡಿಗೊಪ್ಪಿಸಿ ತಾನುಂ ದಂಡಪ್ರಣಾಮಂಗೆಯ್ದು—ಜೀಯ! ದೇವ! ಎನ್ನೊಡೆಯ! ಎನ್ನಿತಪರಾಧಮೆನ್ನಿತಪರಾಧಂ! ಬಂದ ಹಯಮಂ ನಿನ್ನದೆಂದಱಿತುಂ ಬಿಟ್ಟೆನಿಲ್ಲಂ. ನಿನ್ನವರಂ ಪೊಯ್ದೆಂ ಬಯ್ದೆಂ. ಆದೊಡಂ ನಿನ್ನಂ ಕಾಣ್ಬೊಂದು ಬಯಕೆಯೊಳಲ್ಲ, ಗೆಲ್ಲದೊಳೆಳ್ಳನಿತಾದೊಡಮಲ್ತು. ಈಗಳ್ ಕಣ್ಣಾಱೆ ಕಂಡೆಂ, ತಣಿದೆಂ, ದಣಿದೆಂ; ಮೇಣೆನಗಾವುದಱೊಳಾಸೆ? ಇದೆಕೊಳ್! ಹಯಂ, ಕಾಣ್ಕೆ, ಕಪ್ಪಂ, ನಾಡು ಬೀಡೆಮ್ಮ ಸೊಮ್ಮು ನಿನ್ನ ಚರಣಕ್ಕರ್ಪಿಸುವೆಂ. ಎನ್ನೊಡಲುಮನೊಡಮೆಯುಮಂ ಮಡದಿ ಮಕ್ಕಳಂ ನಿನ್ನಡಿಗೊಪ್ಪಿಸಿದೆಂ. ನೀನೋವುದು ಕಾವುದು—ಎಂದು ಸೆಱಂಗನೊಡ್ಡಿ ಬೇಡಿಕೊಂಡಂ. ಆಗಳ್ ಶ್ರೀರಾಮಚಂದ್ರಮನಿರ್ವರುಮನೆತ್ತಿ ತಳ್ಕೈಸಿ ತನಗಭಿಮಾನಮನಿರ್ವರೊಳಂ ಸಮಂತು ಪ್ರಕಟಿಸಿ ಕ್ರೋಧಮಂ ತಿಳಿಪಿ ಕಳಿಪಿ ಮತ್ತಂ ಮುರ್ಚ್ಛೆವೋದ ತಮ್ಮವರನೆಬ್ಬಿಸಿ ಸರ್ವರುಮಂ ಸಂತೈಸಿ ಮೆಯ್ಗರೆದಂ.

ಬೞಿಕ್ಕಮಾಶತ್ರುಘ್ನರರೆವಗಲುಪ್ಪಯಣಂಗೆಯ್ದು ಸುರಥನಿಂ ಸತ್ಕೃತರಾಗಿ ರಾಜಂಬೆರಸು ಸಡಗರದಿಂ ಮುಂತೆಮುಂತೆ ನಿಚ್ಚವಯಣದಿಂ ನಡೆದರ್.

ಎಂಬಲ್ಲಿಗೆ ಶ್ರೀರಾಮಾಶ್ವಮೇಧದೊಳ್
ಹನುಮತ್ಪರಾಜಯಂ ಪಂಚದಶಾಶ್ವಾಸಂ ಸಂಪೂರ್ಣಂ.

---

ಷೋಡಶಾಶ್ವಾಸಂ

## ಕಥೋಪಸಂಹಾರಂ

ಎಲೆಗೆ ರಾಮಾಭಿರಾಮೆ! ಸುಗ್ರೀವೆ! ನೀಲಕುಂತಳೆ! ಕುಮುದನಯನೆ! ಪದ್ಮಗಂಧಿ! ಕೇಸರಿಮಧ್ಯೆ! ಅಂಗದವಿರಾಜಿತೆ!

ಅಂತು ಕುಂಡಲಪುರದಿಂ ತಳರ್ದು ಪೆಱವರ ಕೆಱವರ ಕಣ್ಣಿಲಿ ಮೊಗರ ಗುಡ್ಡರೋರೊಂದು ನಾಡಂ ಕಟಿಕಟಿದು ಬರುವರುತುಮಿರ್ಪುದುಮಲ್ಲಿ ಮಲ್ಲೀವಲ್ಲೀಕುಂಜಪುಂಜರಂಜಿತಮಾದೊಂದು ಮುನಿಗಳಾಶ್ರಮದ ಪೊಱವಳಯದ ತೋಂಟದೊಳಾಟದ ಕಿಱುವರೆಯದ ಕುವರರಿರ್ವರದಟಿಂ ತಡೆದು ಪಿಡಿದು ಹಯಮಂ ಕಟ್ಟಿದರ್ ಗಡ!

೧೦ ಮನೋ—(ಕೇಳ್ದೊಂದು ತವಕದಿನೆಸಸುಂ ಸರಿಸಕ್ಕೈತಂದು ಸಲ್ಮೆಮಿಗೆ ನಲ್ಲನಂ ಗಲ್ಲಮನಲುಗಿ ತಳ್ತಮರ್ದಪ್ಪಿ) ಎನ್ನ ಚೆನ್ನರಸ! ಮುನಿಗಳಾಶ್ರಮದ ತರಳರ್ಗೀಬಗೆಯೊಳ್ ನಾಡ ರಾಯಸಂ ಜನ್ನಗುದುರೆಯುಂ ಕಟ್ಟಿಕಾದುವೊಂದು ಬಲ್ಪಂ ಕೂರ್ಪುಂ ನೇರ್ಪಟ್ಟುದೆಂತು? ಅರಪ್ಪರೀಕುಮಾರರೇಂಗೆಯ್ದರೇನಾದರೆಂತು ಕಾದಿದರ್ ಪೇಱ? ಅಬ್ಬಾ! ಏಂ ಗಡುಸುಗಾಱರೊ!

ಮುದ್ದಣ—ಉಃ! ಪೋಕೆ. ಬಾಜ್ಗಿಟ್ಟ ಮಕ್ಕಳಾರಾದೊಡಮೇಂ? ಸಾಲ್ಗುಮಿಾಪಾಟ್ಗಿತೆ; ಕತೆವೇೞ್ದು ಬೇಸತ್ತೆಂ; ಎಂತುಂ ಯಜ್ಞಪರಿಸಮಾಪ್ತಿಗೆಯ್ವೆಂ.

ಮನೋ—ಮುದ್ದುಮೊಗದ ಚೆನ್ನಿಗರಾಯ! ಆಗದಾಗದು, ತನ್ನಾಣೆ! ಬಾಲಕರ್ ರಣದೊಳ್ ಸೋಲ್ತರೆ? ಗೆಲ್ದರೆ? ಪೇೞಯ್. ನಿನಗಮೇನಿಂತು

೨೦ ಬೇಸಱೊ ಕಾಣೆಂ.

ಮುದ್ದ—ನೀನುಡುಗೊಱೆಯನೀವುದನೇನುಮಂ ಕಾಣೆಸುಂತೆ ಪೇೞಂದೊಡೆ ಪೇೞ್ವರೆ?

ಮನೋ—(ಕಿಱುನಗೆಯಿಂ) ಎಱೆಯ! ನೀನುಮೆರೆವರೆಂತಂತು ಬೇಡುವಯ್. ಇಸ್ಸಿ! ಕಾಡಿ ಬೇಡಿಕೊಂಡೊಡೊಂದುಡುಗೊಱೆಯೆ? ಮನಮೊಲ್ದೀವೊಡಲ್ತೆ ಮೆಚ್ಚು?

ಮುದ್ದ—ಮೆಚ್ಚಂ ನಚ್ಚಿ ಪಚ್ಚೆವೋದೆಂ. ಆಯ್ತು ನೋೞ್ಪೆಂ. ಎಳ

ಗುವರರೊಂದು ಕತೆ ಮುಂತಿರ್ಕೆ. ನೀಂ ಮುನಿವೆರಸು ಪೋದ ಸೀತೆಯೊಂದಿ
ರವನಱಿತುಂಟೆ ?

ಮನೋ—(ಅಱಿವುಗೊಂಡು) ಎನಗಮೇನೊಂದು ಮಱವೆಯೊ ? ಎನ್ನಬ್ಬೆ
ಸೀತೆಯುಮಂದಾಗಳೆ ಮಱೆತೆಂ. ಅಪ್ಪುದಪ್ಪುದು. ಮುನಿಗಳಾಶ್ರಮದೊ
ಳೆಂತಿರ್ದಳೇಂಗೆಯ್ದಳ್ ? ತಮರವರ್ ಕಡೆಗೆ ಕೊಂಡುಯ್ದರೇಂ ? ಎನಗಿದನೆ
ಪೇೞ್. ಆಮುಕ್ಕಳಿರ್ಕೆ ಪೋಕೆ.

ಮುದ್ದ—ಅಂತಱಿವುಂ ನನ್ನಿಯುಂ ಬಿತ್ತುಂ ಬೆಳೆಯುಂ ಪುರುಳುಂ
ತಿರುಳುಮೊಡವೆರಸು ಪೋಪಂತೆ ಪೋಗಿ ಒೞಿಕ್ಕೆ ಮುನಿಪನಾಶ್ರಮದ ನಟ್ಟ
ನಡುವೆ—ಎಳವಳ್ಳಿಯ ಮೊಗವಾಡಂ, ಬೆಳ್ಳಿಲೆಯ ಮಂಡಪಂ, ಪಸುರೆಲೆಯ
ಸಟ್ಟವನೆ, ಸೆಳೆಗೊಂಬಿನ ಕೇರ್, ಪಣ್ಣೆಲೆಯ ಪೊದಕೆ; ಚೆಂದಳಿರ ಪಟ್ಕೆ, ೧೦
ಪೊಸಸುೞಿಯ ಮೂಡಾವಿ, ಅಲರ್ಜೊಂಪದ ಮೇಲ್ಕಟ್ಟು ಚೆಲ್ವಾಗೆ ಕಣ್ಗಂ
ಮನಕಮಿಂಬಾದ ಪರ್ಣಕುಟಿಯನೇರ್ಪಡಿಸಿ ಬಗ್ಗಿನೊಂದು ಸಿರಿಯಂ ಹದಿೞೆ
ಗೆಯ್ವಂತು ದೇವಿಯನಿರಿಸಿ ನೆರೆಮನೆಯ ಮುನಿಸತಿಯರಂ ನೇಹದ ಸಲ್ಗೆಳದಿ
ಯರಂ ಮಾಡಿ, ಪಾಡೞಿದು ಬೆಂಡಾಗದಂತು ತಾನಾರೈಯುತಿರ್ದಂ.

ಸೀತೆ ನಿಚ್ಚಲುಂ ಪೊೞ್ತುಡೆಗೆ ಮುನ್ನಮೆ ಶ್ರೀರಾಮನೊಂದು ನೆನಪಿ
ನೊಳೆೞ್ಚತ್ತು ಮೂಡಿವರ್ಪ ತನ್ನ ಕುಲಗುರುಗಭಿವಂದಿಸಿಯುಂ, ಮಿಂದು
ಒಂದು ಮಡಿಯುಟ್ಟು ಮುನಿಗಯ್ಯಂಗೆಂತಂತು ಬಲವಂದೆಱಗಿ ಪರಕೆಗೊಂಡು
ಮುನಿಪತ್ನಿಯರಂ ಕಾಲ್ವಿಡಿದು ತಿಱಿತಂದ ಪೂಗಳನರ್ಪಿಸಿ ಕಿಱಿದುಂ
ಬೇಗಮಿರ್ದು ಸಲ್ಲಪಿಸಿ ನಿಲ್ಲಿದವರಿತ್ತ ಕಂದಮೂಲಂಗಳಂ ಕೈಕೊಂಡು ತನ್ನ
ಕಿಱುವೆರಲ ಮುದ್ರೆಯುಂಗುರದ ಶ್ರೀರಾಮಮೂರ್ತಿಗೆ ಸಮರ್ಪಿಸಿ ಬೞಿಕ್ಕೆ ೨೦
ತಾನಿನಿಸಿನಿಸಂ ಕೋಡಿವರಿವ ಕಣ್ಣೀರ ಬೆನ್ನೀರೊಳುಂಡು ಕಂಡು, ಮುನಿಗ
ಳೋದುವ ರಾಮಚಾರಿತ್ರಮಂ ಕಿವಿಯಾಱೆ ಕೇಳ್ದು ತಾನುಂ ಪಂಬಲಿಸಿ
ನಡೆವಗಲ್ವರೆಗಮಿರ್ದು ಸಂಜೆಯಪ್ಪುದುಂ ಸಂಧ್ಯಾದೇವಿಯುಂ ಭಾವಿಸಿ
ಮತ್ತಂ ತನ್ನ ಪ್ರಾಣೇಶ್ವರನ ಸಲ್ಮೆಯ ಬಣ್ಣನೆಯನೆ ನೆನೆನೆನೆದೊಂದು
ಹರವಸದಿಂ ಮೈಮಱೆವಳೊಱಗುವಳ್ ಕನವರಿಸುವಳ್. ನುಡಿಯೊಳ್
ನಡೆಯೊಳೆಡವಿನೊಳ್ ಜಡದೊಳ್ ಜಂಜಡದೊಳ್ ಅಡಿಗಡಿಗೆ ಶ್ರೀರಾಮ
ನೊಂದೆ ನೆನಪು ಗಡ ! ಏಂ ಸಾಧ್ವಿಯೊ ! ತನ್ನೆಱೆಯನೆಯೆ ಪಾಡು; ತನ್ನಾಣ್ಮ
ನೆಯೆ ಭಕ್ತಿ ; ತನ್ನಿನಿಯನೆಯೆ ನೆನೆಪು ; ತನ್ನರಸನೆಯೆ ಸರಸಮಾಸರಸಿಜಾಕ್ಷಿ
ಗಜಸ್ರಂ. ಕೋಡಳ್ ಬಾಡಳ್ ಕೊಂಕಳ್ ಸಂಕಿಸಳೋಪನ ಕೋಪದ ಶಾಸ
ನಕ್ಕೆ ಜನಕತನೂಜೆ. ತನ್ನೆಡರನೊರ್ವೆ ನೆನೆವಳೊರ್ವೆ ಮಱುಗುವಳೊರ್ವೆ ೩೦

ಆಳವೞಿವಳೊರ್ಮೆ ತಿಳಿವಳೊರ್ಮೆ ತಾಂ ತನಗೆ ಸ್ಸೈತಿಡುವಳೊರ್ಮೆ ಬೇಡಂ
ಪೊಕ್ಕನಾಡವೆಣ್ಣೆಂತಂತು ಬೆರ್ಚಿ ಬೆದಱುವಳೊರ್ಮೆ ಮಱೆವಳೊರ್ಮೆ
ಗುಱುಗುಮ್ಮನಿರ್ಪಳಾಹದಿಬದೆ ನಿಚ್ಚಂ. ಇಂತು ತನ್ನೊಂದಿರವಿನ ಸೋವ
ನೆಂತುಂ ತನ್ನ ಮನದನ್ನನ ನೆನಪಿನೇಱಿಗುಡಳ್. ಮುನಿಯಾರಯ್ಕೆ ಮುನಿ
ಸತಿಯರ ನೇಹಂ ತನ್ನೊಂದು ಪಾತಿವ್ರತ್ಯಂ ನಿಸದಂ ದೇವಿಗೆ ಮೂವಳಸಿನ
ಕಾಪಾಯ್ತು.

ಈಮಾಳ್ಕೆಯಿನಿರ್ಪ ಭೂಜಾತೆಗೆ ಸೀತೆಗೆ ತಿಂಗಳ್ ತುಂಬಿವರೆವರೆ
ಮುನಿ ಕಂಡು ಸೀಮಂತಕರ್ಮಮಂ ಯಥಾವಿಧಿ ಮಾಡಿಸಿದಿಂಬೞಿಯುಂ
ನಲ್ಗೆಳದಿಯರ್ ಮಲ್ಲಿಕಾಸ್ಮಿತೆಗೆ ಮಲ್ಲಿಗೆಯ ಜೊಲ್ಲೆಯುಮಂ, ಕುಂದಕುಟ್ಮಲ
ರದನೆಗೆ ಕುಂದದ ಬಾಸಿಗಮಂ, ಮಂದಗಮನೆಗೆ ಮಂದಾರದ ಬೈತಲೆಬೊಟ್ಟಂ,
ಕಮಲಮುಖಿಗೆ ವಿಮಲಕಮಲದಂಡುಗೆಯುಂ, ಚಂಪಕಸುನಾಸೆಗೆ ಸಂಪಗೆ
ಯೊಡ್ಯಾಣಮಂ, ಶಿರೀಷಕೋಮಲಾಂಗಿಗೆ ಸಿರಸದ ಕಿಱುಮುಗುಳೆಕ್ಕಸರಮಂ,
ಜಾತಿನಾಯಕಿಗೆ ಜಾತಿಯ ಪಿಂಡುಗಂಕಣಮಂ, ಸೀಮಂತಿನಿಗೆ ಸೇವಂತಿ
ಗೆಯ ತೋಳ ಬಂದಿಯುಂ, ಸಮೆದು ಸಿಂಗರಿಸಲೊಡಂ; ಪೂವಿನ ಪೊಸಪಸದ
ನಂಗೊಂಡು ಅಂಗಂಬಡೆದು ಕಟ್ಟಿದಿರ್ಗೆ ಜಳಕ್ಕನೆ ಬಂದು ನಿಂದ ವನದೇವಿ
ಯೊಂದು ಪಾಂಗಿನಿಂ ದೇವಿ ಕಣ್ಗೆಡ್ಡಮಾದಳ್.

ಇಂತೊಪ್ಪುವ ಸೀತೆ ಕಿಱಿದಾನುಂ ದಿನಕೆ ಮೇಣೊಂದು ಮುಹೂರ್ತ
ದೊಳಮುಳರನಮುಳರಂ ಪೆಱೆನೇಸರ್ಕಳಂ ಪೂರ್ವದಿಕ್ಸುಂದರಿಯೆಂತಂತು ಪೆತ್ತು
ಪತ್ತುಂದಿವಸಂಗಳ್ಗೆ ಮುನಿಪಂ ಕುಶನೆಂದುಂ ಲವನೆಂದುಂ ಕೊಂಡಾಟದ
ಪೆಸರನಿಟ್ಟು ಕರೆವುದುಮಂದಿಂದಿಂಗಮವರ್ಗೆ ಕುಶಲವರೆಂಬ ಸಂದ ಪೆಸರಾ
ಯ್ತಿಳೆಗೆ. ಒರ್ಮಡಿಯ ಚೆಲ್ವಿರ್ಮೆಯ್ವೆತ್ತಂತುಮಿರ್ಮೆಯ್ಯ ಸೋಮಕಾ
ಮರ್ ಒರ್ಮೊದಲೊಳೊಗೆದಂತುಮೊಗೆದು ಗಾಡಿಗಾಡುಂಬೊಲಂ, ಸತ್ತಿನ
ಗೊತ್ತು, ಹರಿಸದ ಸರಿಸಮೆನೆ ತೋಱಿ ದಿನದಿನಕ್ಕೇಱುಂಬೆಱೆಯಂತೆ ಕಳೆ
ವೆರ್ಚುತೆ ಬಳೆಯುತಿರ್ಪಾ ನಿಸರ್ಗಸುಭಗರ್ ಪೆತ್ತಬ್ಬೆಗಂ ಪುತ್ತಿನ ಪುತ್ರಂಗಂ
ಮುತ್ತ ಮುನಿಗಳ್ಗಮೆತ್ತಿ ಸಲಿವ ಬಾಲೆಯರ್ಗಂ ಮತ್ತಮೆಲ್ಲರ್ಗಂ ಮುದ್ದು
ಮುದ್ದಾದರ್. ದಟ್ಟಡಿ ಬಟ್ಟಮೊಗಂ ಪುಟ್ಟಗೈ ನಿಟ್ಟಾಲಿ ನಟ್ಟನಡುವಣ
ನಾಭಿ ಕಟ್ಟಾಯದ ಮೆಯ್ಸಿರಿ ನೋಟ್ಪರಂ ನಿರ್ವ್ಯಾಜಂ ಬೆಮೆಗೊಳಿಸೆ ಮೊಳೆ
ವಲ್ಲ ಚೆಲ್ವು ಕಿಱುನಗೆಯುಂದಂ ತೊದಲ್ನುಡಿಯ ಸೊಗಸು ತಳರ್ನಡೆಯ ಗಾಡಿ
ಮನಂಬುಗೆ ಕಣ್ಗಿಂಬಾದರಾಲಂಬಾಲಕರ್ ಬಾಲಕರ್.

ಮತ್ತಂ ಚಲದಿಂ ಮಱುಗುವ, ಮಱುಗುತಬ್ಬೆಯನಿರ್ಕೆಲದೊಳಂ ಸೆಱಂಗಂ

ಸೆಳೆವ, ಸೆಳೆದೋಡುವ, ಸಮಂತೋಡಿ ಕಟ್ಟಿದಿರ ಕರ್ಗೋಱಡಗನಂ ಗಡ್ಡ ದೊಳೀಱ್ದು ಮಱಿಸಿಂಗನ ಬಾಲಕ್ಕೆ ಗಂಟಿಕ್ಕುವ, ಗಂಟಿಕ್ಕಿನಗುವ, ನಕ್ಕು ಮೊಕ್ಕಳಂ ನಲಿವ, ನಲಿದು ಬಂದು ಮುನಿಯನಪ್ಪುವ, ಪಿಡಿದಪ್ಪಿ ತೊಡೆಯ ನೇಱುವ, ತೊಡೆಯನುಱಿದು ಪೆಗಲನಡರ್ವ, ಪೆಗಲನಡರ್ದು ಕಿವಿಯನೂದುವ, ಕಿವಿಯನೂದಿ ತಲೆಯನಲುಗುವ, ತಲೆಯನಲುಗಿ ಮುಡಿಜಡೆಯಂ ಬಿಡುವ, ಬಿಟ್ಟ ಕೆಂಜಡೆಯ ತುದಿಗೆ ಜಿಲ್ಲವತ್ತಮಂ ಪೊಲ್ವ, ಪೊಲ್ದಬ್ಬೆಗೆ ತೋಱುವ, ಅಬ್ಬೆಗೆ ತೋಱಿ ಕೈಪಱೆಗುಟ್ಟುವ, ಕೈಪಱೆಗುಟ್ಟಿ ಬೆನ್ನೊಳ್ ಮೈಗರೆವ, ಮೈಗರೆದು ಗುಂಡಿಗೆಯಂ ಕಳ್ವ, ಕಳ್ದು ಬೈತಿಡುವ, ಬೈತಿಟ್ಟೊರ್ವಂ ಕಳ್ದನೆಂದೊರ್ವನಂ ಪೇೞ್ವ, ಪೇೞ್ದೊಡನೆ ತಂದೀವ, ತಂದಿತ್ತಡಿಗೆಱಗುವ, ಅಡಿಗೆಱಗಿ ಪರಕೆಗೊಂಬ, ಪರಕೆಗೊಂಡು ತಾಯೆಡೆಗೆ ಬರ್ಪ, ಬಂದು ತಮ್ಮ ಲೀಲೆಯುಂ ಕೇಳಿಪ, ಚಿಣ್ಣರಾಟಂ ಮಾತೆ ಸೀತೆಯ ತೆರೆಮಸಕದ ಸಂತಸಗಡಲ ನಿರ್ಮಡಿಯುರ್ಚಿಸಿದತ್ತು. ೧೦

ಅನಿತಱಿಂ ಒಟಿಕ್ಕೆ ಮುನಿಪಂ ಚೌಲೋಪನಯನಸಂಸ್ಕೃತರಾದ ಬಾಲ ಕರ್ಗೆ ಪಲವೋದುಗಳನೋದಿಸಿ, ಬಿಜ್ಜೆಯೊಳ್ ಬಿನ್ನಣಿಗರನಾಗಿಸಿ, ಪಱವಾತು ಗಳನೆಲ್ಲಮಂ ಸಾಂಗಮಱಿಪಿ, ಶಾಸ್ತ್ರಂಗಳನೊರೆದು, ಪುರಾಣಂಗಳೊಳ್ ಪರಿಣ ತರಂ ಮಾಡಿ, ಗಾಣದೊಳ್ ಜಾಣರಂಗೆಯ್ದು, ಬಿಲ್ಗಾಱಿಕೆಯೊಳ್ ಬಲ್ಗೈಗಲಿ ಗಳನೆಸಗಿ, ಪಾಟಮಾಟಮಪ್ಪಂತು ಕಲಿಸಲೊಡಂ ಮೋಡಮಱಿಯೆ ತಿಳಿದ ಕಳೆಗಳಿಂ ಬೆಳಗುವ ಚಂದ್ರಮನಂತೆ ಮೋಡಮಱಿಯೆ ತಿಳಿದ ಕಳೆಗಳಿಂ ಬೆಳಗಿದರ್ ಯಮಳರ್. ಪುಸಿಯದ, ಬೇಸಱದ, ಗಾಸಿಗೆಯ್ಯದ, ಬಾಸೆ ದಪ್ಪದ, ಬೋಸರಿಸದ, ಕಟ್ಟಱಕದ ಕೂರ್ಮೆ ಪೆರ್ಮೆವೆತ್ತುದು. ತಮ್ಮೊಳೆಣೆ ೨೦ ಯರ್ಗೆಂದುಂ, ಮುನಿಯೊಳೊಂದು ಗುರುಭಕ್ತಿ ಮಾತೆಯೊಳ್ ದೈವಭಕ್ತಿ ಕಣ್ಬೊಲಮಾಗೆ, ತಾಪಸರೊಳೊಲ್ಮೆಯಿಂ, ವಟುಗಳೊಳ್ ನಲ್ಮೆಯಿಂ, ಸಂತಂ ಒಳೆಯುತಿರ್ದರಾಜಿತಮಾರರ್ ಕುಮಾರರ್.

ಓ ಎನ್ನ ಪ್ರಾಣೇಶ್ವರೀ! ಇಂತು ದಿನದಿನಕ್ಕೇೞ್ಗೆವೆತ್ತು ಒಳೆಯುತಿರ್ಪ ಬಾಲರ ಬಳವಿಯನೆ ಕಂಡು ತನ್ನ ಮುನ್ನಿನ ಬನ್ನಮುಂ ಪಿರಿದುಂ ಮಱೆದು ನಲಿವ ಜಾನಕಿಯಿರವಿಂಗೆ ಕೃತಕೃತ್ಯನಾದೆನೆಂದು ಬಗೆಮಿಗೆ ಪೊಂಗಿ ಸಂತಮಿರ್ಪ ವಾಲ್ಮೀಕಿ ಕಿಱಿದಾನುಂ ದಿನಕ್ಕೆ ತನ್ನೊಂದವಸರಕೆ ಕುಶಲವರನಾಶ್ರಮಕೆ ಕಾಪಿಟ್ಟು ವರುಣಲೋಕಕ್ಕೆ ಪೋಪುದುಮಾಗಳೆತ್ತಾನುಂ ಸ್ವೇಚ್ಛೆಯಿಂ ನಡೆವ ರಾಘವನ ಜನ್ನಗುದುರೆ ಈ ಆಶ್ರಮಮುಮಂ ಪುಗುತರಲೊಡಂ—

ಮನೋ—ಈಗಳಱಿತೆಂ ಹಸುವಂ ಕಟ್ಟಿದ ಬಾಲರಾರೆಂಬುದಂ. ಕುಶಲವ ೩೦

ರಾಗರೇ? ನೀನುಮಾವ ನಾಡ ಗತಕಿಯೊ? ಆಗಳೆ ಸೀತೆಯ ಮಕ್ಕಳ್
ಕಟ್ಟಿ ಕಾದಿದರೆಂದೊಡಾಗದೆ! ತಾಂ ಪೇೞಂ ಗಡ! ಮುಚ್ಚುಗಡ!
ಆಯ್ತಾಯ್ತು! ಮುಂತಣ ಕತೆಯುಂ ಪೇೞ್ ನೋೞ್ಪೆಂ.

ಮುದ್ದಣ—ಒಳವುಗೊಟ್ಟ ಕಾದಲನಂ ಮೂದಲಿಪ ಹೂಜೆಗಾರ್ತಿ
ಯೊಂದಾಯತಿಯುಂ ಮೆಱೆವ ನಿನಗೆ ನಳ್ಗೆಳದಿಗಲ್ಲದೆ ಪೆಱಳಾವಳ್ಗಂ ಕತೆಯುಂ
ಬಿತ್ತರಂ ಬಿತ್ತರಿಪಂ, ನುಡಿಗಬ್ಬದ ಗಬ್ಬದುಬ್ಬರದಿಂ ನನೆಕೊನೆವೋಗಿ ಕೊನೆ
ವೆರ್ಚಿನ ಪುರ್ಚಿನ ಪೊಳ್ಳುಬಳ್ಳು ಮುದ್ದಣಂ. ಆಯ್ತು ಕೇಳ್. ಇರ್ವರು
ಮಲ್ತೊರ್ವನೆ ಕಿಱಿಯಂ ಲವಂ ತಾನೊರ್ವನೆ ಸಂಗಡಿಗರ್ವೆರಸು ಆಶ್ರಮಕೆನ
ಸುಂ ದೂರದೆ ತೋಂಟದೊಳ್ ಬಿನದಿಸುತಿರ್ಪ ವೇಳೆಗೆ ಬಿಂಕದಿನಲ್ಲಿಗಲ್ಲಿಗೆ
೧೦ ಸುೞಿದುಂ ತುೞಿದುಂ ಮೂಸಿಯುಂ ಬಾಸಿಯುಂ ಮೇದುಂ ಪಾಯ್ದುಂ
ವನಮಂ ಮನಮಂತುಟಾಱೆ ಪುಡಿಗುಟ್ಟಿ ಕಿಚಿಕಿಲ್ವ ಹಯಮಂ ದಿಟ್ಟಿಸಿ
ಆರ್ತಿದೊಂದು ದುಱುದುಂಬಿಗುದುರೆ? ಕಂಡಿರೆ! ಮುತ್ತಯ್ಯನಿಲ್ಲದಂದೆ ಬಂದು
ಪೊಕ್ಕುಪೊೞದೋಂಟಮಂ ತೊತ್ತುೞದುೞಿದು ಪಾೞ್ಗಿಡಿಕುಂ. ಪೋಪಂ!
ಪಿಡಿದು ಕಟ್ಟಿ ಬಂದೊಡೊಡನೆ ಮುತ್ತಮುನಿಗೊಪ್ಪಿಸುವಮೆಂದು ತಾಂ
ಮುಂತೆ ತಳರಲೊಡಂ ಮಿಕ್ಕಿನ ಬಟುಗಳ್ ಪಿಡಿ ಪಿಡಿ ಎಂದಾರ್ದು
ಸೋವುದುಂ; ಲವಂ ತಾನೆ ಮುಂಬರಿದುತ್ತರಿಗೆಯಿಂ ಕೊರಲಂ ಬಿಗಿದು
ಕೆಲನ ಕಿಱುಗೋಣಿಯ ಕಿಱ್ಕೊಂಬಿನೊಳ್ ಕಟ್ಟಿ ನೊಸಲೊಳೆಸೆವ ಬಿರುದಿ
ನೋಲೆಯುಂ ಕಂಡುಕೊಂಡು ಮಾಣಿಗಳಿದಿರೊಳಿಂತು ವಾಚಿಸಿದಂ :—

ನೆಗೞ್ತೆವಡೆದ ನೇಸಱ ಬೞಿಯೊಳೊಗೆದು ಪೊೞ್ತುಪೊೞ್ತಿಂಗೇೞ್ಗೆವೆತ್ತು
೨೦ ಪಲವುಂ ಪಗಲರಸುಗೆಯ್ದು ಪಂತಿದೇರವೆಸರ ರಾಯುಂ ಮುನ್ನೊರ್ವನುಂಟು.
ಆತಂಗೆ ಪಿರಿಯಳರಸಿ ಕೌಸಲ್ಯೆಯೊಳೞಮುಂ ಬೀರಮುಂ ನನ್ನಿಯುಂ ಬಲ್ಪು
ಮೊಂದಾಗಿ ಮೆಯ್ವೆತ್ತಂತೆ ಪುಟ್ಟಿ ಜಸಂಬೆತ್ತ ಶ್ರೀರಾಘವಂ ಜನ್ನಮಂ
ಬೇಳ್ಗಂ. ಅಂತಿರಾತಂ ಗೆಲ್ಲಕ್ಕೆ ವಾಜಿಯಂ ಸೋದರನಾರಯ್ಕೆಯೊಳ್ ತಿರೆಗೆ
ಕಳುಪಿದಂ. ಆರಾನುಮೆತ್ತಾನುಂ ತೋಳ್ವಲದೊಂದು ಪೆರ್ಮೆಯಿಂ ಜವನ
ಬಾಱಿಗೆ ಪೋಗಲ್ಬಗೆವ ಕಲಿಯಿರೆ ಕಟ್ಟಿ ಕಾದುವುದೆಮ್ಮವರೊಳ್. ಮೇಣು
ಮಂಚಿ ಪಿಂಜರಿವಂ ಕಾಣ್ಕೆಗೊಟ್ಟೆಮ್ಮೊಳ್ ಮಱೆವಾಯ್ವುದು.

ಬೞಿಕ್ಕಮಿಂತು ವಾಚಿಸಿಕೊಂಡು—ಉಂ! ಇಂತುಟಲೆ ಬೀರರೊಂದು
ಪೆರ್ಮೆವಡೆದೇೞ್ಗೆ! ತಾಂ ಕೌಸಲ್ಯೆಯೊಳ್ ಪುರುಳುಂ ಲಕ್ಕಣಮುಂ ಒರ್ಮೆ
ಯ್ವೆತ್ತುದೆಂಬಂತಿರೊಗೆದನಕ್ಕುಂ! ಇಂತಿರಂತದಂ ಬಿಚ್ಚಳಿಸಿ ತೋಱುಪೊಡೆ
೩೦ ಮ್ಮಣ್ಣನೆ ಸಾಲ್ಗುಂ. ನೋೞ್ಪೆಂ ಮಾರಿಗೆ ಬಾಱಿಗಾರೆಂಬುದಂ; ಅಲ್ಲದಂದು

ಪಂದೆಗಳಾಗೆವೆ? ಹಯಮಂ ಮರಲ್ಚುವೊಡಿಂದು ಸೋದರಂ ಸಾದರಂ ಬರ್ಕೆ.
ಅನಿತೊಂದು ಬೇಗದಿನೆಮ್ಮಣ್ಣಂಗಿಂತಿದನಱಿಪಿ ಕೂಡಿವರ್ಪೆಂ—ಎಂಬನಿತ
ಱೊಳ್ ಮಿಕ್ಕಟಿದ ಬಾಲರೆನಸುಂ ಬೆರ್ಚೆ—ನಿನಗೇನೆಲೆ ಸೊರ್ಕು! ಬಲ್ಪುಳ್ಳ
ನಾಡ ರಾಯರ ಜನ್ನಗುದುರೆಯಂ ಕಟ್ಟಿ ಚಲದಿಂ ಕಾದುವೆನೆಂಬ ನೀಂ ಮರು
ಳಾಗ! ಸೆಣಸಾಟಮಾಟಮೆ! ಪಾಟಮೆ! ಬಾಲಂ ನೀನೆತ್ತಂ; ಆಳವಿಗಟಿದ
ಕೂರ್ಪಿನ ಕಾಲಾಳ್ಗಳೆತ್ತಂ! ಪೋ ಮಾಣ್! ಅರಿಗಳ್ಗಱಿವಾಗದ ಮುನ್ನಮೆ
ಕಟ್ಟಿದ ಹಯಮಂ ಪೋವಿಟ್ಟು ಮನೆಗೆ ಪೋಪಂ. ಅಜ್ಜನಾಣೆ! ದುಡುಕಿ
ಪೋಗದಿರೆಂದು ಗದ್ದಿಪುದುಮವನವರ್ಗಳಂ ಗದಱಿ—ಚೀ! ಚೀ! ಕಣ್ಗಟ್ಟಿನ
ತಪದ ಬವಸಿನ ಮುದುಗೂಗೆಯ ಪಿಳ್ಳೆಗಳ್ ಪೋಪೋಗಿರೆ! ಆಂ ತರುವಲಿ
ಗಡ! ಪಗೆ ಕಡುಗಲಿಗಡ! ಆಂ ಕಿಱಿಯನಾದೊಡೇಂ; ಅಣ್ಣಂ ಪಿರಿಯಂ ೧೦
ಸಾಲನೆ? ರಟರಟವೊದಱುವ ಕಾರ ನೀರ ಪೆರ್ಗಪ್ಪೆಗಳಂತಿರೇಗಳುಮಾಗದ
ಪೋಗದ ಪಟುನುಡಿಗಳನೋದುತುಮೊದರುತುಮಿರ್ಪ ನಿಮಗೆ ರಣದ ಗೊಡವೆ
ಯೇಕೆ? ನಿಲ್ಲದೆ ಗುಡಿಗೆಯ್ದು ಕೊಂಡದ ಬೂದಿಯನೂದಿಮಲ್ಲದೊಡೆ ಸವ್ರದೆಯ
ನೊಟ್ಟಿಮಂತುಮಲ್ಲದೊಡೆ ಪರಿದ ಸಮ್ಮಮಂ ಕೆಮ್ಮನೆ ಪೊಲ್ಲಿಮೆಂದು ಮಾಂಕ
ರಿಸಲೊಡಮತ್ತಲ್ ಬೆಂಬಟಿಯ ಕಾಪಿನಾಳ್ಗಳ್ ಹಸುವನಱಸುತುಂ ಬರೆವರೆ
ಕಟ್ಟಿದಿರೊಳ್ ಬಾಲಕರುಮಂ ಮರನ ಮೊದಲೊಳ್ ಹಯಮುಮಂ ಕಂಡು—
ಕಟ್ಟಿದರಾರೆಂದು ಜರ್ಬಿಂ ಮಸಗಿ ಸುಡಿವ್ರದುಂ; ಮಿಕ್ಕ ಪಟುಗಳ್ ನಡು
ನಡುಗಿ—ಆಮಲ್ತಾಮಲ್ತು. ಈ ಪೊಸಮಾಣಿಯಾಗಲ್ವೇೞ್ಕುಂ. ಬೇಡವೇಡೆಂ
ದೊಡಂ ಚಲದಿಂ ಪಿಡಿದು ಕಟ್ಟಿ ಮಿಣ್ಣನಿರ್ಪನೆಂದು ಲವನಂ ತೋಱಿ ತಾಂ
ಮೆಲ್ಲಮೆಲ್ಲನೆ ಪಿಂಜರಿದು ಮರನ ಮಱೆಯೊಳಾದರ್. ಅಂತಪ್ಪುದುಮಾಳ್ಗಳಾ ೨೦
ಲವನಂ ಮುತ್ತಿ ಪಳ್ಳಿಯ ತುಱುವಳನಂತಿರೆ ಹಸುವನೇನೆಂದು ಕಟ್ಟಿದಯ್?
ಹಯಮುಮನೆಮ್ಮುಮಂ ನೋಡದೆ ನಾಡ ರಾಯರೆಂದು ಸಂಕಿಸದೆ ಕದನಕ್ಕಂ
ಜದೆ ಜೀವದಾಸೆಯಿಲ್ಲದೆ ಕಟ್ಟಿ ನಿಂದ ನಿನಗೆ ಕಣ್ಮುಱರವೇಡಾ! ನೆಲನಂ
ಕಿನ್ನೆಲನಂ ಬಾನಂ ತಾನಂತುಟೊಂದು ಮೈಮೆಯಿಂ ಕಾವ ದೇವಂ ಬೇಳ್ವ
ಜನ್ನದ ಮಾನ್ಯದ ಹೂನ್ಯದ ಕುದುರೆ ಕಣಾ! ಅಬ್ಬಾ! ಏಂ ಸೊರ್ಕೋ?
ಸೆಳೆಯ ಸವಿ ಬೇಱೆ, ಪೊನ್ನಪಿಳುಕಿನ ಬಲ್ಗಣೆಯ ಸವಿ ಬೇಱೆ. ಪೋ! ಪೋ!
ಕಾಡ ಕೋಡಗವಸುಳೆ—ಎಂದು ಸೊಪ್ಪಿಂ ಱುಪ್ಪೆವೋದರ್. ಅನಿತಱೊಳ್
ಮಾರ್ಕೊಂಡಾಕೆಱಿವಿಂಡಂ ಪುಗುವ ಮಱಿಸಿಂಗನೊಂದಾಟೋಪದಿಂ ಕಾವ
ಲರ ಪಡೆಯಂ ಸುರ್ಗಿ ಸರಲ ಸೋನೆಯಂ ಕಱೆದು ಘಾತಿಸಿ ಬೊಬ್ಬಿ
ಱಿದು—ಕಂಡಿರೆ ಕಾಡ ಕೋಡಗನಸುಳೆಯ ಕೈಚಳಕಮಂ! ಎನಗೆ ಸೆಣಸಾಟಂ ೩೦

ಸಲ್ವುದೇ ? ಸಾಲ್ವುದೆ ನಿಮಗಿಂದಿನ ಗೆಲ್ಲಮೆಂದು ಮತ್ತಂ ಮತ್ತಂ ಕೋಲ್ಗಳ
ನೆಚ್ಚು ಎನಿಸು ದೂರಕಱೆಯುಟ್ಟಿದಂ. ಬೞಿಕ್ಕಮವರಾತಂಗಮಾತನೊಂದು
ತದೆಗಂ ಬೆಂಗೊಟ್ಟಂತುಮಿಂತುಮೋಡಿ ತಮ್ಮೊಡೆಯಂಗಿಂತಿದಂ ಪೇೞ್ವುದು
ಮಾತಂ ಮಾತಂ ಮಾಣಿಸಿ ಸುಮತಿಯೊಳಾತೀರ್ವನಂ ಅಂತಪ್ಪ ಬಾಲನೇ
ನಿರ್ಕುಂ? ನೀಂ ಕೇಳ್ದಂಟೆ, ಪೇೞೆನಲೊಡಂ—ಇಂತೀವಸಂ ಮುನಿಗಳಾ
ಶ್ರಮಮೆಂಬುದಂ ಬಲ್ಲೆಂ. ಬಾಲನಾಱೆಂಬುದನಱಿಯೆನೆಂದಂ. ಅದರ್ಕಾಶತ್ರು
ಹನಾರಾದೊಡೇನಾಯ್ತು, ಎತ್ತಿ ಪೋಪಮೆಂದು ಸೇನೆವೆರಸೈದಿವಂದು
ಕುದುರೆಯನಣ್ಣನೆಡೆಗುಯ್ವ ಲವನಂ ತಡೆದು ತಾಗಿದನಾಗಳ್. ಅನಿತಱಿಂ
ಮೇಲೆ ಮನೆಗೆಂದು ಪೋಪ ಲವಂ ಪಲವಂ ರಾವುತವಡೆಯುಂ ತೇರ
೧೦ ವಂಗಡಮುಂ ಕರಿಘಟೆಯುಂ ಕವಿತರ್ಪುದಂ ಕಂಡು ಮಾಣ್ದು ನಾರಿಯುಂ ಬಿಲ್ಗೆ
ಬಿಗಿದು ಬೆನ್ನ ಮೂಡಿಗೆಯಿಂ ಕೋಲನುಗಿದು ಸಂಧಿಸಿ ಬಂಧಿಸಿದ ಕುದು
ರೆಯ ಕೆಲನೊಳಿರ್ಪುದುಮಾತನೊಂದು ಬಿಂಕಮುಮಂ ಸೆರಗಂ ಪಾಱದ
ಬೀರಮುಮಂ ಕಂಡು ರಾಘವಾವರಜಂ ತಾನೆ ತೇರಂ ನೂಂಕಿ ಬಾಲಂಗಿದಿ
ರಾಗಿ—ಎಲೆ ಮಾಮಿಡಿಯ ತೋರದ ತೋಱದ ಪೆರ್ಕಳಿಕೆಯ ತರಳ! ಮೊಟ್ಟೆ
ಯೊಳೆ ಕೆಲೆವೊಂದದಟು ನಿನಗೆತ್ತಣಿನಾಯ್ತು ? ನೀನಾವಂ ? ಹಯಮ
ನೇನೆಂದು ಬಗೆದು ಕಟ್ಟಿದೆಯೊ ? ಕಟ್ಟಳವಿಯೇಂ ? ನಿನಗೆ ಸೊಗಸಾಯ್ತು !
ಬಿಡು ಬಿಡು ಮರುಳೆ! ಆಟದ ಕೂಟದ ನಿನ್ನನ್ನರೊಳ್ ಪೊಣರ್ವಂದಂ
ಕದನಮಲ್ಲೆಂದು ಗದಱಿ ಮರಲ್ಚುವೊಂದು ಬಗೆಯಿಂ ಹಯಕೆ ಸನಿಯುಂಬೋ
ಪುದುಂ ಲವಂ ಕಿಸುಗಣ್ಚಿ ಕಣೆಯನೆಚ್ಚು ಪಗೆಯುಂ ನೋಯಿಸಿ ಕಡೆಯೊಳ್—
೨೦ ಪ್ರಾಯುಂ ಕೂಸಾದೊಡೇನೀಸಾಯಕಂ ಕೂಸಕ್ಕುಮೆ ! ಜಗದೆ ನೀವೆ ಬಲ್ಪು
ಳ್ಳರ್ ! ಆಂ ನಡೆವೆತ್ತ ಸೀಪುರ್ಬಾಗೆವೆ ! ಅಲ್ಲದೊಡೇಂ ಪೆರ್ಕಳಿಕೆಯೊ ? ಆವೆ
ಜಗದ ಗಂಡರ ಗಂಡರ್. ಪೆಱರ್ ಪಂದೆಗೊಂದೆಗಳ್. ಹಯಂ ಬರ್ಪುದು
ಮೊಡನೆ ಮಱೆವಾೞ್ವುದು ! ಕಪ್ಪಮನೊಪ್ಪಿಸುವುದು ಗಡ ! ನಿರ್ಧನರಪ್ಪಿನಂ
ಮೊಗಸಿರ್ದ ಜನ್ನಕ್ಕೆ ಪಣಮಂ ಕುಡಿಮೆಂದು ಬೇಡಿದೊಡಾಗದೆ! ಲೇಸು
ಲೇಸು. ನಿಮ್ಮನ್ನರಪ್ಪ ನಾಡ ರಾಯರೊಂದಾಯತಿಯೆಂದು ಹಂಗಿಸಿ ನುಡಿದಂ.
ಆನುಡಿಗೆ ಶತ್ರುಘ್ನನಿನಿಸುಂ ಖತಿಗೊಂಡು ಮೇಣೊಂದಂಬಿನಿಸಲೊಡಂ
ಮಾರ್ಕೊಂಡು ಮುಱಿದು ತಾನೈದು ಕೂರ್ಗಣೆಗಳಿಂ ತೇರಂ ಬಿಲ್ಲ ನಾರಿಯುಂ
ತುಂಡಿಸಿ ಹೂಂಕರಿಸಿದಂ. ಮತ್ತಂ ಶತ್ರುಹಂ ಸವ್ಯಭವ್ಯರಥಮಂ ಪೊಸಬಿಲ್ಲಂ
ಕೊಂಡು ಬಾಲಕನಂ ಶರಂಗಳಿಂ ಮುಸುಂಕಿದಿಂಬೞಿಯುಂ ಕೋಲ್ಗಳುಱುಬೆಗೆ
೩೦ ಗಾಱುಗೆಟ್ಟು ಬಾಯಾಱಿ ಬನ್ನವಟ್ಟು ಮುಚ್ಚೆವೋದ ಲವನೊಂದು ಗಂಡು

ಗರ್ವಕ್ಕೆ ಮೆಚ್ಚಿ ಕೊಂಡಾಡಿ ಸ್ನೇಹಂ ಮಿಗೆ ತಾನೆ ತೋಳೊಳೆತ್ತಿ ತೇರೊ
ಳಿಟ್ಟು ಹಯಮಂ ಬರಿಸಿ ಪುರಕೆ ಪೋಗವೋಪುದುಂ; ಮಿಕ್ಕ ಮಕ್ಕ
ಳಿಂತಿದಂ ಕಂಡು ಬೆದಱಿ ಕಟ್ಟುಱಿದಿಂ ತಮ್ಮಾಶ್ರಮಕ್ಕೆ ಬಂದು ಬೆಟ್ಟುಸಿರಿಂ
ಇನಿವೊಟ್ತುಂ ಬಾರದೆ ನಿಂದ ಮಕ್ಕಳ ಬರವನೆ ಪಾರುತುಮಿರ್ಪ ಸೀತೆಯಂ
ಕಂಡು—ಅಬ್ಬೆ! ಪೋಪೋ! ಈಗಡೆ ಲವನಂ ಬಿಂಕದ ರಾಯರ ಕುದುರೆಯಂ
ಕೊಂಡನೆಂಬೊಂದು ಕತದಿಂ ಬೇಡವೇಡೆಂದೊಡಂ ಕೇಳದೆ ಪಗೆಗಳ್ ಪಿಡಿದು
ಯ್ದರಯ್ಯೋ! ಕುಶನಾವೆಡೆ! ಮತ್ತಯ್ಯನೇಂ ಬಾರನಿನ್ನುಂ! ಕೆಟ್ಟುದು
ಕಜ್ಜಂ. ನಡೆನಡೆ, ಪೋಪಂ ಪೋಪಂ, ತಳ್ವದಿರೆಂದು ತಾಮುಂ ಕೆಯ್ಯೊಳ್
ದಂಡಂಗೊಂಡು ಪೊಱಮಟ್ಟರ್.

ಎನ್ನೆಱತಿ! ಇಂತಾಡಿದ ಮಕ್ಕಳ ಮಾತಂ ಕೇಳ್ದು ಸೀತೆ ಮನಮಱುಗಿ— ೧೦
ಹಾ ಹಾ! ಎನ್ನ ಕಣ್ಮಣಿಯನಾರುಯ್ದರ್! ಎನ್ನ ಚಿಂತಾಮಣಿಯನಾರ್
ಪಿಡಿದರ್! ಎನ್ನ ಸಂಜೀವನಮನಾರ್ ಕೊಂಡರ್! ಎನ್ನರಗಿಳಿಯನಾರ್
ಕಂಡರಕ್ಕಟ! ಹಾ ಎನ್ನ ರನ್ನ! ಎನ್ನ ಚೆನ್ನ! ಹಾ! ಹಾ! ಎನ್ನ ಸುಕುಮಾರ!
ನೀನೇನಾದಯ್! ಎತ್ತವೋದಯ್ ಮಗನೇ? ನಿನಗೇತರ್ಕೆ ವಾಜಿ?
ಏತರ್ಕಾಜಿ ಪಗೆಗಳೊಳ್?

ಜಡಿವರೊ ಬಡಿವರೊ ಸೆಱೆವಿಡಿ |
ದಿಡುವರೊ ಮೇಣಲ್ಲದಂದು ಶೂಲದ ಮೊನೆಗೇ ||
ಱಿಡುವರೊ ಕಡಿವರೊ ಬಱಿದೇಂ |
ಬಿಡುವರೊ ಹಾ ಕಂದ! ನಿನ್ನನಱುಗುಲಿರಾಯರ್? ||

ಆಃ! ಅರಿಗಳ ಬಾಯ್ಗಿಂದೆ ಪೆತ್ತೆನೆ ಮಗನೇ? ಎಂತೊಡಲಂ ಪಿಡಿದಿ ೨೦
ರ್ಪೆನೊ? ಎಂತು ಸೈರಿಪೆನೊ?—ಎಂದು ಪಲುಂಬಿ ಪಳಯಿಸುತಿರ್ಪಾವೇಳೆ
ಗರಿಗಜಾಂಕುಶಂ ಕುಶಂ ಕುಶಸಮಿತ್ಫಲಪುಷ್ಪಂಗಳಂ ಪೊತ್ತು ತೊಟ್ಟನೆ
ಬಂದು ಪೊಱೆಯನಿಟಿಪಿ ಮಱುಗುವ ಮಾತೆಯ ಪೊರೆಯೊಳ್ ನಿಂದು—
ಎನ್ನಬ್ಬೆ! ಇಂತೇನಟಲಾರಿನಾಯ್ತು? ನಿನಗೇಂ ಜಡಂ! ಪಟವಾನಿಸರಾತವಸಿ
ಗಳೇಂ ಕೊಱಚಾಡಿದರೆ? ನೆರೆವನೆಯ ಕಿಱಿಯಬ್ಬೆ ನಿನ್ನಂ ಜೆನ್ನೊಳೇಟಿಸಿದಳೆ!
ಈಗಾಳುಮೂಳಬಾಳರೆತ್ತಾನುಂ ಭಂಗಿಸಿದರೆ? ಏಕೆ ಮಱುಗುವೌ? ಎನ್ನಂ
ನೋಡು, ಮಾತಾಡು—ಎಂದೆನಸುಂ ಪತ್ತೆಸಾರ್ದು ಕೊರಲನಮರ್ದಪ್ಪಿಯುಂ
ಗಲ್ಲಮನಲುಗಿಯುಂ ಒಱೆವ ಕಂಬನಿಯಂ ತೊಡೆದುಂ ನುಡಿಯಿಸುವ ಬಾಲಕಂಗೆ
ಮಱುನುಡಿಗುಡಲಾಱದಂದು ಬಟಿಯ ಮಕ್ಕಳ್—ಪಗೆರಾಯರ ಜನ್ನಗುದು

ರೆಯಂ ಬಂದಿವಿಡಿದುದಂ ಮೇಣ್ ಕಾದಿ ಸೆಱೆವೋದುದಂ ಕುಶಂಗೆ ಕೇಳಿಸಿ
ದರ್. ಇಂತೆಂಬ ವಟುಗಳಂ ಗದಱಿಬೆದಱಿ ಪೋಪಂತು ಮಾಡಿ ತಾಯಂ—
ಎನ್ನಾಣೆ! ಮಱುಗದಿರೌ. ಜವನಕ್ಕೆ; ಉರಿಗಣ್ಣ ಭವನಕ್ಕೆ; ಬೆಟ್ಟಿನ ತಿಟ್ಟಿನ
ಮಾಧವನಕ್ಕೆ; ಎಮ್ಮ ಲವನಂ ಕೊಂಡುಯ್ದವನಂ ಸೊರ್ಕು ಸೆರ್ಕಪ್ಪಿನೆಗಂ
ಬಡಿದು ಪಿಡಿದಸುವೆರಸು ನಿನ್ನಡಿಗೊಪ್ಪಿಸದಿರೆ, ನಿನ್ನ ಮುದ್ದಿನ ಕಂದನೆ!
ನೋಡೆನ್ನದಟನೆಂದು ಪೂಣ್ದು ಮಾತೆಯಂ ಸೈತಿಟ್ಟು, ಮುನ್ನಂ ಮುನಿ ತನಗಿತ್ತ
ಸವಗಮಂ ಸೀಸಕಮಂ ಕಣೆಯಂ ದೊಣೆಯಂ ಬಿಲ್ಲನೆಲ್ಲಮಂ ಕೊಂಡು ತಾಯ್ಗೆ
ಪೊಡೆಮಟ್ಟು ಪರಕೆಗೊಂಡಂದಿನಱುವೊಗನೊಂದು ಪನ್ನತಿಕೆಯಿಂ ಬೆಂಬತ್ತಿ
ನಡೆದು ತಡೆದರಿಸೇನೆಯನಿದಿರ್ಚಿ—ಎಲೆಲೆ ಬಣಗುಗಳಿರಾ! ರಣದೆ ಮೈಸೋ
೧೦ ಲದ ಸಾಲದ ಬಾಲನೊರ್ವನಂ ಬಳ್ಳುಪಿಳ್ಳೆಯನೆಂತಂತು ಕೊಂಡುಯ್ವುದಿದಾವ
ನಾಯಂ? ಸೆಣಸಾಳ್ಗಳ್ ನಿಮ್ಮಂ ಗೆಲ್ಲವೇಣ್ಣೆಂತೊಲ್ವಳ್! ಬಲ್ಲುಳ್ಳೊಡೆ
ನ್ನೊಳ್ ತೋಱಿಮೆಂದು ತನಿವೆಳಗಿನ ಪೊಸಮುಸೆಯಲಗಂ ತೆಗೆದೆಚ್ಚು
ಜೂಣಿಯಂ ಘಾತಿಸಿದಿಂಬಟಿಯಂ ದೆಸೆಗೆಟ್ಟ ತಮ್ಮ ದಟಮಂ ಕೈವೀಸಿ
ಸೈತಿಟ್ಟು ಪುಷ್ಕಲಂ ಬಂದ ಬವರಿಗಂಗೆ ಮಾಱಾಂತು—

ಎಲೆ ತರಳ! ನಿನ್ನ ಜಿಂಕದ|
ನೆಲೆಯೇಂ? ಕಟ್ಟುಱದ ಒಱದ ಬಾಯಾಯ್ತುರಿಯಂ ||
ಗೆಲಲಾರ್ಪೊಡೆ ಪೋರ್ಪೊಡೆ ಮೆ|
ಯ್ಗಲಿಗಳ್ ನಾಣಿಲಿಗಳಂತು ಜಂಕಿಪರೊಳರೇ? ||

ಸೆಱೆವಿಡಿದುಯ್ವೊಡಾಗದು ಗಡ! ಗಂಡರ ಗುಂಡವರ್ಗಕ್ಕೆ ತಗದು ಗಡ!
೨೦ ನಾಯಂ ನಾಯಂ ಕೇಳ್ವರೆ? ಅಲ್ಲದಂದಾಬಡತರುವಲಿಗೇಕೊ ನಾಡ ಮನ್ನೆಯರ
ಜನ್ನಗುದುರೆಯೊಂದು ಗೊಡವೆ! ಕಾದುವ ಬೆಸನಂ! ನೀನವಂಗೆ ಸೋದರ
ನಕ್ಕುಮದಱಿಂ ಕಡುಕೆಯ್ದೊಡೆ ನಿನ್ನುಮಂ ಸೆಱೆಗೊಂಡು ಕೊಂಡು ಪಿಂಡ
ಮರ್ದಸಂ ಮಾಡದೆ ಜಿಡುವೆನೆ, ನೋಡೆಂದು ಪೊಂಗಱಿಯ ಕೂರಂಬುಗಳ
ನಾರ್ದೆಚ್ಚಂ. ಅಂತಿರೆ ಗುಱಿಗೊಂಡು ಬರ್ಪ ಬಾಣಮಂ ಕಾಣದಂತು
ಕಡಿದು ಪಡಿಸರಲಿನೇಸಾಡಿ ಕೂಸಾಡಿದ ನುಡಿಗಿಂತಿದೇಂ ಮುನಿಸು!
ನೀಂ ಮಾಸ್ಯರ್ ಹೂಸ್ಯರ್; ಆಮಸ್ಯರ್ ವಸ್ಯರ್ ಸಾಜಮಾಗವೆ! ನೋಡ್ಪೊಡೆ
ನಿಮ್ಮ ಗಂಡುಗಲಿತನಕಂ ಮಸಕವೊಪ್ಪಿರೆ ಮುಚ್ಚೆಯಿಂ ಪಚ್ಚೆವೋದ
ಕಿಱುದಮ್ಮನಂ ಬಂದಿಗೊಂಡಿರಕ್ಕುಂ. ಈಗಳೆನ್ನಂ ಮುನ್ನಂ ಜನ್ನಂಬಡದನ್ನಂ
ಬಾಬ್ದಲೆವಿಡಿಯಿಂ. ಅಲ್ಲದೊಡಿಂತು ಆಃ! ಕಾಡ ಮಱೆಯ ಕಿಱುವಱಿಯನಟ್ಟಿ

ಪಿಡಿವ ನಾಡ ನಾಯ್ಗಳೆಂತಂತೆನ್ನಣುಗದಮ್ಮನಂ ಪಿಡಿದೆವು ಜಡಿದೆವೆಂದೊ
ಡೊಂದು ಪನ್ನತಿಕೆಯೇ! ಈಗಳೆ ನಿಮ್ಮ ಸುಗಿದುಂ ಬಗಿದುಂ ದೆಸೆವಲಿಗುಡುತು
ಮೆನ್ನ ಚೆನ್ನ ತಮ್ಮನಂ ಕೊಳ್ವೆನೆಂದು ನೋಯಿಸಿದಂ. ಇಂತಿರೆ ಪುಷ್ಕಲಂ
ಶರಹತಿಗೆ ಗಾಱುಗೆಟ್ಟು ಬಾಯಾಱಿ ಕೀಱಿ ನೆಲಕುರುಳ್ದು ಇನಿವೊಟ್ತುಂ ತೆಪ್ಪ
ಱದಿರೆ ಕಂಡು ಲವಣಾಂತಕನಂತಕನಂತೆ ಕನಲ್ದು ತೇರನೇಱಿ ಬಂದು ಕಟ್ಟಿದಿರ
ಪೂಣಿಗನಂ ಕಂಡು—ಅಬ್ಬಾ! ಕಂಡಿರೆ ಮಱುಗೊಣಸು ಪಲ್ಲಿಮಱಿಯುಂ
ಕೊಣಕಿ ಕೆಣಕುವೊಂದಚ್ಚರಿಯುಂ: ನೀರೊಳ್ಳೆ ಪುತ್ತಿನಪಾವಂ ನುಂಗಲಾಟಿ
ಪೊಂದಂದಮಂ. ಕಾಲ ತುಟಿತಕ್ಕೆ ಪೊಗೆವ ಸಂಜೆನುರಿಜಾಲೆಯ ಸುಯ್ಗೆ ಜಜ್ಜರಿ
ಯಾಗಿ ಸೀಕರಿವೋಪುದಂ ಲೆಕ್ಕಿಸದಿರ್ಕೆವೆಂದು ಬೆಂಗೆ ಬೆಂಗೈದಂಬುಗಳ
ನೆಚ್ಚೊಡಾಸರಲ್ ಕೂಟದ ಕಾದಲರನೆಚ್ಚೊಡಲಿಚನ ಪೂಸರಲವೊಲಾಯ್ತು ೧೦
ಸರಲಂ. ಆಗಳ್ಗೆ ಕುಶಂ ಪಗೆಯ ಕಣೆಯುಂ ಸದೆದು ಮೇಣೆರಡಱಿಂ ಕರದ
ಕೋಯುಂಡಮಂ ಮುಱಿದಂ. ಇಂತು ಬಿಲ್ ಬೆಸೆಯಾಗೆ ಕಂಡು ಶತ್ರುಹಂ
ಪೆಱತೊಂದು ಬಿಲ್ಲಂ ಕೊಂಡು ಕಣೆಯುಂ ಪೂಡಿ—ಎಲೆಲೆ ಮಟ್ಟುಮೀಱಿದ
ಮಾಯದ ಬಾಲಕ! ನೀಂ ದಿಟ್ಟಂ. ದಿಟ್ಟಮಾದೊಡೆನ್ನೀಕಟ್ಟಿಸುಗೆಯ ಕೋಲಂ
ಮುಟ್ಟಿ ಮುಱಿವುದೆಂದು ಕಿವಿಮುಟ್ಟೆ ಸೆಳೆದಿಟ್ಟಂ. ಅನಿತಱೊಳೆ ಕುಶಂ
ತನಿಗಿಡಿಯುಂ ಕಾಱುವರ್ಪ ತೋರಗಣೆಯುಂ ನಡುವಟ್ಟೆಯೊಳೆ ಪಡಿಗೋಲಿಂ
ಬಡಿಗೋಲಿಂ ಕರಡಮಂ ಸದೆವಂತೆ ಸದೆದು ಮತ್ತಮಾಱಱಿಂ ಕೈಯ ಪೊಸಬಿಲ್ಲಂ
ಮೆಯ್ಯ ಸವಗಮುಂ ತುಂಡಿಸಿ, ತೇರಂ ವಾರುವಮುಂ ಕಡಿದು, ರಥಿಯುಂ
ಸಾರಥಿಯುಂ ಸಮಂತು ಗಾಱುಗಿಡಿಸಿದಂ. ಅಂತಪ್ಪುದುಮಿಳೆಗಿಟಿತಂದು
ಗದೆಗೊಂಡು ಪೊಯ್ಯಲೊಡಂ ಕುಶನೆಂತುಂ ಮಯ್ಮುದುಡಿ ಪುಟನೆಗೆದು ೨೦
ತನ್ನೊಂದು ಕಣೆಯಿಂ ಶತ್ರುಹನನಿಱಿದಂ. ಆಗಳೇನೆಂಬೆನೊ! ಬೆಟ್ಟಿನ
ನಡುಮುರಂ ಬಿಱುಗಾಳಿಯ ಪೊಯ್ಲಿಂಗೆ ಬೇರುಡಿದು ಬೀಟ್ವಂತೆ ದಿಮ್ಮನೆ
ಗದೆವೆರಸು ತಿರೆಗೆ ಕೆಡೆದಂ. ಮೊಱೆಯಿಟ್ಟುದು ಸೇನೆ; ಮುಂದುಗೆಟ್ಟುದು
ಯೋಧರೊಂದು ನೆರವಿ; ಗಜಬಜಿಸಿದರ್ ಮಹಾರಥರ್. ಇಂತಾಗಲೊಡ
ಮೆತ್ತಂ ಸುಭುಜಂ ಲಕ್ಷ್ಮೀನಿಧಿ ಮುಂತಪ್ಪ ವೀರರುಂ ಸುಗ್ರೀವಸುಷೇಣ
ರಾದಿಯಪ್ಪ ಮರ್ಕಟನಾಯಕರುಮಿರ್ತಂಡದಿಂ ಮುಂಡಳಿಸಿ ಕಾದುವುದು
ಮೊರ್ವನೆ ಬಾಲನನಿಬರಂ ಮಱುಸಿಂಗನಾನೆವಿಂಡನೆಂತಂತು ಮಾಮಸಕದಿಂ
ದೆಸೆಗಿಡಿಸಿದಂ. ಕೆಲರಂ ಕಡಿದಂ; ಕೆಲರಂ ಬಡಿದಂ; ಕೆಲರಸುಗಿದಂ; ಕೆಲರಂ
ಬಗಿದಂ; ಕೆಲರಂ ಕುಱಿದಱಿದಱಿದಂ; ಕೆಲರಂ ಬಿಗಿದಂ; ಕೆಲರನಿಟ್ಟಂ; ಕೆಲರಂ
ಬಿಟ್ಟಂ ಮೊನೆಯೊಳ್. ೩೦

ಇಂತು ಸಂಗ್ರಾಮಕೋಲಾಹಲಂ ವಿರೋಧಿವರೂಥಿನಿಯಂ ಸದೆಬಡಿದು ಕಾಲದ ರಂಗತ್ರಿಣೇತ್ರನಂತೆ ಮೆಱೆಯುತಿರ್ಪುದುಮಾವೇಳೆಗೆ ಮುಚ್ಛೆವೋದ ಲವನಂ ಕಿಱಿದುಂ ಬೇಗಮೆಚ್ಚತ್ತು ತನ್ನ ಬಂದಿಗೆ ಬೆಱಗುವಟ್ಟೆತ್ತಂ ನಿಟ್ಟಿಸಿ ಪಗೆಯೊಡ್ಡು ಬಕ್ಕಂ ಬಯಲಾದುದಂ ನೀಡುಮೆಣಿಸಿ ಮುಂದೆಸೆಯೊಳಟಿದುಟಿದ ಜೋದರೊಳ್ ಪೊಣರ್ವಗ್ರಜಾತನಂ ಕಂಡು ತಾನುಂ ಕೈದುಗೊಂಡಾತನಂ ಕಿಚ್ಚಂ ಗಾಳಿಯೆಂತಂತು ಕೂಡಿದಂ. ಹತಶೇಷರೊಳಮೀಗಳ್ ಪಲಂಬರ್ ಗತಾಸುಗಳಪ್ಪುದಂ ಕಂಡು ಕಂಡಗತಾಸುಗಳೆಂತುಂ ರಣಕೆ ಬೆಂಗೊಟ್ಟೋಡಿ ಕಟ್ಟುಱದಿಂ ಪೊೞಲ್ಗೆ ಬಂದು ರಾಘವಂಗೀವಿವರನುಸಱಕೆಗೆಯ್ವುದುಂ; ತನ್ನವರ ಪರಿಭವಕ್ಕೆ ಮನಮುಱುಗಿಯುಂ ಪಗೆದ ಮಕ್ಕಳಿರ್ವರ ಏಳ್ಗೆವೆತ್ತ ಬಲ್ಪಿಂಗೆ ಬೆಱಗಾಗಿಯುಂ ದೀಕ್ಷೆಯೊಳಿರ್ದ ರಾಘವನನುಜಂಬೆರಸು ತಾನೆ ಪೊಱಮಟ್ಟಂ. ಇಂತು ಕಡುವೇಗದಿಂ ಪಡೆಗೂಡಿ ನಡೆದು ಕಾಡನೆತ್ತಂ ಕವಿದೊತ್ತಿ ರಾಮಲಕ್ಷ್ಮಣರೋರೊಂದು ದೆಸೆಯೊಳಿರ್ದು ದಟವನೊಡ್ಡಿ ಮಕ್ಕಳಂ ಪಿಡಿಯೆ ಬರ್ಪುದುಮಾವೊಡ್ಡು ಗಾಳಿಯೊಡ್ಡಿನ ಮುಗಿಲೊಡ್ಡಾಯ್ತು ಬಾಲಕರಿದಿರೊಳ್. ಇಂತೊಂದು ಮಾಡ್ಕೆಯಿಂ ಸುರಿಗೆಯ, ಜವದಾಡೆಯ, ಕಕ್ಕಡೆಯ, ಮುಸುಂಡಿಯ, ಕಡಿಗತ್ತಿಯ, ಕೊಡಲಿಯ, ಇಟ್ಟಿಯ, ಬಟ್ಟಕೈದಿನ, ಕೈದುಕಾಱರ ದಟಂ ತಂತಮಗೆ ದಟವ್ರಱದಿಂ ಕುಶಲವರಿಸುಗೆಯಿಂ ಸತ್ತುಂ ಮುತ್ತುಂ ಕಟಿದುಮಟಿದುಂ ಪೋಪುದುಂ ಅಟಿದುಟಿದ ದಂಡಂ ತಂಡತಂಡದಿಂ ಪಿಂಡನಾಗಿಸಿ ಚಂಡಭಂಡನಕ್ಕೆ ನೂಂಕಿ ತಾಮಿರ್ವರುಂ ತೇರನೇಱ ಬರ್ಪ ಗಂಡುಗಲಿಗಳಂ ಕಂಡು ಗಂಡಗರ್ವದಿಂ ಲವನಗ್ರಜಂಗೆ—ಕಂಡಿರೆ ಅಣ್ಣ! ಮೊನೆಯೊಳಾಗಳೆ ಮಿಱುತ್ತುಗೆ ತುತ್ತಾದ ತಮ್ಮವರ ಬೆಂಬಲಕೆಂದು ಬಂದ ಬಲ್ಲಿದರಿರ್ವರುಂ ಬೇಱೆವೇಱಾಗಿ ರಥಮನಡರ್ದು ಎಮಗೆ ಮುಮ್ಮೊಗವಾಗಿ ಟೀವಿಯಿಂ ಬರ್ಕುಂ. ಈಗಳೆಮಗೆ ಸಮರಂ ಸಾಟಿಯಾಯ್ತು. ಕಾಡ ದೆವ್ವಂಗಳ್ಗೆ ಬಲಿಯೀವಂ. ಕಿಱಿಯನೊರ್ವನೆನಗೆ; ಪಿರಿಯಂ ನಿಮಗೆ. ಮಿಕ್ಕಿನ ಪಡಿಬಲಮೆನ್ನ ನಿಮ್ಮ ಕೋಲ್ಗೆಂದು ಪಸುಗೆಗೆಯ್ದು ಮುಂದೊತ್ತಿ ಬರ್ಪ ರಾಮಲಕ್ಷ್ಮಣರ್ಗೆ ಕಟ್ಟಿದಿರಾಗಿ ನಡೆದರ್.

ಇಂತು ಸಂಕೆಯಿಲ್ಲದೆ ಬಿಂಕದಿಂ ಮುಟ್ಟಿವರ್ಪ ಮಕ್ಕಳ ಬಲಕಂ ಚಲಕಂ ನಿಬ್ಬೆಱಗಾಗಿ ರಾಘವಂ ಲಕ್ಷ್ಮಣಂಗೆ—ಎಲೆ ತಮ್ಮ! ನಾಡೊಡೆಯರ ಮಕ್ಕಳ್ಗಮೀವಗೆಯ ಪೆಂಪುಂ ಕಂಪುಂ ನೋೞ್ಪೊಡರಿದು ಗಡಾ! ಪಾಡುಗೆಟ್ಟ ಕಾಡ ತರುವಲಿಗಳ್ಗಿಂತುಟೊಂದು ಬೀರಮೆತ್ತಣ್ತು! ಇವರೊಳೆನಗೇನೊ

ಮನುತೆ ಪುಟ್ಟುಗುಂ; ಮುನಿಸು ಬಾರದು. ಆರೆಂಬುದನಾರಯ್ದು ಪೇೞಿಯ್,
—ಎಂಬುದುಂ ಲಕ್ಷ್ಮಣಂ ತೇರನಣೆದು ಸೂಂಕಿ ಬಿಲ್ಲ ಕೊಪ್ಪಿಂಗೆ ನಾರಿಯು
ನಳವಡಿಸುತೆ ಕೋಲಂ ಸಂಧಿಸುತೆ ಸುರ್ಗಿವರ್ಪ ಬಾಲರಂ ತಡೆದು—ಎಲೆ
ಮಕ್ಕಳಿರ! ನೀವಾರ್? ಹಯಮಂ ಕಟ್ಟಿದಿರೇಕೆ? ಎಮ್ಮವರನಿದಿರ್ಚಿದಿ
ರೇಕೆ? ಪೋಪಿರೆಲ್ಲಿಗೆ? ತಡೆಂಬಿವೆಂದು ಬಿಲ್ಲನೇಱಿಸಿದಂ. ಆಗಳ್ಗೆ ಲವಂ—
ಎಲೆಲೆ, ಕಟ್ಟೊತ್ತಾಯದ ರಾಯ! ಮೊನೆಗೊಡ್ಡಿ ಬಂದು ನೀವಾರೆಂದು
ಬೆಸಗೊಳ್ವುದಿದಾವ ನಡತೆ? ಸಲ್ವೊಡೆ ಕಾದು, ಮೋದು. ಆಱೆಯುವ್ಪೊಡೆ
ಪಲಾಯನಮನೊಂದು. ಆದೊಡಂ ನೀಂ ಕೇಳ್ವಸಂ ಪೇೞ್ವಂ. ಎಮ್ಮ ಸಬ್ಬೆ
ಪೆತ್ತಳಜ್ಜಂ ಸಾಕಿದಂ. ಚಲದಿಂ ನಿಮ್ಮ ಹಯಮಂ ಕಟ್ಟಿದೆವು; ಇದಿರ್ಚಿ
ದೊಡಿದಿರ್ಚಿದೆವು. ಮೀಸಲಿರ್ಪ ನಿಮ್ಮ ಜೋದರ ಸಮ್ಮುಖಕ್ಕೆ ಪೋಪೆವು. ೧೦
ತಡೆದೊಡೆ ತಡೆವೆವೆಂದು, ಕಟ್ಟಿ ನುಡಿವುದುಂ; ಲಕ್ಷ್ಮಣಂ—ಕೊರ್ವಿನ
ಕೊಂಕುನುಡಿಗಿದು ಪೊಟ್ಟಲ್ತು. ನೀಮೆಳೆಯರ್. ಗೆಲ್ದು ಗೆಲ್ಲಂ ಸೋಲ್ತು
ಸೋಲಂ ಬೀರರ್ಗೆಮಗೆ ಬಾರದು. ಸವಿನುಡಿಯುಂ ಲಾಲಿಸಿ ಕೊಳುಗುಳಮಂ
ಹಯಮುಂ ಕಡುಚಲಮುಂ ಬಿಟ್ಟು ಪೋಗಿಂ. ಈನುಡಿ ನಿಮಗೆ ಸೊಗಸಾಗದೆ
ಪೋಗೆ ನಿಮ್ಮೊಡಲುಮಂ ಬಿಟ್ಟು ಪೋಪಿರ್. ಇದು ನಿಕ್ಕುವಂ—ಎಂದು ಮೂಡಿ
ಗೆಯಿಂ ಕಣೆಯನೆತ್ತಿ ಬಿಲ್ಗೆ ಪೂಡಿದಂ. ಅದಕರ್ಗಲವಂ ಲವಂ ಬೆರ್ಚದೆ—
ಎಲೆ! ಕೊಱಚಾಡುವೆಯೇಂ? ಆಮೆಳಯರಾದೊಡೇಂ ಕೋಲ್ಗೊಂದೆಳವೆ
ಯುಂಟೆ? ಪಂದಿಯಂತುಂ ಗೊಂದೆಯಂತುಂ ಸೊರ್ಕಿ ಕೊರ್ವಿ ಬಳೆ
ದೊಡಾಯ್ತೆ! ಮಱಿಸಿಂಗನಂತು ಕಡುಪುಂ ಬಲ್ಪುಮಿರವೇಡ! ಪೋ!
ಕೂಸಾಗಿಯುಮುಂದು ಪದ್ಮನಂ ಕೊಂದ ನಂದ ಗುಹನಳವಿ ಗಹನಮಾಗದೇಂ ೨೦
ಮನಕೆ?—ಎಂದು ಸಡಗರಿಸಿ ಕಣೆಯೆರಡಱಿಂ ಲಕ್ಷ್ಮಣನ ಧನುವಂ ಮುಱಿದಂ.
ಅನಿತಱೊಳೆ ಮಗುೞ್ದೊಂದು ಬಿಲ್ಲಂ ಕೊಂಡು ಕಿನಿಸಿಂ ಮೆಯ್ವೆರ್ಚಿ ಕೋಲ್ಗಳ
ನುರ್ಚಿ ಬಾಲಕಂಗಿಸುವುದುಮಂತವರಂ ನಿಲ್ಲದೆ ನುಚ್ಚುನುಱಿಮಾಡಿದಂ. ಎನಿ
ತ್ತೆನಿತ್ತುಂ ಲಕ್ಷ್ಮಣನಿಸುವನನಿತ್ತನಿತ್ತುಂ ಕೊಚ್ಚುಡಱಿವಂ ಲವಂ. ಇಂತು
ಪಿರಿದುಂಬೊಟ್ಟು ಸೆಣಸುತಿರಲೊಡಮತ್ತಲ್ ಮೇಣೊಂದು ದೆಸೆಯೊಳ್
ಸೂಟಿಯಿಂ ಪೋಪ ಕುಶನಂ ತಡೆದು ರಾಘವಂ—ಎಲೆ ಪಸುಳೆ! ನೀನಾವಂ?
ಹಯಮನೇನೆಂದು ಕಟ್ಟಿದಯ್? ಎನ್ನಾಣೆ! ನಿನ್ನೊಳೆನಗಕ್ಕಱುಂಟು. ನೀಂ
ಗೆಯ್ದ ದುಱುದುಂಬಿತನಮಂ ಪೊಲ್ಲದ ಕಜ್ಜಮಂ ಮಱೆತೆಂ. ಇದಕೊಳ್
ನಿನ್ನಂ ಕಾವೆಂ. ನಿನಗಿನಿತ್ತು ಬಲ್ಪೆಂತುಟಾಯ್ತು? ಬಿಲ್ಲೋಜನಾವಂ?
ಪುಟ್ಟಿದಿರೆಲ್ಲಿ? ಪೇೞೆಂಬುದುಂ; ಕುಶಂ—ಕೇಳೆಲೆ ರಾಯ! ನಿನ್ನ ಹಯಮಂ ೩೦

ಗಿಯುಮಂ ನಾಂ ಕಟ್ಟಿದೆನಿಲ್ಲ. ಕಿಱಿಯನಱಿಯದೆ ಕಟ್ಟಿದನಕ್ಕುಂ. ಮೇಣೆ
ಮ್ಮೊಳಾವುದುಂ ದುಱುದುಂಬಿತನಂ ಬಾರದು. ನಿಮ್ಮವರಾತನಂ ಬಱಿದೆ
ನೋಯಿಸಲೊಡಮೆನಗೆ ನಿಮ್ಮೊಳ್ ಮುನಿಸಾಯ್ತು. ಈಗಳ್ ನಿಮ್ಮನಿದಿರ್ಚ
ಮೊಡಾದೆಂ. ಎಮಗಜ್ಜಂ ಬಿಲ್ಲೋಜಂ. ಕಾಡೊಳೆ ಪುಟ್ಟಿದೆವು. ಅಬ್ಬೆಯ
ಪರಕೆ, ಮುತ್ತಯ್ಯನ ಕಾಪು, ಕೆಳೆಯರ ಸಲ್ಮೆ, ಪಿರಿಯರೊಲ್ಮೆ, ಎಮಗೀವಗೆಯ
ಬಲ್ಪನೊಡರ್ಚಿದತ್ತು—ಎಂದಾಡಿದಂ. ಆನುಡಿಗೆ ರಾಘವಂ ತಲೆದೂಗಿ—
ಕಿಱುಗೂಸುಗಳ್ ನಿಮಗೆಮಗೆ ಜುದ್ಧಮಕ್ಕುಮೆ? ಬಱಿದೆ ಕಾದಿ ಬೞಲದಿರಿಂ.
ಕೊಂಡ ಹಯಮಂ ಬಿಟ್ಟು ಸಂತಂ ಪೋಗಿಂ ಪೋಗಿಮೆಂದುಸಿರ್ದಿಂಬೞಿಯಂ
ಕುಶಂ ನಿನ್ನೀಕೊರ್ವಿನ ನುಡಿಯಂತಿರ್ಕೆ! ಕಟ್ಟಿದ ಹಯಮಂ ಕೊಟ್ಟು ಬಾೞ್ವ
೧೦ ಮಾತುಂಟೆ? ಅಬ್ಬೆ ಱೋಡಿಸಳೆ? ಅಜ್ಜಂ ಪೞಿಯನೆ? ಕೆಳೆಯರೇಡಿಸರೆ?
ಚಲಕಂ ತೋಳ್ವಲಕಂ ಕುಂದಾಗದೆ? ಎನ್ನ ಮೇಣೆನ್ನ ಪೊನ್ನ ಪಿಳುಕಿನ
ಕೋಲ ಬಾಲಿಶಮಂ ನೋಡೆಂದು ಜಡಿದು ನುಡಿದೊಡನಯ್ಯನಂ ಪಿಡಿದು
ಬಡಿವ ಕಲಿಯುಗದೞಿಮಾಳ್ಕೆಯ ಕೂಟ ಮಕ್ಕಳೊಂದು ಮಾಳ್ಕೆಯಿಂದಾರ್ದು
ಪೊಯ್ದಂ.

ಆಃ! ಏತಱೊಂದು ಬಿದಿಯ ಬದಗಾಟಮೊ? ತನಗಯ್ಯನೆಂದಱಿದನಪ್ಪೊಡೆ
ಕುಶಂ ವಿಶಿಖಮನಿಸುವನೆ? ಪೊಣರ್ವನೆ? ಬಯ್ವನೆ? ಪೊಯ್ವನೆ? ತಂದೆ
ಮಕ್ಕಳೊಂದು ಪುರುಡಿಗಿದುವೆ ಮೊದಲಾಯ್ತೇ! ಅನಿತಱೊಳೆ ರಾಘವಂ
ಕೂರ್ಗಣೆಯಂ ಮಾರ್ಗಣೆಯಿಂ ತುಂಡಿಸಲೊಡಂ ತರಳಂ ಮೇಣೊಂದು
ಮಾರ್ಗಣಮಂ ಸೆಳೆದಿಟ್ಟಂ. ಮತ್ತಮೊಂದಂ ಮಗುಳ್ದುಮೊಂದಂ ಪೆಱ
೨೦ ತೊಂದಂ ಬೇಱೊಂದಂ. ಇಂತು ರಾಘವನೊಡಲನಿಸುಗೆಯಿಂ ತಳಿರ್ಸುಗೆ
ಯಂ ಗೆಯ್ವುದುಮೆನಸುಂ ಕೋಪದಿಂ ಚಾಪಮಂ ತುಡುಕಿ ಸಂದ
ಬಾಣಮಂ ಸಂಧಿಸುವುದುಮಾಬಾಣಂ ಮಾಣದೆಯ್ದಿ ಗುಱಿಗೆಟ್ಟು ಬಂದತ್ತು.
ಏನೊಂದಚ್ಚರಿಯೊ! ದಿವಿಜದನುಜಮನುಜರೊಳಂ ಮೊನೆಯೊಳಳ್ಕದ ಬಳ್ಕದತಿ
ಕಾಯನಂ ಹತಕಾಯನಂ ಗೆಯ್ದಂಗೆ ತನ್ನೊಂದಪ್ಕೆಯಿಂ ಬರ್ದಿಲಮಂ
ತಳಮುಳಂಗೆಯ್ದಂ ಬಿಡುಗಣ್ಣರೊಡೆಯನ ಪಡೆಯಂ ದೆಸೆಗಿಡಿದುಬ್ಬರದಬ್ಬರ
ದಿಂದ್ರಾರಿಯಂ ಮಾರಿಯ ಬಾಱಿಗನಂ ಮಾಡಿದಂಗೆ ಲಕ್ಷ್ಮಣಂಗ ಕೊರೆವ
ಸಬುದಮಂ ಸಿಂಗದ ಗರ್ಜನೆಗೆತ್ತು ಗಜಂಗಳಱೆ ಸುಯ್ವ ಸುಯ್ಲ ಸುೞಿಗೆ
ನೆಲೆಗೆಟ್ಟು ಮುಱುಮುಱಿಯಾಗಿ ಸಿಡುಗಂಬಂಗಳ್ ತೇಂಕೆ ತಿರೆಯೊಳಂದೊ
ಱಗಿದ ಬಿಂಜವೆಟ್ಟಿನೆ ಬೆಟ್ಟನೊಱಗಿದ ಕುಂಭಕರ್ಣನೊರ್ಮೆಯುಂ ಮೈಮಱೆ
೩೦ ದೆೞ್ದಗ್ರಜನ ಪರಿಭವಕ್ಕೊಳಱೆ ಕಡೆಗಾಲದ ಬಿಗುರ್ವರಿಜನೊಂದಾಟೋಪದಿಂ

ವೊನೆಯೊಳಿದಿರ್ಚಿದೊಡವನಂ ಜವನಂದಿಗನನಾಗಿಸಿದ ರಕ್ಕಸದಲ್ಲಣಂಗೆ ಈರೇೞುಂ ಲೋಕಮಂ ಗೆಲ್ಲಂಗೊಂಡು ಭುಲ್ಲವಿಸಿ ಬಲ್ಲಿದನೆಂಬ ಗಂಡಗರ್ವದಿಂ ಪೊಣರ್ವ ದಶಾನನನೊಡಲಂ ಕಡಲ ಮೀಂಗಳ್ಗೆರೆಯನಾಗಿಸಿ ಮೆಱೆದಾಹವಮಲ್ಲ ರಾಮಂಗಿಂದು ಚಿಣ್ಣರಾಟದ ಕೂಟದ ಪಸುಳೆಗಳತ್ತಣಿಂ ಸೋಲಂ ಗಡ! ಲಕ್ಷ್ಮಣನಸಿ ದಸಿಯಾಯ್ತು ಗಡ! ರಾಮಬಾಣಕ್ಕೆ ಮಣಿಯರ್ ಗಡ!

ಎನ್ನ ಕಣ್ಣೇ! ಪೆಣ್ಣೇ! ಇಂತು ಕುಶಲವರ್ ಬಾಂಬಟ್ಟೆಗರೊಟ್ಟಯಿಸಿ ಸೆರೆದು ಬೆಱಗುವಡುವಿನಂ ರಾಮಲಕ್ಷ್ಮಣರೊಳ್ ಕಡುಕೆಯ್ಯುತಿರಲೊಡಮೂವೇಳೆಗತ್ತಲ್ ವರುಣಲೋಕಕ್ಕೆ ಪೋದ ವಾಲ್ಮೀಕಿ ಬಾಲಕರಿರವಂ ನಾರದನತ್ತಣಿನಱಿದು ಮಾಣದೆ ತನ್ನಾಶ್ರಮಕ್ಕೆ ಬರೆ ಅಲ್ಲಿ ಮಕ್ಕಳ ಬಟ್ಟೆಯನೆ ನಿಟ್ಟಿಸುತೆ ಹಂಬಲಿಸಿ ಬೆಬ್ಬಳೆವೋಪ ಸೀತೆ ಮುನಿಯಂ ಕಂಡೆಱಗಿ ಲವನನರಿಗಳ್ ಹಯದ ನೆವದಿಂ ಬಂದಿಗೊಂಡುದಂ ಮೇಣಾತನಂ ಮಗುೞ್ಚುವೊಡೆಂದು ಕುಶಂ ನಿಶಿತವಿಶಿಖವಿಸರವಿಲಾಸಿ ಬೆಂಗೊಂಡುದನಿನ್ನುಂ ಬಾರದೆ ತಡೆದುದಂ ಬಿನ್ನಯಿಸಿದಳ್. ಅದರ್ಕಾಮುನಿಪಂ ಸೀತೆಯಂ ಸೈತಿಟ್ಟು ಮಕ್ಕಳಂ ಕೂಡಿವರ್ಪೆನೆಂದು ಪೋಱಮಟ್ಟು ಬರುತುಮಿರ್ದಂ. ೧೦

ಇಂತು ಬರುವರುತುಮಿರಲೊಡಂ ಏನಸುಂ ದೂರದೊಳ್ ಮುಱಿದಟ್ಟೆಯ, ಸುರಿದ ಕರುಳ, ಒಱೆದ ಬಸೆಯ, ಕೊಱೆದ ಸುಂಟಿಗೆಯ, ಪರಿದ ಕೆನ್ನೀರ ಪೆಣನ ಬಣಂಬೆ ಜವನುಂಡು ಕಾಱಿದ ಮಾಡ್ಕೆಯಿಂ ಕಾಣಿಸಿದತ್ತು. ಕೆನ್ನೀರ ಮುನ್ನೀರ ಸೇತುವಿಂಗಿಂತು ಕಿಱುವೆಟ್ಟುಗಳಂ ಪೊಸತೆನೆ ಪರಪಿದರೆನೆ ಏಱುಗೊಂಡು ಮಡಿದಾನೆವಿಂಡೆಸದತ್ತು. ಇಂತೊಪ್ಪುವ ರಣರಂಗಮಂ ಕಂಡು ಕೊಂಕಿ ಸಂಕಿಸಿ ಬರ್ಪ ಮುನಿಪಂಗೆ ರಣವಿಕ್ರಮಮೂರ್ತಿಗಳಂತೆ ಕೋಡದೆ ಬಾಡದೆ ಸಾಹಸಮಲ್ಲರೊಳ್ ಪೊಣರ್ವ ಕುಶಲವರಂ ಕಂಡು ತಲೆದೂಗಿ ಸನಿಯಂ ಸಾರ್ದು—ಓ ಓ! ಮಾಣ್ಮಾಣಿಮೆಂದು ನುಡಿದುಂ ತಡೆದುಂ ಮಕ್ಕಳಂ ತಕ್ಕೈಸಿ ರಾಮಲಕ್ಷ್ಮಣರ್ಗೆ ಕಾಣಿಸಿಕೊಂಡಂ. ೨೦

ಮುದ್ದಣಂ—(ಮನೋರಮೆಗೆ) ಏನೆಲಗೆ! ಕಡೆಗೆ ಹುಂಗುಟ್ಟದೆ ಗುಱುಗುಮ್ಮನಿರ್ಪಯ್?

ಮನೋರಮೆ—ಮಕ್ಕಳ ಸೆರಗಿಲ್ಲದ ಸಾಸಕ್ಕೆ ಬೆಱಗುವಟ್ಟು ಇನಿವೊೞ್ತುಂ ಕೆಮ್ಮನಿರ್ದೆಂ.

ಮುದ್ದಣಂ—ನೀನೊರ್ವಳೆ ಅಲ್ತು; ಬಾನೊಳ್ ಬರ್ದಿಲವೆಂಡಿರುಂ ಕಂಡು ಬೆಱಗುಗೊಂಡು ಬೆಂಡಾದರ್. ಅಂತಿರೆ ತಳ್ವದಾಗಳೆರ್ವರುಂ ಮುನಿಗೆ ಮಣಿವುದುಂ ವಾಲ್ಮೀಕಿ ಮುಗುಳ್ನಗೆಯಿಂ ರಾಘವಂಗೆ—ಓ ಓ! ಇನಿತೊಂದು ೩೦

ಜಗಕೆ ಪೊಸತೆನೆ ತಂದೆಮಕ್ಕಳ್ ನಿಮಗೆ ಸಂಗರಂ ಕಡಿದಾಯ್ತೇಂ!
ಇಂತುಮೊಳವೆ! ಕಾದುವರುಂಟು ದಾಯಿಗರ್, ಪಗೆಗಳಗ್ರಜಾನುಜರ್.
ತಂತಮ್ಮೊಳಿನ್ನೆಬರಂ ಕಂಡೆನಿಲ್ಲಂ ಕೇಳ್ದೆನಿಲ್ಲೀತೆಱನ ದೊರೆವೆತ್ತ ಸೆಣಸಂ.
ಅಂತಲ್ಲದೊಂದು ನಿಮಗಮೇಂ ಜಗದ ಮಾಯದ ಜವನಿಕೆಯ ಬೆಗಡೊ!
ನಿನ್ನ ಬಣ್ಣದ ರೂಪು ನಿನ್ನ ತಿಣ್ಣದ ಬಲ್ಪು ಪಣ್ಣಿದ ಪೊಣರ್ಕೆಯೊಳ್
ನಿನ್ನ ಸೆಟ್ಟಱಿಸದೆ ಪೋದುವೆ? ನೀಂ ನಾಡೊಡೆಯನೆಂಬೊಂದುರ್ಕಿಂ ಸೊರ್ಕಿಂ
ಕೈವಿಡಿದ ಮಡದಿಯಂ ಬಗೆಯದ ನಿನಗೀಬಾಲರ ಕುಱುಪೆಂತುಟಕ್ಕುಮೆನ
ಲೊಡಂ ರಾಮಂ—ಲಕ್ಷ್ಮಣನ ಮೊಗಮಂ ದಿಟ್ಟಿಸೆ;—ಜೀಯ! ಮುನಿಪಂ
ಪೇೞ್ದಂತಾಗದಂದು ಕಾಡಾಡಿ ಮಕ್ಕಳ್ಗೀವಗೆಯ ತೋಳ್ವಲಮುಂಟಪ್ಪುದೆ?
೧೦ ನೋೞ್ಪೊಡೆ ನಿನ್ನಂ ಪೋಲ್ವರೆಂದಂ. ಆದರ್ಕಾರಾಮಚಂದ್ರಮಂ ಸೀತೆಯ
ವಾರ್ತೆಯೇನೆಂಬುದುಂ; ಅನುಜಂ ಕೂಡಿವೋದುದಂ ಕಾಡೊಟಿಳಿಪಿವಂದುದ
ನಾಡಿ ತೋಱಿಪುದುಂ; ಮುನಿಪಂ ಸಮನಂತರದೊಳ್ ತನ್ನಾಶ್ರಮಕ್ಕ
ಯ್ದಾರಯ್ದುದಂ ಮೊದಲ್ಗೆಯ್ದು ಅಮಳರೊಗೆವಂ ಬಿಲ್ಗಾಱಿಕೆಯ ಬಿನ್ನಣಮುಂ
ನಾನಾಬಿಜ್ಜೆಯಱಿವಂ ನಿರವಿಸಿ ಮುಗಿಸಿದಂ. ಆಗಳಾಗಸದತ್ತಣಿಂ—
ಇವರೀಬಾಲಕರಪ್ರತಿಮವೀರರ್. ನಿನಗೆ ಸೀತೆಯೊಳ್ ಪುಟ್ಟಿದರಿವರನೊಪ್ಪು
ಗೊಳ್ಳೆಂದು ಮಱೆನುಡಿ ಪುಟ್ಟಲೊಡಂ ಸುರರ್ ಪೂಮೞೆಗಱೆದರ್.

ಮತ್ತಂ ರಾಘವಂ ಸಿಗ್ಗಿಂ ಕೆಮ್ಮನಿರ್ಪುದುಂ ವಾಲ್ಮೀಕಿ ಮಕ್ಕಳನಯ್ಯ
ನಡಿಗೆಱಗಿಸಿ—ಇವರೊಳೇನನ್ನೆಯಂ? ನಿನ್ನಂ ಮೀಱಿದ ತೋರದ ಬಲ್ಪಿನ
ಬಾಲರೆಂಬ ಜಸಂ ಜಗಮಱಿಯೆ ಪರ್ಬಿದತ್ತು. ಅಪ್ಪ ಬರ್ಪ ಜಯಪರಾಜ
೨೦ ಯಂಗಳಂ ನೀನಱಿಯದುಂಟೆ! ನಿನ್ನ ಲೀಲೆಗೇನೆಂಬೆನೊ! ಎಂದಂ. ಆಗಳ್
ಸಂತಸದಾಲಿನೀರ್ ಕಾಲ್ಪುರಮಾಗೆ ನವಿರ್ ನಿಗರವಾಗಿ ಗುಡಿಗಟ್ಟೆ ಮಣಿದ
ಮಕ್ಕಳನಿರ್ವರುಮನೆತ್ತಿ ತೊಡೆಯೊಳ್ ಕುಳ್ಳಿರಿಸಿ ತಳ್ಕೈಸಿ ಮುದ್ದಿಸಿ
ಮುಂಡಾಡಿ ಶಿರಮನಾಘ್ರಾಣಿಸಿ ಮುಂಗುರುಳಂ ನೇವರಿಸಿ ಮೆಯ್ದಡವಿ
ತನಯರ ಮೆಯ್ಸೋಂಕಿನೊಂದು ಹರವಸದಿಂ ಬಗೆಯುರ್ಬಿದ ರಾಘವಂ—
ಎಲೆಲೆ ಬಾಲಕರಿರ! ನಿಮಗೀಜಾಣ್ಮೆಗಾವುದು ಮೊದಲ್ ಪೇೞಿಮೆಂಬುದುಂ;
ಎಮಗೀ ಅಜ್ಜನುಪದೇಶಿಸಿದ ರಾಮಾಯಣಮೆ ಮೊದಲಾಯ್ತೆಂದರ್. ಆಗಳ್.
ವಾಲ್ಮೀಕಿ ತಾನವಿತಾನವಿಸಿದಂ ಕಱೆಯೆ, ಕೊರಲುಂ ಬೆರಲುಮೊಂದಾಗಿ
ಬೆರೆಯೆ, ಲಯಮನೆಡವದ ತಾಳದ ಮೇಳವದಿಂ ಪತ್ತುಂಬಗೆಯ ಗಮಕಂಗ
ಳೋಜೆಯಿಂ ಶುದ್ಧಮಿಶ್ರಸಂಕೀರ್ಣಂಗಳೆಂಬ ಪಲವುಂ ಬಗೆಯ ರಾಗಂಗ
೩೦ ಳೊಳ್ ಬಾಜಿಪ ಬಾಣಿಯ ಬೀಣೆಯಿಂಚರಕೆ ನೆರವರ್ಪೊಂದು ಭಂಗಿಯಿಂ

ಬಾಲಕರಿಂ ರಾಮಾಯಣಮನೊಪ್ಪಿಸಿದಂ. ದೇವರ್ಕಳ್ ಹಿಗ್ಗಿದರ್ ; ದೇವಾಂಗನೆಯರೊಗ್ಗಿದರ್ ; ದೇವಗಾಯಕರ್ ಸಿಗ್ಗಿನೊಳಾದರ್ ; ತುಂಬುರನಾರದರ್ ಮುಗ್ಗುರಿಸಿದರ್. ಅನಿತಱೊಳ್ ಮುನಿಪಂ ತನ್ನ ಗುಂಡಿಗೆಯ ನೀರಂ ತಳಿದು ಮುಚ್ಚೆವೋದರನೆಚ್ಚಱಿಸಿದಂ. ಈಗಳ್ ಸರ್ವರುಂ ಪುರಕೆ ಬಿಜಯಂಗೆಯ್ದರ್.

ಮನೋರಮೆ—ಏಂ ಸೀತೆಯನಿನ್ನುಂ ಕೂಡಿ ಪೋಗನೆ? ಉಟಿದೆ ಪೋದನೆ ರಾಮಂ?

ಮುದ್ದ—ಓ! ಇನ್ನುಮುಟಿವನೆ ಸತಿಯಂ! ಈವೊಟ್ತುಂ ತನ್ನರಸಿಯ ಉಱುಗಿಲ್ಲದ ನಡೆಗೆ ದೇವರ್ಕಳಂ ಸಾಕ್ಷಿಗೊಟ್ಟು ಆಗಳೆ ತನ್ನ ತನ್ನೆಯುಮಂ ಮನ್ನಿಸೆಂದು ಸನ್ನಿವೇಟ್ದು ಸಂತಮಿಟ್ಟು ಸುದತಿ ಸೀತೆಯಂ ಪೊನ್ನ ಸಿಬಿಗೆಯೊಳೇಱಿಸಿ ದೇವರ್ಕಳ್ ಪೊಗಟೆ ತಾನುಂ ತನ್ನವರುಂ ಆಶ್ರಮದ ಮುನಿಗಳೊಂದುಗೂಡಿ ಪೋದ . . .	೧೦

ಮನೋ—ಓ! ರಾಮನೊಳ್ಳಿದನಕ್ಕೆ! ಸೊಗಂಬಾಟ್ಗೆ! ರಾಮಂಗೆ ಗೆಲವಕ್ಕೆ! ರಾಮನಂ ಕೊಂಡಾಡುಗೆ! ಜಸಂ ಪೆರ್ಚಿ ಪರಿಗೆ! ರಾಮನೊಳ್ ನನ್ನಿ ಸನ್ನಿದಮಾಗಿರ್ಕೆ! . . .

ಮುದ್ದ—ಇಂತು ರಾಮನಂ ನೀಂ ಪರಸುವ ಪರಕೆಯೆ ಸೊಗಸು! ಬಲ್ಸೊಗಸು!

## ಕಥೋಪಸಂಹಾರಂ

ಮುದ್ದಣಂ—ಎನ್ನ ಪಟ್ಟದ ರಾಣಿ! ಇನ್ನೆತ್ತುಂ ನಿರಾಮಯಂ, ನಿರಾಕುಳಂ; ಸುಭಿಕ್ಷಂ; ಶಾಂತಿ . . .

ಮನೋರಮೆ—ಏನೆಲೆ ರಮಣ! ಇಂದಿದೇನೆತ್ತಣ ಶಾಂತಿಗೀಂತಿಗಳ್?	೨೦

ಮುದ್ದ—ರಾಘವನ ಜನ್ನಗುದುರೆ ಬರಿಸಂಬರಂ ಬಿಡದೆ ಚರಿಸಲೊಡಂ ಖುರಪುಟದ ತುಟಿತಕ್ಕೆ ಪಾವನಮಾದ ನಾಡ ಜನರ್ಗೆತ್ತಂ ಮಂಗಳಮೆಂದೆಂ. ಕಟ್ಟಾಯಸದ ನಿಚ್ಚವಯಣಮುಂ ಬನ್ನವಟ್ಟಿಯ ಬಟಲ್ಕೆಯುಂ ಗಾಳುಗೂಟರೊಳ್ ಪೊಣರ್ವ ಗನ್ನನಿಟ್ಟುರದ ಸೆಣಸಾಟಮುಂ ರಾಮಸೇನೆಗೆ ಮುಡಿದುದು. ಈಗಳ್ ತಂತಮ್ಮ ಬೀಡಿಂಗೈದಿವಂದುಂ ಬೀರರೆಲ್ಲರ್ ನೇಹಂ ಮಿಗೆ ತಂತಮ್ಮರಸಿಯರಿನೋಲೈಸಿಕೊಳ್ವರ್.

ಮನೋ—ಅಂತಪ್ಪೊಡೆ ನೀಂ ಪೇಟ್ವ ನಲ್ಗತೆ ಮುಗಿಯೆ ವಂದುದು.

ಮುದ್ದ—ಉಂ! ಎಂತೆಂತೊ ರಗಳೆಯ ಪಾಟ್ಗತೆ ಕಡೆಗಂಡುದು.

ಮನೋ—ಛೀ! ಶ್ರೀರಾಮಪುಣ್ಯಚರಿತಮಂ ಪಾೞ್ಗೆತೆಯೆಂದು ಇಟಿ ಕೆಯ್ದು ತೆಗಳ್ವೆ!

ಮುದ್ದ—ಶ್ರೀರಾಮಚರಿತಮನಿಟಿಸಿ ಕುಟಿಸಿ ನುಡಿದೆನಿಲ್ಲಂ. ಪುರುಳಿಲ್ಲದ ಸಲ್ಲದ ಪೊಲ್ಲದೆನ್ನ ಬಱುವಣ್ಣನೆಯ ಬೇಸಱಿಕೆಯ ಪಾೞ್ಗಬ್ಬಮಂ ಪೊಳ್ಳೆಂದೆ ನುಡಿದೆಂ.

ಮನೋ—(ಸವಿನಯಂ) ತಮ್ಮೊಡಮೆಯಂ ತಾಮೆ ಪೊಗೞ್ವರೆ ಬಲ್ಲರ್? ಅಲ್ಲದಂದು ನವರಸದ ತನಿರಸಮೊಱೆವ ಬಣ್ಣಗಬ್ಬಮಂ ಪೊಳ್ಳೆಂದೊರೆವ ನಿನ ಗಮೇಂ ನಿರಹಂಕೃತಿಯೊ ನಿನ್ನಾ ಜಾಣ್ಮೆಯೊಳ್.

ಮುದ್ದ—ಏನೆನ್ನ ಕಬ್ಬಂ ನಿನಗೆ ಮೆಚ್ಚುಗೆಯಾಯ್ತೆ?

ಮನೋ—ಎನಗೊರ್ವಳ್ಗೆಂದೊಡೇಂ. ನಾಡೊಳೆಲ್ಲರ್ಗಂ. ೧೦

ಮುದ್ದ—(ನಕ್ಕು) ಎನ್ನೊಳೊಂದಭಿಮಾನದಿನಿಂತುಸಿರ್ವೆಯಕ್ಕುಂ.

ಮನೋ—ಎನ್ನ ಮುದ್ದಿನರಸ! ಅಂತಲ್ತು; ನಿನ್ನ ಪೆಸರೆಂತಂತು ಕಬ್ಬಮುಂ ಮುದ್ದುಮುದ್ದಾಯ್ತು ಜಗಕೆ.

ಮುದ್ದ—ಇಂತೀನುಡಿಯಿನೆನ್ನಂ ನೀನೇಟಿಪಂತಿರಿರ್ಕುಂ.

ಮನೋ—ಉಃ! ಉಃ! ಗುಣದೊಳ್ ಪುರುಡುಂಟೆ? ಸಾಜಂ. ನಿನ್ನೀ ಜಾಣ್ಮೆಯ ಬಣ್ಣನೆಯ ನಲ್ಗತೆ ಕೇಳ್ವರನೆಂತಪ್ಪರುಮಂ ಬಗೆಯನಿರ್ಕುಟಿ ಗೊಳ್ಗುಂ; ನಾಡ ಮಾತೇಕೆ! ಎನಗೆಂತೋ ಮೇಣುಂ ಮೇಣ್ ಕೇಳ್ವೆ ನೆಂಬೊಂದಾಸೆ ಪುಟ್ಟುಗುಂ.

ಮುದ್ದ—ಎನ್ನಾಣೆ!

ಮನೋ—ನಿನ್ನಾಣೆ! ಕಡೆಯೇಂ? ಕಮ್ಮಲರ್ ಮಗಮಗಿಸದೇಂ ಪೋಕುಂ! ೨೦

ಮುದ್ದ—ಮುತ್ತಬ್ಬೆಯಾಣೆ!

ಮನೋ—ಮುತ್ತಬ್ಬೆಯಾಣೆ! ಇಸ್ಸಿ! ಪುಸಿಯನೇವೊಟ್ಟಿಂಗಮುಸಿರೆಂ. ಈವಗೆಯ ನುಡಿಗಬ್ಬಂ ಮುಂತಿಲ್ಲ ಪಿಂತಿಲ್ಲಮೆಂದಾಯ್ತು.

ಮುದ್ದ—ಎಂತುಂ ನಿನಗೆ ಸೊಗಸಾಯ್ತುಲೇ! ಇದುವೆ ಪರಮಾನಂದ ಮೆನಗೆ.

ಮನೋ—ಬಿನ್ನಣದ ಬಣ್ಣನೆಯ ನುಡಿಯಲ್ತು; ಬಲ್ಸೊಗಸು ಬಲ್ಸೊ ಗಸು ನೀನೆಂದ ಕತೆ.

ಮುದ್ದ—ಅಂತಪ್ಪೊಡೆ ತಾರೆಲೆ ನೀನೆಂದ ಮೆಚ್ಚಿನುಡುಗೊಱೆಯಂ.

ಮನೋ—(ಕಣ್ಬೆಗಡುಗೊಂಡರಂತೆ ನಟಿಸಿ) ಇನ್ನೇಂ ಜಾಣನೊ! ೩೦

ನೀನಱಿಯದರಂತೆ ಮಿಣ್ಣನಿರ್ದುಮೆನ್ನಿಂದೆನ್ನಂ ಕಟ್ಟಿಸಿದ ದಿಟ್ಟಂ. ನಿನಗೇ ನೆಂಬೆನೇನೆಂಬೆನೊ! ನಿನ್ನಾ ಬಣ್ಣವಾತಿಗೆ ಮಾಱುವೋದೆಂ (ಎಂದು ವಿಚಾರದಿಂ) ಆಯ್ತಾಯ್ತು ಪೇೞ್ದ ಕತೆಗೆ ಮಂಗಳಮಂ ಮಾಡು; ಮೆಚ್ಚುಗಿಚ್ಚು ಬೞಿಕ್ಕಮಲ್ತೆ.

ಮುದ್ದ—ಬಱಿದೆ ಮಂಗಳಮಕ್ಕುಮೆ! ಹೋಳಿಗೆ ತುಪ್ಪಮಂ ತಿನಪಡಿಸ ವೇಡಾ!

ಮನೋ—ಹೋಳಿಗೆತುಪ್ಪಕ್ಕಿಂದೇಂ ನಿನಗೆ ಶೋಭನಮೆ?

ಮುದ್ದ—ಇಂದೆನಗೆಂದೊಡೇಂ? ಎನಗಂ ನಿನಗಂ.

ಮನೋ—ಪೋ ಸಾಲ್ಗುಮೀಬಣ್ಣದ ಕೊಂಕುನುಡಿ. ರಾಘವನ ಯಜ್ಞ ಮೆಂತು ಪರಿಸಮಾಪ್ತಿಯಾಯ್ತು ಪೇೞ್. ೧೦

ಮುದ್ದ—ಶೋಭನಾಂಗೀ! ಅಂತು ರಾಘವಂ ಸತಿಸುತರ್ವೆರಸು ಅಯೋಧ್ಯೆಗೆ ಪೋಪುದುಂ ಕೆಲವಾನುಂ ದಿನಕೆ ಜನ್ನಗುದುರೆಯುಂ ಪೊೞಲ್ಗೆ ಮುಮ್ಮೊಗಮಿಕ್ಕಿ ನಡೆದತ್ತು. ಕಾಪಿನ ಬಲ್ಪಡೆಯುಂ ಬೞಿಸಾರ್ದುವಂದುದು; ಶತ್ರುಹಪ್ರಮುಖವೀರವರ್ಗಮುಂ ತೆರಳ್ದುದು. ಓಓ! ಇದೆತ್ತಣ ಕಪ್ಪ ಕಾಣ್ಕೆಗಳೊ! ಪೊನ್ನೇಂ, ಪೊಂದೊಡವೇಂ, ರನ್ನಮೇಂ, ಬಗೆವಗೆಯ ಪಟ್ಟುಡೆಯೇಂ, ಅಣಿಮುತ್ತಿನ ಜಾಳಿಗೆಯೇಂ! ಕತ್ತುರಿಯ ಪೊಱೆಯೇಂ! ಕಪ್ಪುರದ ಮುಡಿಯೇಂ! ಜಾತ್ಯಶ್ವಂಗಳೇಂ! ಭದ್ರಗಜಂಗಳೇಂ! ಕಾಣಬಾರದ ವಿನೂತ್ನವಸ್ತೂತ್ಕರಂಗಳೇಂ! ಬೆಂಗೆ ಬೆಂಗೆ ಪೂಡಿದಂತಿರೂರುದ್ದಮಾದ ಓರಣದಿಂ ಬರ್ಪ ಬಂಡಿಗಳೇಂ! ಅಳವಿಗಟಿದ ಮಂಡಳಿಕರ ನೆರವಿಯೇಂ! ಬಱಿದೇಂ ಪಿರಿದೇಂ ರನ್ನೆ! ನಾಡೊಳುಳ್ಳ ಐಸಿರಿಯೆತ್ತಮೊಂದುಗೂಡಿ ೨೦ ತಮ್ಮಾಣ್ಮರಂ ಮುಂದುಮಾಡಿ ಜನ್ನದ ಪೇರುಕ್ಕೆವಮಂ ಕಾಣ್ಬೊಡೆಂದು ಪೊಱಮಟ್ಟು ಪೋಪಂತಿರಾಯ್ತು. ಇಂತು ಬಂದು ಪೊೞಲ್ಗೆ ಗಾವುದ ದಳತೆಯೊಳ್ ನಿಂದು ದಿಗ್ವಿಜಯಂಗೆಯ್ದು ಬಂದೊಸಗೆಯಂ ಪೇೞ್ದಟ್ಟಲೊಡಂ, ರಾಜಕಾರ್ಯನಿರತಂ ಭರತಂ ಅವರೆಲ್ಲರಂ ಮನ್ನಿಸುತಟ್ಟಿಱಿಸಿದಿರ್ಗೊಂಡು ರಾಘವಂಗೆ ಕಾಣಿಸಲೊಡಂ ಬೇಱೆವೇಱೆ ಬಂದ ಸಾಮಂತರಂ ಸತ್ಕರಿಸಿ, ಮಂಡಳಿಕರಂ ಕೊಂಡಾಡಿ, ತನ್ನ ಕಿಱಿದಮ್ಮನ ಸಾಸಮಂ ಪೊಗೞ್ದು, ಪುಷ್ಕಲನಂ ಮೆಚ್ಚಿ, ಲಕ್ಷ್ಮೀನಿಧಿಯಂ ಮನ್ನಿಸಿ, ಮಿಕ್ಕುೞಿದ ವೀರರನುಪಚರಿಸಿ, ಸರ್ವರಂ ಬೀಡಾರಕ್ಕೆ ಬೀಳ್ಕೊಟ್ಟಂ.

ಮಱುದಿವಸಂ ಬೆಳ್ಪ ಜನ್ನಕ್ಕೆ ಪೂರ್ಣಾಹುತಿ ಪೊೞ್ತಿಡೆಗೆ ಮುನ್ನಮೆ ಸರ್ವಸಂಭಾರಮೇರ್ಪಟ್ಟುದು. ಬಂದ ವಿಪ್ರರ್ಗೊಂದು ಸಭೆ; ಮುನಿ ೩೦

ಜನಂಗಳ್ಗೊಂದು ಸಭೆ; ರಾಜನ್ಯರ್ಗೊಂದು ಸಭೆ; ಪುರದ ಪುರಂಧ್ರಿಯರ್ಗೊಂದು ಸಭೆ ಯೋಜನದಳತೆಯೊಳಾಯ್ತು. ಈಗಳ್ ಯಾಗಶಾಲೆಯೊಳೆಣ್ದೆಸೆಯೊಳಂ ಬಾಗಿಲೊಳೋರಿರ್ವರ್ ಮುನಿಗಳ್ ರಕ್ಷೋಘ್ನಸೂಕ್ತಮಂ ಪಠಿಸುತ್ತೆ ಕಾವಲರೆಸೆದರ್. ಮತ್ತಮೀರೆಣ್ಬರ್ ಯಾಜಕರೋರೊಂದು ದೆಸೆಯೊಳ್ ಸಾಮಗಾನಮಂ ಪಾಡುತುಮುದ್ಗಾತೃಗಳುಮೊಂದೆಸೆಯೊಳ್ ತಂತ್ರದಧ್ವರ್ಯುಗಳುಮೊರ್ದೆಸೆಯೊಳ್ ಹೋತಾರರುಮೊಪ್ಪಿದರ್. ವೇದಘೋಷಂ, ವಾದ್ಯಘೋಷಂ ನೃತ್ಯಘೋಷಮೆತ್ತಂ ದಿಕ್ತಟಮಂ ತುಂಬಿದುದು; ಕೊಂಡದೊಳಿನ್ನೆಬರಮೆಡೆವಿಡದೆ ಚಟಚಟಿಪ ಬೇಳುರಿ ನಾಲಗೆಗಳಂ ನೀಡಿಕೊಂಡಿರ್ದುದು.

೧೦ ಈಗಳೀಗಳ್ ಮಂಗಳಂ; ದೆಸೆವಳರ್ ಮೆಯ್ದೋಱಿ ಜನ್ನಕ್ಕೆ ಬಂದು ತಂತಮ್ಮ ಹಸುಗೆಯುಂ ಮನಂ ದಣಿಯೆ ಕೈಯಾಱೆ ಕೊಂಡರವರ್ಗಂ ಮಂಗಳಂ. ಋತ್ವಿಜರೆಲ್ಲರ್ ಕೊಳಗ ಮತ್ತಮಿರ್ಪಳ್ಳ ರನ್ನಮುಂ ಪೊನ್ನ ಹೇಱಂ ಚೆನ್ನಾಕಳಂ ಪ್ರತಿಗ್ರಹಿಸಿ ರಾಮನಂ ಪರಸಿ ಬೀಡ್ಕೊಂಡರವರ್ಗಂ ಮಂಗಳಂ. ಮುನಿಗಳೆಲ್ಲರ್ ನರಲೀಲೆಯ ಪರಬೊಮ್ಮನಂ ಕಣ್ದಣಿಯೆ ಕಂಡೆವೆಂಬೊಂದು ಸಂತಸದಿಂ ನಲಿನಲಿಯುತೆ ತಮ್ಮಾಶ್ರಮಕ್ಕೆ ಪೋದರವರ್ಗಂ ಮಂಗಳಂ. ಮೂಗುದ್ದಮುಂಡುಂಡು ತೇಗಿ ಕೊಟ್ಟ ದಕ್ಷಿಣೆಯುಂ ಪೊತ್ತುಬ್ಬಸಂಬಡುತೆ ನಡೆದರ್ ಪಾರ್ವರವರ್ಗಂ ಮಂಗಳಂ. ಪೌರಪೌರಂಧ್ರಿಯರ್ ಶ್ರೀರಾಮನ ದಿವ್ಯಮೂರ್ತಿಯುಂ ಕಂಡು ಸಂತಸಂದಾಳ್ದಿ ತಾಂ ತಮಗೆ ಮಾತುಗುಟ್ಟುತೆ ಪೋದರವರ್ಗಂ ಮಂಗಳಂ. ಕೊಂಡಾಟದ ಮಾಸಾವಂತರ್ ತಮಗೆ ದೊರೆ

೨೦ ವಡೆದ ಗಜರಥತುರಗವಿಭೂಷಣಾದಿಗಳಂ ಕೈಕೊಂಡು ರಾಘವಂಗೆಱಗಿ ಆತನ ಡಿಯಾಣತಿವಡೆದು ಪುರಕೆ ಬಿಜಯಂಗೆಯ್ದರವರ್ಗಂ ಮಂಗಳಂ. ಇಂತು ಶ್ರೀರಾಘವಂ ಸೀತಾಸಮೇತಂ ಜನ್ನಮಂ ಬೇಳ್ದು ತನ್ನೊಂದು ಬೆಳ್ಗಸದಿಂ ದೆಸೆಮೂಲೆಗಳಂ ಬೆಳಗಿಸಿ ಸೋದರರ್ವೆರಸು ಪಲವುಂ ಪಗಲರಸುಗೆಯುತ್ತು ಮಿರ್ದನವಂಗಂ ಮಂಗಳಂ, ಶುಭಂ ಭದ್ರಂ ಕಲ್ಯಾಣಂ.

ಮುದ್ದಣಂ—(ಅನಿತಱೊಳ್ ಮನೋರಮೆ ಎಟ್ದು ಪೋದಳ್.)—(ಎಟ್ದು ಪೋಪಳನೀಟ್ದು ಮಾಣಿಸಿ) ಬಲ್ಸೆಡಕುಗಾರ್ತಿಕಣಾ! ಮುದ್ದಣನುಮಂ ಟಕ್ಕಿಪ ಪೆಂಡಿರೊಳರೆ? ಕೊಂಕು ಸುಡಿಯೊಂದು ನೆವದಿಂ ಬಿಂಕದಿನೆರ್ದೊಡಾಯ್ತೆ! ಮೆಚ್ಚನಿತ್ತಲ್ಲದೆ ಪೋಪೊಡೇಂ ಬಿಡುವೆನೆ!

ಮನೋ—ಕತೆಗೆ ಮಂಗಳಮಂ ಮಾಡದೆ ಬಱಿದೆ ಉಡುಗೊಱೆ ತುಡು

೩೦ ಗೊಱೆಯೆಂದೊಡೇಂ?

ಮುದ್ದ—ಕತೆಗೆ ಮಂಗಳಮನಾಗಳೆ ಪೇಡ್ದೆನುಟಿದೆನಿಲ್ಲ. ಈಗಳುಟಿದು ದೊಂದೆ ನಿಸ್ನುಡುಗೊಱೆ.

ಮನೋ—ಉಡುಗೊಱೆಯ ಕಾಟಕ್ಕಿನ್ನೆತ್ತವೋಪೆಂ! ನೀನೇಂ ಬೇಡು ವಯ್?

ಮುದ್ದ—(ಪುಸಿಮುನಿಸಿಂ) ಬೇಡುವೊಡೇಂ ತಿರಿಕನೆ? ಮನೆಗೆ ಬಂದೆನೆ? ಮೆಚ್ಚಿತ್ತೊಡದನೆ ಕೈಕೊಳ್ವೆಂ.

ಮನೋ—ಆನೆಂತುಂ ಪರಾಧೀನೆ. ಮೇಣೆನಗೊಡಮೆಯಾವುದು? ಏನ ನೀವೆನೆಂತೀವೆಂ?

ಮುದ್ದ—ಏನೊ! ಎಂತೊ! ಆಂ ಮೆಚ್ಚುವಂತುಂ, ಕತೆಯ ಪುರುಳ್ಗೊ ವಂತುಂ ನಾಲ್ವರ್ ತಲೆದೂಗುವಂತುಂ ಉಡುಗೊಱೆಗೆಯ್ದೊಡಾಯ್ತು.　　೧೦

ಮನೋ—ಅಂತಪ್ಪೊಡಿಂತಿದು—. . . ನಿನ್ನೀಕಬ್ಬಮನೋದುವ ಜಾಣರೇ ವಗೆಯುಡುಗೊಱೆಯನೀಯೆಂಬರಾವಗೆ ಮೆಚ್ಚನೀವೆಂ.

ಮುದ್ದ—ಅಂತಾನುಮಕ್ಕೆ! ಪೋಪಂ.

ಧರೆಯಱಿಯೆ ಜೀವರಾಶಿಗೆ|
ಪಿರಿಯಂ ನರನಾದಮಾದನಾತ್ಮಂ ತನ್ನೊಳ್||
ದೊರೆಕೊಂಡಿರ್ಪಿನಮುಂತದು|
ಪರಿನಿರ್ಮಲಮಾಗೆ ಪೆರ್ಮೆಯಿರ್ಮೆಯ್ವಡೆಗುಂ॥

ಎಂಬಲ್ಲಿಗೆ ಶ್ರೀರಾಮಾಶ್ವಮೇಧದೊಳ್
ಕಥೋಪಸಂಹಾರಂ ಷೋಡಶಾಶ್ವಾಸಂ ಸಂಪೂರ್ಣಂ.



ಶ್ರೀರಾಮಾಶ್ವಮೇಧಂ
ಸಂಪೂರ್ಣಂ.

# ಅರ್ಥಕೋಶ

## ಅ

ಅಕ್ಕಱು ೪.೨೦ ಅಕ್ಕರೆ, ಪ್ರೀತಿ
ಅಕ್ಷೌಹಿಣೀ ೪೮.೧೫ ೨೧೮೭೦ ಆನೆಗಳೂ, ೨೧೮೭೦ ರಥಗಳೂ, ೬೫೬೧೦ ಕುದುರೆಗಳೂ, ೧೦೯೩೫೦ ಕಾಲಾಳುಗಳೂ ಉಳ್ಳ ಸೇನೆ
ಅಗಜೆ ೧೧೫.೬ ಪಾರ್ವತಿ
ಅಗವಡು ೧೦೪.೨೦ ಮರವಡು
ಅಗೞ್, ಅಗೞ್ತೆ ೧೦೨.೨ ; ೩೩.೨೬ ಕಂದಕ. ಅಗತೆ
ಅಗಿ ೧೧೫.೯ ಭಯಪಡು
ಅಗುೞ್ ೪೩.೨೮ ಅಗೆ
ಅಗುರ್ವಿಸು ೯೦.೨೬ ಹೆಚ್ಚಿಸು (ಅಗುರ್ವು = ಆಧಿಕ್ಯ)
ಅಗುಂದಲೆ ೫೬.೨೩ ಅತಿಶಯ
ಅಗ್ಗ ೧೩೭.೧೭ ಅಗ್ರ (ಸಂ.), ಶ್ರೇಷ್ಠ
ಅಗ್ಗಳಿಕೆ ೧೫.೧೩ ಹೆಚ್ಚುಗಾರಿಕೆ, ಆಧಿಕ್ಯ
ಅಗ್ಗಿ ೧೧೧.೧೮ ಅಗ್ನಿ (ಸಂ.)
ಅಗ್ಗಿ ಮೊಗರ್ ೭೪.೨ ದೇವತೆಗಳು (ಅಗ್ನಿಮುಖ—ಸಂ.)
ಅಗ್ರಭವ ೩೪.೧೫ ಅಗ್ರಜ, ಅಣ್ಣ
ಅಘಮರ್ಷಣ ೧೩೭.೨೦ ಪಾಪಪರಿಹಾರಕ ಸ್ತೋತ್ರ
ಅರ್ಘ್ಯ ೧೧.೮ ಕೈಗೆ ಕೊಡುವ ನೀರು
ಅಚ್ಚ ೧೩೯.೧೪ ಅಚ್ಛ (ಸಂ.), ಸ್ವಚ್ಛ
ಅಚ್ಚರ ೭೬.೨೯ ಅಪ್ಸರ (ಸಂ.)
ಅಚ್ಚರಸಿ ೫೫.೨೩ ಅಪ್ಸರಃ ಸ್ತ್ರೀ
ಅಚ್ಚರಿ ೪೧.೪ ಆಶ್ಚರ್ಯ (ಸಂ.)
ಅಚ್ಚರಿ ೧೦೨.೮ ಅಪ್ಸರೆ (ಸಂ.)
ಅಚ್ಚವಳಿಕು ೭೨.೨೪ ಶುದ್ಧ ಸ್ಫಟಿಕ
ಅಚ್ಚಿ ೪೦.೨೨ ಅಕ್ಷಿ (ಸಂ.) ಕಣ್ಣು
ಅಚ್ಚು ೫೦.೨೩ ಅಕ್ಷ (ಸಂ.) ರಥದ ಅಚ್ಚು
ಅಚ್ಚುಳಾಯ್ತ ೧೪೨.೧೨ ಸೇವಕ
ಅಜನಯ್ಯ ೯೮.೧೬ ಬ್ರಹ್ಮನ ತಂದೆ, ವಿಷ್ಣು
ಅಜ ೯೮.೧೭ ದಶರಥನ ತಂದೆ
ಅಜಸ್ರಂ ೧೪೯.೨೯ ಯಾವಾಗಲೂ
ಅಟಮಟಿಸು ೧೧೦.೩೦ ಮೋಸಮಾಡು
ಅಟ್ಟ ೬೫.೨೩ ಎತ್ತರ
ಅಟ್ಟಸ ೧೨೩.೧೫ ಅಟ್ಟಹಾಸ (ಸಂ.), ಗಟ್ಟಿಯಾದ ನಗು
ಅಟ್ಟೆ ೬೧.೨೮ ಮುಂಡ ; ದೇಹ
ಅಡಕಿಲ್ವಟ್ಟೆ ೭೩.೧೭ ಪೇರಿಸಿದ—ಇಡಿಕಿದ-ಮಾರ್ಗ
ಅಡಗಲ್ಲು ೧೦೩.೨೦ ಅಡಿಗಲ್ಲು
ಅಡಗು ೮೪.೨೧ ಮಾಂಸ
ಅಡರು ೨೭.೧೫ ಏರು
ಅಡರ್ಪು ೬೩.೨೪ ಆಶ್ರಯ
ಅಡಿ ೬೬.೧೨ ಮೂಲ, ಕಾರಣ
ಅಡಿಕಿಲ್ ಗೂಡೆ ೮೩.೨೪ ಅಡಕುವ ಗೂಡೆ, ದೊಡ್ಡ ಬುಟ್ಟಿ
ಅಡಿಮುಡಿ ೯೯.೧೪ ಆರಂಭ ಮುಗಿವು, ತುದಿ ಮೊದಲು
ಅಡುಕುಳ ೧೪೪.೨೯ ಅಡುಗೆಯ ಸ್ಥಳ
ಅಡುವಳ ೧೪೪.೨೯ ಅಡಿಗೆಯವನು
ಅಡಂಗಾಯ್ತ ೧೩೫.೩೦ ಕೋಟೆಯವನು ; ಆಶ್ರಯದಾತ
ಅಡ್ಡ ೧೦೭.೫ ಅರ್ಧ (ಸಂ.)
ಅಣಿಯಱಿಂ ೫೭.೨೩ ವಿಶೇಷವಾಗಿ
ಅಣುಗದಮ್ಮ ೧೧.೪ ಪ್ರೀತಿಯ ತಮ್ಮ
ಅಣುವ ೯೭.೨೫ ಹನುಮ
ಅಣುವಂ ೯೮.೩ ಅಲ್ಪವಾಗಿ
ಅಣೆ ೭೯.೨೫ ಹೊಡೆ, ಅಪ್ಪಳಿಸು

ಅಣಂ ೧.೧ ಸ್ವಲ್ಪವೂ
ಅಣ್ಪು ೫೨.೯ ಲೇಪನ
ಅಣ್ಮು ೯೨.೨೦ ಪರಾಕ್ರಮ
ಅತಿಪಾತ ೮.೧ ಔದಾಸೀನ್ಯ ; ಹೀನಕೃತ್ಯ
ಅತಿರಥ ೧೪೩.೨೯ ಅಮಿತಯೋಧರೊಡನೆ ಸೆಣಸುವವ
ಅತ್ರಿಪುತ್ರ ೭೫.೨೨ ದತ್ತಾತ್ರೇಯ
ಅದಟು ೯೧.೨೬ ಪರಾಕ್ರಮ
ಅದಿರ್ಗಂತಿ ೫೪.೧ ಅದಿರ್ಮುರ್ತ್ತೆ (೧೬.೧೮); ಇರುವಂತಿಗೆ
ಅಧರ ೬೦.೧೭ ತುಟಿ
ಅಧ್ವರ ೧೩೮.೨ ಯಜ್ಞ
ಅಧ್ವರ್ಯು ೪೬.೨೬ ಯಜ್ಞದಲ್ಲಿ ವೇದಿಕೆಯ ತಯಾರಿಕೆ ಮೊದಲಾದ ಕಾರ್ಯಗಳಲ್ಲಿ ನಿಯೋಜಿತನಾದ ಯಜುರ್ವೇದೀಯ ಪುರೋಹಿತ
ಅನಿವಿರಿದು ೧೩.೮ ಅನಿತು+ಪಿರಿದು
ಅನುಕಾರಿ ೫೩.೫ ಹೋಲುವ
ಅನ್ನಂ ೩.೯ ವರೆಗೆ
ಅನ್ನೆಗಂ ೨೯.೧೬ ಆ ವೇಳೆಗೆ
ಅನ್ನೆಯ ೨೬.೨೯ ಅನ್ಯಾಯ (ಸಂ.)
ಅನ್ವಯ ೨೧.೨ ವಂಶ
ಅಪದೆಸೆ ೫೧.೨೪ ದುರ್ದಶೆ, ಹೀನಸ್ಥಿತಿ
ಅಪವರ್ಗ ೧೩೬.೨೫ ಮೋಕ್ಷ
ಅಪ್ಪುಕೆಯ್ ೧೫.೧೯ ಅಂಗೀಕರಿಸು
ಅಪ್ಪುಕೆಯ್ ೧೯.೬ ವ್ಯಾಪಿಸು
ಅಬ್ಜ ೭.೯ ಚಂದ್ರ
ಅಬ್ಬೆ ೮.೧೯ ತಾಯಿ
ಅಬ್ಧಿ ೭.೯ ಸಾಗರ
ಅಭದ್ರ ೩೪.೨೧ ಸಾಧುವಲ್ಲದ
ಅಭಿಪನ್ನ ೭.೨೩ ಶರಣಾಗತ, ನೆರವನ್ನಪೇಕ್ಷಿಸುವ
ಅಭೀಕ್ಷಿಸು ೫೧.೨ ನೋಡು
ಅಭೀಷ್ಟ ೧೦೫.೫ ಇಷ್ಟ
ಅಭ್ಯಾಗತ ೧೧೫.೧೬ ತಾನಾಗಿ ಬಂದ ಅತಿಥಿ
ಅಮರ್ ೪೦.೨೪ ಸೇರು
ಅಮರ್ಚು ೧೧.೨೫ ಒಟ್ಟಾಗು, ಕೂಡು
ಅಮರ್ದಪ್ಪು ೧೪೮.೧೧ ಗಾಢವಾಗಿ ಆಲಿಂಗಿಸು
ಅಮರ್ದು ೧೧.೩೦ ಅಮೃತ (ಸಂ.)
ಅಮರ್ದುಗೈಯ ೪೯.೧೧ ಚಂದ್ರ
ಅಮಳ ೫೪.೨೫ ಯಮಳ (ಸಂ.), ಜೊತೆ
ಅಮಳ್ದೇವರ್ ೭೦.೧೨ ಅಶ್ವಿನೀದೇವತೆಗಳು
ಅಮಳರ್ ೧೫೦.೧೮ ಶುದ್ಧರು. ಯಮಳರು
ಅಯೋನಿಜೆ ೨೫.೨೭ ಅಮಾನುಷಸಂಭವೆ
ಅರಗೀಲ್ ೯೧.೨೮ ಚಕ್ರದ ಕೀಲು
ಅರನೇಱಿಲ್ ೫೪.೬ ಅರಸುನೇರಿಲೆ
ಅರಮಗ ೯೧.೨೨ ಅರಸುಮಗ
ಅರವೆಂಡಿರ್ ೪೫.೨೮ ರಾಜಪತ್ನಿಯರು
ಅರಸಿಂಗ ೬೯.೨೧ ರಾಜಸಿಂಹ
ಅರಸುಗೆಯ್ಮೆ ೨೩.೩ ರಾಜಕಾರ್ಯ
ಅರಿ ೨೮.೩೦ ಶತ್ರು
ಅರಿ ೧೪೪.೪ ಕತ್ತರಿಸು
ಅರೆ ೧೦೭.೪ ಅರ್ಧ
ಅರೆವೆಣ್ಮೆಯ್ಯ ೭.೫ ಅರ್ಧನಾರೀಶ್ವರ
ಅರೆವೆಱೆ ೨೦.೧೭ ಅರ್ಧಚಂದ್ರ
ಅರ್ಬಿ ೩೫.೯ ಅಬ್ಬಿ, ಬೀಳುವ ನೀರು
ಅಱ ೭.೧೦ ಧರ್ಮ
ಅಱ ೧೧೦.೧೧ ಧರ್ಮ, ಯಮ
ಅಱಗುಲಿ ೨೯.೧೦ ಧರ್ಮಘಾತಕ, ಪಾಪಿ
ಅಱಸು ೧೩೬.೧೮ ಹುಡುಕು
ಅಱಿಕೆ ೫೫.೧೧ ತಿಳಿವಳಿಕೆ
ಅಱಿಕೆಗೈ ೫೭.೬ ವಿಜ್ಞಾಪಿಸು
ಅಱಿತ ೧೩೮.೧೫ ಜ್ಞಾನ
ಅಱಿಲ್ ೨೨.೩೦ ನಕ್ಷತ್ರ
ಅಱಿಲಗೆ ೮೩.೧೨ ನಕ್ಷತ್ರವೆಂಬ ಮೊಳಕೆ
ಅಱಿವಗೆ ೪೦.೨೬ ಅರಿಷಡ್ವರ್ಗ
ಅಱು ೧೦೫.೧೨ ಆರು, ಬತ್ತು, ಒಣಗು
ಅಱುವೊಗ ೪೨.೧೨ ಷಣ್ಮುಖ

ಅಜಿವೆ ೫೪.೨೧, ೧೩೫.೨೪ ಕಲ್ಲು ; ಬೆಟ್ಟ
ಅಜಿವೆಯಟ್ಟು ೧೫೪.೨ ಬೆನ್ನಟ್ಟು, ಹೊಡೆ ದೋಡಿಸು
ಅಲಗು ೧೪೫.೪ ಬಾಣ
ಅಲತಗೆ ೨೦.೬ ಅಲಕ್ತಕ (ಸಂ.), ಸ್ತ್ರೀಯರು ಪಾದಕ್ಕೆ ತೊಡೆಯುವ ಅರಗು
ಅಲರ್ ೭.೩ ಹೂ
ಅಲರ್ಚು ೧೨೩.೧ ಅರಳಿಸು, ವಿಕಸಿಸು
ಅಲರ್ವಕ್ಕಿ ೫೨.೬ ದುಂಬಿ
ಅಲರ್ವುಡಿ ೫೨.೨೭ ಪುಷ್ಪಧೂಳಿ
ಅಲರ್ವೊಡೆಯ ೭.೪ ಪದ್ಮನಾಭ, ವಿಷ್ಣು
ಅಲರಂಬು ೫೭.೨೪ ಪುಷ್ಪಬಾಣ
ಅಲಸು ೧೮.೭ ಬೇಸರಗೊಳ್ಳು
ಅಲ್ಲಣಿ ೭೩.೪ ವೇಳ
ಅಲಂಪು ೫೪.೨೭ ಸೊಗಸು ; ಸಂತೋಷ
ಅಲುಂಬು ೭೮.೨೫ ತೊಳೆ
ಅವತೆ ೧೦.೨೧ ಅವಸ್ಥೆ (ಸಂ.)
ಅವರಜ ೧೩೮.೧೯ ತಮ್ಮ
ಅವಲ್ ೮೦.೧೪ ಕುಟ್ಟು
ಅವಲ್ ೮೮.೨೬ ಅವಲಕ್ಕಿ
ಅವಸಾನ ೨೨.೧೪ ಕೊನೆ, ಕಡೆಗಾಲ
ಅವುತೆ ೧೧೩.೨೭ ಕವಚ
ಅವ್ವಳಿಸು ೫೨.೨೮ ಮೇಲ್ವಾಯು, ಅಡರು
ಅಶ್ರು ೧೯.೨೫ ಕಣ್ಣೀರು
ಅಸಕಟಿ ೨.೨೧ ಅತಿಕ್ರಮಿಸು
ಅಸಕಳಿ ೧೧೪.೨೯ ಕ್ರಮಗೆಡು
ಅಸಗ ೨೪.೧೬ ಅಗಸ
ಅಸವಸ ೧೧೫.೩ ತ್ವರೆ, ವೇಗ
ಅಸವೆ ೨.೨೧ ಅಸಮ (ಸಂ.)
ಅಸಿ ೨೬.೪ ; ೧೩೬.೨೨ ಕಂಪಿಸು ; ತೂಗಾಡು
ಅಸಿದು ೮೭.೨೭ ಕೃಶವಾದದ್ದು
ಅಸು ೪೬.೮ ಜೀವ
ಅಸುಗೆ ೪೩.೯ ಅಶೋಕ (ಸಂ.)
ಅಸುವೆ ೧೦೩.೪ ಅರೆಯುವ ಕಲ್ಲು

ಅಹಮಹಮಿಕೆ ೧೨೭.೧೮ ನಾನು ಮುಂದು ತಾನು ಮುಂದು ಎಂದು ಬರುವಿಕೆ
ಅಳಜಿ್ ೧೬೦.೨೭ ಭಯಪಡು
ಅಳವಟಿ ೫೯.೫ ಶಕ್ತಿಗುಂದು
ಅಳವಿ ೫೯.೧೮ ಯುದ್ಧ, ಕಾಳಗ
ಅಳವು ೮೭.೧೯ ಅಳತೆ ; ಸಾಮರ್ಥ್ಯ, ಶಕ್ತಿ
ಅಳುಪು ೧೦೬.೧೩ ಲೋಲುಪನಾಗು
ಅಳುರ್ಕೆ ೮೩.೨ ವ್ಯಾಪ್ತಿ
ಅಳೆ ೨೩.೨೩ ಮಜ್ಜಿಗೆ, ಮೊಸರು
ಅಳ್ಕು ೩೪.೪ ಭಯಪಡು
ಅಳ್ಳಿಗೊಂಬು ೫೪.೯ ತೆಳುಗೊಂಬೆ, ಬಳುಕುವ ಕೊಂಬೆ
ಅಳುಂಬಂ ೫೩.೨೬ ಆಧಿಕ್ಯ, ಹೆಚ್ಚು
ಅಟಿಲ್ ೧.೧೫ ; ೧೨.೧೭ ವ್ಯಥೆಪಡು ; ವ್ಯಥೆ
ಅಟಿಬಡಲ್ ೭೪.೩ ಹೀನಮಾನವ
ಅಟಿಗಬ್ಬ ೭.೨೪ ಅಲ್ಪಕಾವ್ಯ
ಅಟಿಗೆಯ್ಮೆ ೩೭.೨೯ ಹೀನಕಾರ್ಯ
ಅಟಿಮೆಯ್ ೪೨.೧ ಪಾಪಶರೀರ
ಅಟಿಯಿಸು ೧೧೬.೧೯ ನಾಶಮಾಡು
ಅಟಿರಕ್ಕಸ ೧೨.೨೫ ನೀಚರಾಕ್ಷಸ
ಅಟಿವಡೆ ೧೧೦.೧೮ ಶೂನ್ಯಪಡೆ
ಅಪ್ಕಾಡು ೯೭.೧೯ ಜೀರ್ಣವಾಗು
ಅಪ್ಕೆ ೧೬೦.೨೪ ವಿಲಾಪ
ಅಟ್ತಿ ೭.೨ ; ೬೪.೧೫ ಆಸಕ್ತಿ ; ಪ್ರೀತಿ
ಅಬ್ದು ೨೨.೨೪ ಅದ್ದು
ಅಬುಂಬ ೪೪.೨೪ ದುಃಖಿಗ
ಅಂಕ ೧೮.೨೪ ತೊಡೆ
ಅಂಕ ೯೧.೧೦ ಕಾಳಗ, ಯುದ್ಧ
ಅಂಕವಜಿವೆ ೭೮.೧೧ ರಣಭೇರಿ
ಅಂಗದ ೫೦.೧೮ ತೋಳಸರಿಗೆ
ಅಂಚೆ ೩೯.೨೭ ಹಂಸೆ
ಅಂಜನ ೧೯.೨೫ ಕಾಡಿಗೆ
ಅಂಜಲಿ ೨೭.೫ ಬೊಗಸೆ
ಅಂಡಲೆ ೨೫.೨೩ ; ೧೧೦.೭ ತೊಂದರೆಪಡು, ಪೀಡನೆಗೊಳಗಾಗು ; ಪೀಡಿಸು

ಅಂತರ್ವತ್ನಿ ೬೪.೨೪ ಗರ್ಭಿಣಿ
ಅಂತರ್ಹಿತ ೧೨೫.೨೦ ಅಂತರ್ಧಾನವಾದ, ಮರೆಯಾದ
ಅಂತವುರ ೩೯.೨೪ ಅಂತಃಪುರ (ಸಂ.)
ಅಂತಾನುಂ ೧೬೭.೧೩ ಹಾಗೆಯೇ
ಅಂಧ ೧೫.೧೯ ಕುರುಡ
ಅಂಬರ ೨೦.೮ ; ೫೦.೩ ಬಟ್ಟೆ. ಆಕಾಶ
ಅಂಬು ೧೨೭.೨೫ ಬಾಣ. ನೀರು

## ಆ

ಆಕೆವಾಳ ೪೭.೬ ಸಾಹಸಿ, ಶೂರ
ಆಗಡೆ ೧೬.೭ ಆಗಲಿ
ಆಗರ ೨೫.೧೪ ಆಶ್ರಯ
ಆಜಿ ೯೭.೧೨ ಯುದ್ಧ
ಆಟಿಸು ೧೩.೩೦ ಇಚ್ಛಿಸು
ಆಟೋಪ ೯೧.೧೬ ಆಡಂಬರ
ಆಡುಂಬೊಲ ೧೫೦.೨೨ ಕ್ರೀಡಾಕ್ಷೇತ್ರ ; ಆಟದ ಬಯಲು
ಆಣತಿ ೧.೩ ಆಜ್ಞಪ್ತಿ (ಸಂ.), ಅಪ್ಪಣೆ
ಆಣಿ ೧೦೩.೨೩ ಮೊಳೆ
ಆಣಿಮುತ್ತು ೭೩.೧೪ ಶುದ್ಧವಾದ ಮುತ್ತು
ಆಣ್ಬರಿಜು ೬೧.೨೩ ಪುರುಷರೂಪು
ಆಣ್ಮ ೫೭.೩ ಒಡೆಯ, ಸ್ವಾಮಿ
ಆದಪಗೆ ೫೭.೨೨ ಬದ್ಧವೈರ
ಆದಂ ೨೪.೨೮ ಹೆಚ್ಚಾಗಿ
ಆಧಿ ವ್ಯಾಧಿ ೬೬.೧೯ ಚಿಂತೆ ಮತ್ತು ರೋಗ
ಆನತೆ ೪೨.೪ ಬಾಗಿದವಳು
ಆನ್ ೯೧.೧ ಸಂಧಿಸು
ಆಪ್ತಿ ೧೪೦.೧೯ ಅವಾಪ್ತಿ, ಪ್ರಾಪ್ತಿ
ಆಯ ೧೩೭.೪ ಪ್ರಮಾಣ
ಆಯತಿ ೮೫.೨೮ ಸಾಧನ; ೯೩.೨೬ ಗಾಂಭೀರ್ಯ, ಉನ್ನತಿ; ೧೩೬.೮ ಶಕ್ತಿ, ಪರಾಕ್ರಮ; ೧೪೪.೯, ೧೫೨.೫ ವಿಸ್ತಾರ
ಆಯಸ ೮೬.೩ ಆಯಾಸ
ಆರಕ್ತ ೨೩.೧೩ ಕೆಂಪಾದ
ಆರಯ್ ೧.೧೯ ; ೬೦.೭ ವಿಚಾರಿಸು; ಪರೀಕ್ಷಿಸು ; ೧೭.೨೩ ಪೋಷಿಸು
ಆರವ ೭.೧೭ ಆರಾಮ (ಸಂ.), ಉಪವನ
ಆರೋಗಣೆ ೫೨.೬ ಊಟ
ಆರ್ ೭೯.೨೫ ಕೂಗು
ಆರ್ತೆ ೩೩.೩೦ ಪೀಡಿತೆ
ಆಱಡಿ ೮.೨ ದುಂಬಿ. ಹೇಯವಾದ ಕೃತ್ಯ, ಅಪವಾದ
ಆಱಾಟ ೩.೧೯ ಚಿಂತೆ
ಆಱು ೯೭.೧೯ ಬತ್ತು
ಆಱ್ ೬.೯ ಸಮರ್ಥನಾಗು
ಆಲಿ ೧೩೯.೩ ಕಣ್ಣು
ಆಲೆ ೧೦೫.೨೪ ಗಾಣ
ಆಲಂಬಾಲಕ ೧೫೦.೨೯ ಜೋಲುವ ಮುಂಗೂದಲು
ಆವರ್ತ ೧೪೦.೨ ಸುಳಿ
ಆವಾಸ ೬೬.೨೯ ನಿವಾಸ, ಮನೆ
ಆವಿಗೆ ೭೨.೨೫ ಹಾವಗೆ, ಒಲೆ
ಆವು ೩೫.೨೯ ಗೋವು
ಆವುಗೆ ೪೮.೧೬ ಪಾದುಕೆ (ಸಂ.), ಹಾವುಗೆ
ಆಶಾಧಿಪರ್ ೫೫.೧೮ ದಿಕ್ಕುಗಳೊಡೆಯರು
ಆಸಡಿ ೫೩.೩ ಆಷಾಢ (ಸಂ.)
ಆಸಿಕ್ತ ೩೪.೧೮ ನೆನೆದ
ಆಸ್ಕಂದಿತ ೪೯.೨೭ ಕುದುರೆಯ ನಡೆ
ಆಹವ ೧೬೧.೩ (ಮಲ್ಲ) ಯುದ್ಧ
ಆಳ್ತನ ೫೭.೨೩ ಶೌರ್ಯ, ಪೌರುಷ
ಆಳ್ ೧.೫ ಆಳು, ಪುರುಷ
ಆಳ್ ೬೧.೧೨ ಆಳು, ಅಧಿಕಾರಮಾಡು
ಆಟಿ ೧೧೧.೧೨ ವಂಚನೆ, ತಂತ್ರ
ಆಂಕೆ ೧೦೮.೧೧ ಧಾರಣ, ಆಧಾರ
ಆಂಗುಲಿ ೧೩೭.೨೨ ಪಶುಘಾತಕ

## ಇ

ಇಕ್ಕು ೮೪.೧೩ ಹೊಡೆ, ಕೊಲ್ಲು
ಇಕ್ಕೆ ೭೩.೨೨ ಹಕ್ಕೆ, ನೆಲೆ

ಇಚ್ಛೆಗಾರ ೫೧.೯ ಮನ್ಮಥ

ಇಚ್ಛೆಗಾರ್ತಿ ೫೩.೧೩ ರತಿ

ಇಟ್ಟಣಿಸು ೨.೧೯ ದಟ್ಟವಾಗು

ಇಟ್ಟಿ ೯೪.೮ ಯಷ್ಟಿ (ಸಂ.), ಈಟಿ

ಇಡಿಕಿಱಿ ೨೩.೭ ದಟ್ಟವಾಗು

ಇಡಿಕು ೮೪.೪ ಒತ್ತಾಗಿ ಸೇರು

ಇಡು ೮೪.೧೨ ಹೊಡೆ

ಇದಿರ್ಚು ೪೦.೧೮ ಎದುರಿಸು

ಇನಿಗಾಲ ೭೪.೨೯ ಇನಿತುಕಾಲ

ಇನಿಯ ೨೨.೬ ಪ್ರಿಯ

ಇಮ್ಮಾವು ೫೩.೧೩ ಸಿಹಿಯಾದ ಮಾವು

ಇರುಳ್ಗಣ್ಣ ೮೯.೨೫ ಚಂದ್ರ

ಇರ್ಕುಟಿ ೧೦೩.೧೯ ಇಕ್ಕುಳ

ಇರ್ಕುಳಿಗೊಳ್ ೪೯.೨೩ ಸೆಳೆ, ಆಕರ್ಷಿಸು

ಇರ್ಕೆ ೧.೧೧ ನೆಲೆ

ಇರ್ಚಾಸಿರ ೮.೩ ಎರಡು ಸಾವಿರ

ಇಪ್ಪೆನಾರ್ ೪೩.೧೬ ಇಪ್ಪೆನಾರು

ಇಱಿ ೧೪೪.೪ ಇರಿ, ಘಾತಿಸು, ಹೊಡೆ

ಇಱುಂಬು ೪೧.೩೦ ಇಕ್ಕಟ್ಟು

ಇಲಿದೇರ ೮೮.೨೧ ಗಣೇಶ

ಇಸುಗೆ ೧೪೩.೬ ಬಾಣಪ್ರಯೋಗ

ಇೞಿ ೯೭.೧೫; ೧೦೫.೨೩ ಇಳಿ, ಅಸ್ತ ಹೊಂದು. ಕುಂದು

ಇೞಿಕೆಯ್ ೧೬೪.೧ ಕೀಳುಮಾಡು, ಕಡೆಗಣಿಸು

ಇೞಿನೇಹ ೭.೨೫ ಕುಂದುವ ಸ್ನೇಹ. ಕೊರೆಯಾಗುವ ಎಣ್ಣೆ

ಇೞು ೭೫.೬ ತಗ್ಗು. ಇಳಿತ

ಇಂದ್ರಚಾಪ ೩೯.೨೯ ಕಾಮನ ಬಿಲ್ಲು

ಇಂದ್ರಾರಿ ೧೬೦.೨೬ ಇಂದ್ರಜಿತ್

ಇಂದ್ರಾಶ್ಮ ೫೩.೧೭ ಚಂದ್ರಕಾಂತ ಶಿಲೆ

ಇಂಬನಿ ೧೦೦.೩೦ ಇನಿದಾದ ಹನಿ

ಇಂಬಿಡಿ ೫೩.೯ ಶೇಖರಿಸು

ಇಂಬು ೩.೧೧ ಆಶ್ರಯ, ನೆಲೆ

ಇಂಬೊಸರ್ ೫೩.೪ ಸಿಹಿನೀರಿನ ಬುಗ್ಗೆ

## ಈ

ಈ ೪.೧೩ ಕೊಡು

ಈಡು ೧೧೩.೨೨ ಗುರಿ

ಈರೆಣ್ಬರ್ ೧೬೬.೪ ೧೬ ಮಂದಿ

ಈರೇೞ್ಗಾಲ ೨೯.೧೩ ೧೪ ವರ್ಷ

ಈಸು ೫೦.೨೩; ೯೪.೧೪ ಈಷೆ (ಸಂ.), ನೊಗದ ದಿಂಡು

ಈಸು ೧೧೧.೧೧ ಈಜು

ಈಳೆ ೩೦.೧೬ ಕಿತ್ತಿಳೆ

ಈೞ್ ೨೭.೧೫ ಸೆಳೆ

ಈಂಟು ೯.೧೯ ಕುಡಿ

## ಉ

ಉಕ್ಕಂದ ೧೨೯.೨೨ ಸಮೃದ್ಧಿ

ಉಕ್ಕೆವ ೫೬.೨೪ ಉತ್ಸವ (ಸಂ.)

ಉಗಿ ೫೨.೧೫ ಸುಲಿ

ಉಗಿಬಗಿಮಾಡು ೫೬.೧೬ ಛಿದ್ರಮಾಡು

ಉಗು ೩೬.೮ ಎಸೆ, ತೋರು

ಉಗ್ಗಡ ೧೨೫.೧೦ ಆಧಿಕ್ಯ, ಹೆಚ್ಚಿಕೆ

ಉತ್ಕಟ ೩೧.೨೧ ಹೆಚ್ಚಾದ

ಉತ್ಕಂಠ ೨೮.೪ ಅತಿ ಔತ್ಸುಕ್ಯ

ಉತ್ತಮಾಂಗ ೧೨೬.೨೮ ಶಿರಸ್ಸು

ಉತ್ತರಿಗೆ ೧೧೭.೨೪ ಉತ್ತರೀಯಕ (ಸಂ.), ಮೇಲುವಸ್ತ್ರ

ಉತ್ಪಾತ ೬೬.೧೧ ಅವಶಕುನದ ಅದ್ಭುತ ಘಟನೆ

ಉದ್ಗಾತೃ ೪೬.೨೬ ಯಜ್ಞದಲ್ಲಿ ಸಾಮಗಾನ ಹೇಳುವ ಪುರೋಹಿತ

ಉದ್ಧೂಲಿತ ೪೦.೧೮ ಲೇಪಿಸಲ್ಪಟ್ಟ

ಉಪಟಳ ೧೪.೬ ಉಪದ್ರ (ಸಂ.), ತೊಂದರೆ

ಉಪ್ಪಯಣ ೧೪೭.೨೧ ಪಯಣವನ್ನು ನಿಲ್ಲಿಸುವುದು

ಉಪ್ಪವಡಿಸು ೨೭.೧ ಏಳು

ಉಬ್ಬಟೆ ೧೧೧.೨೨ ಉಬ್ಬರ

ಉಬ್ಬೆಗ ೧೪.೨೫ ಉದ್ವೇಗ (ಸಂ.), ಉಮ್ಮಳ

ಉಗ್ಗಡಣೆ ೫೦.೮ ರಣಘೋಷ
ಉಜ್ಜಳ ೧೧೫.೫ ಉಜ್ಜ್ವಲ (ಸಂ.), ಪ್ರಕಾಶಮಾನವಾದ
ಉಜ್ಜುಗ ೨೩.೩ ಉದ್ಯೋಗ (ಸಂ.)
ಉಟಜ ೪೩.೨೧ ಎಲೆವನೆ
ಉಟ್ಟ ೪೮.೧೬ ಪಂಚೆ
ಉಡಿ ೧೪.೨೯ ತುಂಡಾಗು, ಮುರಿ
ಉಡು ೮೪.೧೭ ಉಡ
ಉಡೆ ೫೬.೧೩ ಉಡಿಗೆ
ಉಡೆನೇಣ್ ೪೮.೨೭ ಕಟಿಸೂತ್ರ, ಡಾಬು
ಉಣ್ಮು ೬೦.೧೩ ಸೂಸು, ಉಂಟಾಗು
ಉಬ್ಬೆಮೆ ೮೭.೧೦ ಉದ್ಭ್ರಮೆ (ಸಂ.), ಗಾಬರಿ
ಉಮ್ಮಹ ೧೩೪.೧೦ ಉಮ್ಮಳ, ಕಳವಳ
ಉಯ್ ೬೪.೨ ಒಯ್ಯು
ಉರ ೧೧೫.೨೯ ಸಾಹಸ
ಉರಗ ೫೨.೫ ಸರ್ಪ
ಉರವಣೆ ೭೨.೧೩ ಉರುಬು, ರಭಸ
ಉರ್ಕು ೫೧.೧೯ ಉಕ್ಕು, ಔದ್ಧತ್ಯ
ಉರ್ಚು ೩.೨೩ ಉಚ್ಚು, ಉಳುಚು
ಉರ್ದು ೪೩.೨೬ ಉಜ್ಜು
ಉರ್ವ ೧೧೧.೫ ಉಬ್ಬುವ
ಉಱು ೮೦.೧ ನಿಲ್ಲು
ಉಱುಗು ೧೧೨.೨೯ ಬಾಗು
ಉಱುಬು ೯೦.೨೮ ವೇಗ, ಬಿರುಸು
ಉಲಿ ೪೭.೬ ಕೂಗು, ಧ್ವನಿಮಾಡು
ಉಲ್ಕಾಪಾತ ೬೬.೮ ಆಕಾಶದಿಂದ ನಕ್ಷತ್ರ ಬೀಳುವುದು
ಉಸಿಕನೆ ೧೪೪.೧೩ ಸುಮ್ಮನೆ, ಮೌನವಾಗಿ
ಉಸಿರ್ ೬.೧೭ ಉಸಿರು, ಹೇಳು
ಉಳ್ಕು ೩೩.೨೭ ಉಳುಕು
ಉಳ್ಳಲರ್ ೧೧.೨೧ ಚೆನ್ನಾಗಿ ಅರಳಿದ ಹೂ
ಉೞ ೬೭.೧೯ ಇರು, ಜೀವಿಸು
ಉೞಗ ೨.೧೫ ಶಕುನದ ಹಕ್ಕಿ
ಉೞವಿಡು ೩೮.೨೪ ಉಳಿದುಬಿಡು
ಉಂಡಿಗೆ ೯೨.೧ ಉಚಿತವಾದ ರಹದಾರಿ

## ಊ

ಊಡು ೯.೧೬ ಬೆರಸು
ಊಣೆಯ ೩೦.೭ ಕೊರತೆ
ಊರಾನೆ ೯೨.೨೯ ಹಂದಿ
ಊರಾಳ್ ೫೧.೧೩ ಗ್ರಾಮರಕ್ಷಕ
ಊಳ್ ೨೫.೨೧ ಕೂಗು
ಊೞಗ ೯.೪ ಸೇವೆಯ ಕೆಲಸ

## ಋ

ಋತ್ವಿಜ ೪೬.೨೬ ಯಜ್ಞಮಾಡುವವ

## ಎ

ಎಕ್ಕಟಿ ೧೧೮.೧೯ ಏಕಾಂತ
ಎಕ್ಕತುಳ ೯೦.೧೩ ಏಕತುಲ (ಸಂ.), ಪೂರ್ಣಬಲ
ಎಕ್ಕಲ ೪೩.೨೮ ಹಂದಿ, ಕಾಡುಹಂದಿ
ಎಕ್ಕಸರ ೨೦.೧೬ ಒಂಟೆಳೆಯ ಮುತ್ತಿನ ಹಾರ
ಎಕ್ಕೆಕ್ಕೆ ೯೦.೧೩ ಒಂದರಮೇಲೊಂದು
ಎಗ್ಗ ೧೪.೧೩ ದಡ್ಡ, ಮೂಢ
ಎಚ್ಚು ೧೫೪.೨ ಹೊಡೆದು (ಧಾ.-ಇಸು= ಬಾಣಹೊಡೆ)
ಎಡರ್ ೭೫.೯ ವಿಘ್ನ
ಎಡರ್ಗೇಡಿ ೮೮.೧೯ ವಿಘ್ನರಾಜ
ಎಡೆ ೫೫.೩೦ ಆಹಾರ (ಬಲಿ)
ಎಡೆಗೆಡೆ ೭೦.೨೭ ನೆಲಕ್ಕೆ ಬೀಳು, ನಮಸ್ಕರಿಸು
ಎಡೆಯಾಡು ೭೪.೧೪ ಸುತ್ತಾಡು
ಎಡಂಮಾಡು ೧೩೯.೧೧ ಕೀಳ್ಗಣಿಸು
ಎಡ್ಡ ೩.೬ ಮನೋಹರ
ಎಣೆ ೮೮.೭ ಸಮಾನ
ಎಣ್ ೭೫.೩ ಚಿಂತಿಸು, ಬಯಸು
ಎಣ್ಬರ್ ೪೦.೨೬ ಎಂಟುಮಂದಿ

ಎಮೆ ೪೦.೨೧ ರೆಪ್ಪೆ
ಎರಲೆ ೮೪.೭ ಜಿಂಕೆ
ಎರೆ ೧೦೬.೨೬ ಬೇಡು
ಎರೆ ೧೬೧.೩ ತಿರ್ಯಕ್ಜಂತುಗಳ ಆಹಾರ. ಎರೆಹುಳು.
ಎರ್ದೆವಡಿ ೯೮.೮ ಹೃದಯಕವಾಟ
ಎಱಕ ೨೧.೨೦ ಪ್ರೇಮ
ಎಱಗು ೩೪.೯ ಮೇಲೆಬೀಳು, ಎರಗು
ಎಱತಿ ೧೫೫.೧೦ ರತಿ ; ಪತ್ನಿ
ಎಱೆ ೧೦೩.೨೪ ಎರಕಹೊಯ್ಯು
ಎಱೆಯ ೧.೧೯ ಒಡೆಯ, ಸ್ವಾಮಿ, ಪ್ರಿಯ
ಎಱೆವೆಟ್ಟು ೧೩೮.೨೩ ಪ್ರಮುಖ ಪರ್ವತ
ಎಱಂಕೆ ೪.೧ ರೆಕ್ಕೆ
ಎಲರ್ ೯.೧೬ ಗಾಳಿ
ಎಲರುಣಿ ೧೩೧.೧೬ ಸರ್ಪ
ಎಸಕ ೩೯.೨೩ ಕೆಲಸ, ಕಾರ್ಯ
ಎಳಮೆ (ವೆ) ೩೬.೫ ಬಾಲ್ಯ
ಎಳವರೆಯ ೧೮.೧೦ ಎಳೆಯ ಪ್ರಾಯ
ಎಳೆ ೭.೩ ಇಳಾ (ಸಂ.), ಭೂಮಿ
ಎಬ್ಬಟ್ಟು ೬೩.೧ ಬೆನ್ನಟ್ಟು, ಓಡಿಸು
ಎಬ್ಬು ೧೦೯.೧೯ ಎತ್ತು

## ಏ

ಏಗಳುಂ ೧೧.೨೪ ಯಾವಾಗಲೂ
ಏಡಿಸು ೧೮.೫ ಅಣಕಿಸು
ಏಱು ೧೩.೬ ಹತ್ತು
ಏಱುಗೊಳ್ ೮೫.೧೮ ಗಾಯಗೊಳ್ಳು
ಏಱುಂ ೮.೨೧ ಎತ್ತರವಾಗಿ
ಏಱುಂಬೆಱೆ ೬೫.೧೫ ವರ್ಧಿಸುವ ಚಂದ್ರ
ಏವರ್ ೧.೧೫ ಏನುಮಾಡುವರು
ಏವಂದಳ್ ೫೫.೮ ಏತಕ್ಕೆ ಬಂದಳು
ಏಸಾಡು ೯೧.೨೭ ಬಾಣವನ್ನು ಎಸೆ
ಏಳಿಸು ೨೪.೨೮ ಏಡಿಸು, ಹೀಯಾಳಿಸು
ಏೞುಂಮೆಯ್ ೧೩.೪ ಏಳು ಜನ್ಮ
ಏತ್ತರ ೪೫.೧೧ ಎತ್ತರ, ಹೆಚ್ಚಳ

## ಐ

ಐಕಿಲ್ ೭೫.೨೧ ಹಿಮ
ಐದಿವರು ೧೫೪.೭ ಸಮೀಪಕ್ಕೆ ಬರು
ಐದೆ ೧೫.೨೧ ಸುಮಂಗಲಿ. ವಿಶೇಷವಾಗಿ
ಐದೆದಾಳಿ ೧೧೯.೧೫ ಮಾಂಗಲ್ಯ
ಐಸಿರಿ ೧೨.೫ ಐಶ್ವರ್ಯ
ಐಸೆ ೯.೨೬ ಅಷ್ಟೆ, ಅಲ್ಲವೆ

## ಒ

ಒಕ್ ೭೩.೧೪ ಎಸೆ
ಒಕ್ಕಲಿಕ್ಕು ೯೦.೨೫ ಬಡಿದುಹಾಕು, ನಾಶಮಾಡು
ಒಗತನ ೭೮.೬ (ಮಾಯಾ) ಸಂಸಾರ
ಒಗೆ ೮೮.೫ ಹುಟ್ಟು, ಉಂಟಾಗು
ಒಗೆತನ ೭೭.೨೩ ಅನ್ಯೋನ್ಯವಾದ ಸಂಸಾರ
ಒಗೆತರ್ ೬೫.೨; ೧೦೦.೨೧ ಹುಟ್ಟಿಬರು
ಒಗ್ಗರ ೭೭.೧ ಸಮೂಹ
ಒಗ್ಗರಿಸು ೧೩೪.೧೩ ಒಗ್ಗರಣೆ ಹಾಕು
ಒಗ್ಗು ೧೮.೧೪ ಉಗ್ಗು, ವಕ್ರವಾಗು
ಒಗ್ಗು ೯೭.೧೫ ಸಮೂಹ
ಒಗ್ಗು ೧೬೩.೨ ; ವಶವಾಗು
ಒಚ್ಚತ ೨೩.೭ ; ೪೦.೨೧ ; ೬೦.೧೨ ಸಂತೋಷ ; ಮನೋಹರ ; ಹಿತ
ಒಚ್ಚೀರೆಗಣ್ ೫೫.೨೭ ಬೊಗಸೆಗಣ್ಣು
ಒಟ್ಟಜ ೯೪.೮ ಸಮೂಹ
ಒಟ್ಟಿಲ್ ೩೧.೨೫ ರಾಶಿ
ಒಟ್ಟಸು ೫೨.೧೬ ರಾಶಿಮಾಡು
ಒಟ್ಟೆ ೧೦೯.೧೯ ಉಷ್ಟ್ರ (ಸಂ.), ಒಂಟೆ
ಒಡರ್ ೧೫.೧ ; ೭೭.೧೨ ಒದಗು, ಉಂಟಾಗು
ಒಡರ್ಚ ೧೦.೧೭ ; ೬೮.೧೩ ಕೈಗೊಳ್ಳು, ಪ್ರಯತ್ನಿಸು
ಒಡಲಿಚ ೧೦೧.೨೬ ಮನ್ಮಥ
ಒಡಲೋಡ ೭೬.೨ ಒಡಲದೋಣಿ
ಒಡೆಮುಱು ೯೨.೧೪ ಚೂರಾಗುವಂತೆ ಸೀಳು

## ಓ



## ಔ



## ಕ

ಕಟ್ಟಚ್ಚು ೭೧.೨೦ ಬಲು ಪ್ರೀತಿ
ಕಟಾಕ್ಷ ೨೯.೯ ಕಡೆಗಣ್ಣು
ಕಟ್ಟಾಯ ೮೪.೨೬; ೧೩೪.೧೮ ಕಠಿನ ನಿಯಮ ; ವಿಧಿವತ್ತು
ಕಟ್ಟಾಯಸ ೬೨.೫ ಬಲುಬಳಲಿಕೆ
ಕಟ್ಟಾಸುರ ೧.೯ ; ೧೧೨.೨೩ ಅತ್ಯುತ್ಕಟ, ಪ್ರಚಂಡ
ಕಟ್ಟಿಸುಗೆ ೧೫೭.೧೪ ಅಧಿಕವಾದ ಬಾಣ ಪ್ರಯೋಗ
ಕಟ್ಟುಬ್ಬರ ೧.೬ ಅತಿರಭಸ
ಕಟ್ಟುರ (ಱ) ೫೯.೬ ವಿಶೇಷವಾದ ಉರುಬು
ಕಟ್ಟೆಱಕ ೯೬.೧೩ ಕಡುಪ್ರೀತಿ
ಕಡಂಗು ೯೧.೬ ಹುರುಪುಗೊಳ್ಳು
ಕಡವರ ೬೯.೧೭ ಚಿನ್ನ
ಕಡವೆ ೪೨.೨೭ ಕಡ, ಜಿಂಕೆ
ಕಡ್ಡಣ ೧೩೧.೮ ಜಡೆ
ಕಡಿಕಂಡ ೭೨.೨೪ ಕತ್ತರಿಸಿದ ತುಂಡು
ಕಡಿಕಂಡ ೯೭.೧೪ ಕಡಿದ ಖಂಡ (ಮಾಂಸ)
ಕಡುಕೆಯ್ ೯೨.೨೫ ಅವಸರಿಸು, ತ್ವರೆ ಮಾಡು
ಕಡುಗೆಡೆ ೩೬.೧೨ ಅತಿಶಯವಾದ ಸ್ನೇಹ
ಕಡುಪು ೭೯.೯ ಬಲ
ಕಡೆಗಣ್ಮು ೭೫.೧೮ ಶಕ್ತಿಗುಂದು
ಕಣ ೧೪೫.೩೦ ರಣರಂಗ
ಕಣಿ ೨೫.೧೫ ಖನಿ (ಸಂ.), ಗಣಿ
ಕಣೆ ೧೦೨.೨೪ ಬಾಣ
ಕಣ್ಗಿಡು ೧೩೦.೬ ಕಂಗೆಡು
ಕಣ್ಣಿಲಿ ೧೪೮.೫ ಕಣ್ಣಿಲ್ಲದ
ಕಣ್ಮುಗಿ ೫೪.೯ ಕಣ್ಮುಚ್ಚು
ಕಣ್ಣೊಳೆ ಬೆಳಗಪ್ಪುದುಂ ೨೭.೨೦ ಯೋಚನೆಯಲ್ಲಿಯೆ ಬೆಳಗಾಗಲು
ಕಣ್ಬೊಲ ೧೫೧.೨೨ ಕಣ್ಣಿಗೆ ಕಾಣುವಷ್ಟು ಪ್ರದೇಶ
ಕಂಠರುತಿ ೬೦.೧೩ ಕಂಠಧ್ವನಿ
ಕಂಠೀರವ ೨೮.೧೩ ಸಿಂಹ
ಕಂಡರಸು ೧೯.೧೦ ; ೫೨.೧೭ ಕೆತ್ತು ; ಕಡೆ
ಕತ ೨.೧೧ ಕಾರಣ, ವ್ಯಾಜ
ಕತಿಪಯ ೧.೧೮ ಕೆಲವು
ಕತ್ತರಿಗಂಡಿ ೮೪.೫ ಮೃಗಗಳು ಬೇಟೆಕಾರರ ಈಡಿಗೆ ಸಿಕ್ಕಿಹಾಕಿಕೊಳ್ಳುವ ಸ್ಥಳ
ಕತ್ತಿದ ಕಡಿ ೧೩೦.೧೩ ಕತ್ತರಿಸಿದ ಭಾಗ
ಕದಕ್ಕದಿಸು ೨೬.೫ ಕಂಪಿಸು, ಅದಿರು
ಕದನ್ನ ೨೩.೨೨ ಕೀಳಾದ ಆಹಾರ
ಕದಂಪು ೧೯.೨೬ ಕದಪು, ಕೆನ್ನೆ
ಕದಿರ್ ೭.೧೭ ; ೧೦೧.೨೧ ಕಿರಣ. ಧಾನ್ಯದ ತೆನೆ
ಕನರ್ ಸೋನೆ ೫೪.೯ ಒಗರು ಹನಿ
ಕನಲ್ ೧೦೦.೧೬ ಕೋಪಿಸು
ಕನ್ನವುರ ೧೨೩.೧೩ ಕರ್ಣಪೂರ (ಸಂ.), ಕಿವಿಯ ಆಭರಣ
ಕನ್ನೆವಾಡ ೧೭.೨೯ ಅಂತಃಪುರ
ಕಂತುಕ ೫೩.೧೭ ಕಂದುಕ (ಸಂ.), ಕಂದುಗ, ಚೆಂಡು
ಕಂದಲ್ ೯.೧೭ ನೀರಿನ ಪಾತ್ರೆ
ಕಂದು ೨.೨೧ ಗಂಧದ ಕಲ್ಲು
ಕಂದು ೧೧.೧೫ ಬಣ್ಣಗುಂದು, ಕಾಂತಿಹೀನತೆ
ಕಂದುಗೊರಲ ೧೩೧.೧೧ ನೀಲಕಂಠ
ಕಪರ್ದಿ ೧೨೫.೧೮ ಈಶ್ವರ
ಕಪರ್ದ ೧೩೯.೮ ಶಿವನ ಜಟೆ
ಕಪ್ಪಡ ೫೬.೧೩ ಕರ್ಪಟ (ಸಂ.), ವಸ್ತ್ರ
ಕಬರೀಭರ ೯.೧೦ ಹೊರವಾದ ತುರುಬು
ಕಬ್ಬ ೫.೨೪ ಕಾವ್ಯ
ಕಬ್ಬಿಗ ೪.೭ ಕವಿ
ಕಮಠ ೧೩೧.೨೫ ಆಮೆ
ಕಮನೀಯ ೧೨೪.೨೭ ಮನೋಹರವಾದ
ಕಮ್ಮಲರ್ ೫೬.೨೬ ಪರಿಮಳಿಸುವ ಹೂ
ಕಮ್ಮೆಲರ್ ೬೦.೨೪ ಸೌರಭಯುತವಾದ ಗಾಳಿ

ಕಂಬಚ್ಚು ೧೦೩.೨೦ ಸರಿಗೆಗಳನ್ನು ಸಪುರ ಮಾಡಲು ಉಪಯೋಗಿಸುವ ರಂಧ್ರದ ಅಚ್ಚು
ಕಂಬಿ ೧೨೧.೧೮ ಕಟ್ಟಿಗೆ, ಆಜ್ಞಾದಂಡ
ಕಂಬು ಕಂಧರ ೧೨೧.೧೭ ಶಂಕದಂಥ ಕೊರಳುಳ್ಳ
ಕಯ್ಯೀ ೧೩.೩೦ ಸಹಾಯವಾಗು
ಕರಕರಿಸು ೯೯.೧೨ ನೋಯಿಸು
ಕರಡ ೧೫೭.೧೭ ಕಡ್ಡಿ, ಒಣಹುಲ್ಲು
ಕರಪುಷ್ಕರ ೪೩.೨೩ ಸೊಂಡಿಲ ತುದಿ
ಕರವತಿಗೆ ೭೫.೨೩ ಕಮಂಡಲು (?)
ಕರಸಂಪುಟ ೧೦೫.೨ ಜೋಡಿಸಿದ ಕೈ
ಕರಿಮುರಿವೋ ೬೫.೪ ಕರಿಯಾಗಿ ಮುದುಡಿ ಹೋಗು
ಕರುವಿಡು ೬೯.೧೭ ಎರಕಹೊಯ್ಯು
ಕರೆಗಣ್ಮು ೮೧.೧೪ ಅತಿಕ್ರಮಿಸು
ಕರ್ಗಲ್ ೭೯.೨೯ ಕಪ್ಪುಕಲ್ಲು, ಸಾಲಿಗ್ರಾಮ
ಕರ್ಣಕೋಟರ ೩೫.೭ ಕಿವಿಯ ರಂಧ್ರ
ಕರ್ದುಂಕು ೨೩.೧೪ ಕೊಕ್ಕಿನಿಂದ ಕುಕ್ಕು
ಕರ್ಪು ೮೪.೩ ಕಪ್ಪು, ಮೃಗಗಳನ್ನು ಬೀಳಿಸುವ ತೋಡು
ಕರ್ಮಡು ೩.೧೯ ಆಳವಾದ ಮಡು
ಕರ್ಮಣಿ ೬.೧೫ ಕರಿಮಣಿ
ಕರ್ಮರ ೬೮.೪ ದಟ್ಟವಾದ ಮರ
ಕರ್ವೊನ್ ೧೦೩.೧೧ ಕಬ್ಬಿಣ; ಕುಳ
ಕರಂ ೨.೨೯ ಹೆಚ್ಚಾಗಿ
ಕರಂಗು ೮೦.೧೯ ಕರಗು
ಕರಂಡ ೨೯.೧೮ ಕರಂಡಕ (ಸಂ.), ಪೆಟ್ಟಿಗೆ
ಕಱುತ್ತು ೭೫.೭ ಕೋಪಿಸಿ
ಕಱೆ ೨೬.೮ ಕಳಂಕ
ಕಱಂಗು ೫೩.೧೮ ಕಪ್ಪಾಗು
ಕಲ್ಪಾಂಘ್ರಿ ೨೦.೨೦ ಕಲ್ಪವೃಕ್ಷ
ಕಲನಾದ ೧೬.೧೬ ಇಂಪಾದ ಧ್ವನಿ
ಕಲಿ ೯೫.೨ ವೀರ
ಕಲ್ಲಾಯ್ತ ೮೭.೨೫ ಕಲಿಸುವವ, ಗುರು
ಕವಡು ೧೪.೩ ಕಪಟ (ಸಂ.)
ಕವರ್ ೪೩.೨ ಸುಲಿ; ಸೆಳೆ
ಕವಿ ೧೨.೭ ಶುಕ್ರ
ಕವಿಲೆದುಱು ೩೮.೨೫ ಕೌಲುದನ
ಕವೋಷ್ಣ ೨೦.೧೪ ಬೆಚ್ಚನೆ
ಕವ್ಯ ೧೧೯.೨೪ ಪಿತೃಗಳಿಗೆ ಅರ್ಪಿಸುವ ಬಲಿ
ಕಸೆಗೋಲು ೨೯.೨೯ ಬಾರುಕೋಲು
ಕಂಸಾಳ ೭೮.೧೯ ಕಾಂಸ್ಯತಾಲ (ಸಂ.), ಕಂಚಿನ ತಾಳ
ಕಳ ೧೧೩.೭೫ ಕಣ; ರಣಾಂಗಣ. ಖಲ, ದುಷ್ಟ
ಕಳಕಂಠ ೧೬.೧೫ ಕೋಗಿಲೆ
ಕಳಭ ೩.೨೦ ಮರಿಯಾನೆ
ಕಳಿಕೆ ೧೧೪.೨೨ ಪಕ್ವತೆ
ಕಳಿಂದಜೆ ೫೨.೨೧ ಕಾಳಿಂದಿ, ಯಮುನಾನದಿ
ಕಳೆ ೧೫೧.೧೮ ಚಂದ್ರನ ಕಲೆಗಳು. ವಿದ್ಯೆ
ಕಳೇಬರ ೩೨.೧ ದೇಹ
ಕಳ್ ೫೬.೨ ಮದ್ಯ; ಸೋಮರಸ
ಕೞಲ್ ೨೦.೮ ಕಾಲಂದುಗೆ
ಕೞಲ್ ೯೧.೨೮ ಶಿಥಿಲವಾಗು, ಕಳಚು
ಕೞವೆ ೩೦.೧೬ ಕಲಮ (ಸಂ.), ಭತ್ತ
ಕೞಿ ೬೭.೧೯ ಸಾಯಿ
ಕೞಿ ೧೧೪.೨೩ ದೂರ ಹೋಗು
ಕೞಿಲೆ ೨೪.೨೩ ಬಿದಿರ ಮೊಳಕೆ
ಕೞಿವಣ್ ೫೪.೮ ಕಳಿತಹಣ್ಣು
ಕೞ್ಕನೆ ೮೦.೧ ಗಕ್ಕನೆ, ಆಕಸ್ಮಿಕವಾಗಿ
ಕೞ್ಗು ೮೪.೧೭ ಕಪ್ಪಾಗು
ಕಾಂಗು ೧೦೩.೧೪ ಕಾಗು, ಕಡುನೀಲಿಯ ಬಣ್ಣ
ಕಾಂಚನ ೬೫.೨೨ ಚಿನ್ನ
ಕಾಂಚೀದಾಮ ೭೪.೧೮ ಡಾಬು
ಕಾಡಾಡಿ ೬೦.೩ ವನಚರ
ಕಾತ ೫೨.೨ ಕಾಯಿಬಿಟ್ಟ
ಕಾದಲೆ ೫೩.೨೮ ಪ್ರಿಯೆ
ಕಾದಲ್ಮೆ ೪೯.೨೩ ಪ್ರೀತಿ

ಕಾಪಥ ೩೩.೪ ಸುಗಮವಲ್ಲದ ದಾರಿ
ಕಾಪು ೧೫.೧೫ ಕಾವಲು, ರಕ್ಷಣೆ
ಕಾಮುಕರ ೮೦.೧೯ ಗರ್ವ
ಕಾಯ್ಪು ೩.೧೮ ಕಾವು, ಕೋಪ
ಕಾರಡವಿ ೩೨.೧೪ ದಟ್ಟವಾದ ಅಡವಿ
ಕಾರೊಡಲ್ ೯೪.೯ ಕಪ್ಪು ಶರೀರ
ಕಾರ್ ೧.೭ ಮಳೆಗಾಲ, ವರ್ಷಾಕಾಲ
ಕಾಲಕೂಟ ೧೦.೨೦ ಮಹಾವಿಷ
ಕಾಲಧರ್ಮ ೭೯.೧೬ ಮೃತ್ಯು, ಸಾವು
ಕಾಲನೇಮಿ ೧೪೦.೨೯ ಒಬ್ಬ ರಾಕ್ಷಸ
ಕಾಲುರಿಚ ೮.೪ ಹಳ್ಳಿಯವನು
ಕಾಲ್ ೮.೧೨ ಕಾಲು ; ಕಾಲುವೆ
ಕಾಲ್ಯ ೨೭.೪ ಆಯಾ ಕಾಲದಲ್ಲಿ ಮಾಡಬೇಕಾದ ಕರ್ಮ
ಕಾಲ್ವಾಯ್ ೧೨೨.೧೪ ಕಾಲುವೆಯ ಪ್ರವಾಹ
ಕಾವ ೮.೨೩ ಕಾಮ
ಕಾವ ೬೫.೧೧ ಕಾಪಾಡುವ
ಕಾವಣ ೩೦.೧೮ ಹಂದರ, ಚಪ್ಪರ
ಕಾವಲರ್ ೧೬೬.೪ ಅಂಗರಕ್ಷಕರು
ಕಾವಳಿಸು ೧೨೯.೧೧ ಕತ್ತಲಿಸು
ಕಾಸೆ ೪೮.೧೭ ಕಾಶಾ (ಸಂ.), ಕಚ್ಚೆ
ಕಾಹು ೯೪.೧ ರಕ್ಷಣೆ
ಕಾಹುರ ೯೨.೧೮ ಸಡಗರ, ಉದ್ರೇಕ
ಕಾಳಿಂದಿ ೪೧.೨ ಯಮುನಾನದಿ
ಕಾಳೆ ೫೦.೧ ಕಹಳೆ
ಕಾಳೆಗವಱೆ ೨೮.೨೯ ರಣಭೇರಿ
ಕಾಳ್ಗೊಪ್ಚ ೫೭.೨೯ ಕಾಡತೊರೆ
ಕಾೞಾಗು ೧೨೭.೨೭ ಕೆಟ್ಟುಹೋಗು
ಕಾೞ್ಗೆಡೆ ೯೨.೧೯ ದುರ್ಭಾಷೆಯನ್ನಾಡು
ಕಾಟ್ಟುರ ೩.೨೭ ಕಾಡತೊರೆ
ಕಿಚಿಕಿಲ್ ೧೨೦.೨೩ ಕೆನೆ
ಕಿಟ್ಟು ೧೪.೨೧ ಮುಟ್ಟು
ಕಿಡುದೆಸೆ ೧.೧೦ ಕೀಳ್ದೆಸೆ
ಕಿತವ ೧೪೪.೭ ಕಪಟಿ, ಮೋಸಗಾರ
ಕಿತ್ತಡಿ ೫೮.೧೧ ವ್ರತಿ, ತಪಸ್ವಿ
ಕಿತ್ತಿಲಿ ೯೭.೨೮ ಸಣ್ಣಲಿ
ಕಿನಿಸು ೪೩.೩ ಕೋಪ
ಕಿನ್ನೆಲ ೧೫೩.೨೪ ಪಾತಾಳ
ಕಿರ್ಚು ೩.೧ ಕಿಚ್ಚು, ಬೆಂಕಿ
ಕಿಱುಕುಳ ೧೨೫.೭ ಅಲ್ಪ, ಸಾಮಾನ್ಯ
ಕಿಱುನೊಣ ೧೦೦.೨೯ ಕಿರುಜೇನು
ಕಿಂಶುಕ ೩೪.೯ ಮುತ್ತುಗ
ಕಿಸಿ ೮೭.೨೮ ತೆರೆ
ಕಿಸುಗಣ್ಣು ೪೧.೮ ಕೋಪಗೊಳ್ಳು
ಕಿಸುರ್ ೧೦೩.೧೨ ತಾಮ್ರ. ಕೆಂಪುಬಣ್ಣ
ಕಿಸುಪೊನ್ ೫೪.೧೯ ತಾಮ್ರ
ಕಿಳಿರ್ ೨೮.೨೯ ಕೆನೆ
ಕಿಬ್ಬರಿ ೭೬.೨೩ ಕಿಬ್ಬರಿ ; ಕೀಳುಬದಿ
ಕಿಬ್ಸೆಱಗು ೨೦.೧೫ ಸೆರಗಿನ ತುದಿ
ಕೀರ್ತಿಮುಖ ೯೪.೬ ಅಣಸು, ಕೋಡಿನ ಆಭರಣ
ಕೀಱು ೪.೨ ಕಿರುಚು, ಭಯದಿಂದ ಕೂಗು
ಕೀಱುಗಂದ ೪೮.೧೮ ಗೀರುಗಂಧ
ಕೀಲ್ ೧೩೫.೧೩ ನಾಟು
ಕೀಸು ೧೦೩.೨೩ ಕೆತ್ತು
ಕೀಟಿಲ್ ೧೧೧.೨೯ ಕೀಳು
ಕೀೞ್ ೮೪.೨೭ ಕಡಿವಾಣ
ಕೀೞ್ಗೈಮೆ ೭.೨೫ ಕೀಳುಕೆಲಸ ; . ಕಡಿವಾಣದ ಕೆಲಸ
ಕುಕಿಲ್ ೬೪.೬ (ಕೋಗಿಲೆ) ಧ್ವನಿಮಾಡು
ಕುಂಚ ೭೬.೨೯ ಚಾಮರ
ಕುಂಜ ೧೪೮.೭ ಮಂಟಪ
ಕುಟಿಲಗಾಮಿ ೭.೨೨ ವಕ್ರಮಾರ್ಗದಲ್ಲಿ ನಡೆಯುವವನು
ಕುಟ್ಮಲ ೧೫೦.೯ ಮೊಗ್ಗು
ಕುಡಿ (ಡು) ಪುರ್ಬು ೬೧.೨೫ ವಕ್ರವಾದ ಹುಬ್ಬು
ಕುಡಿಯ ೬೨.೨೦ ಒಕ್ಕಲಿಗ
ಕುಡುನೋಟ ೯.೧೫ ಕೊಂಕುನೋಟ

ಕುತ್ತ ೧.೬ ; ೨.೮ ರೋಗ ; ಕಷ್ಟ
ಕುತ್ತು ೮೪.೧೩ ಘಾತಿಸು, ಹೊಡೆ
ಕುತ್ತುಱ ೮೪.೪ ಪೊದೆ
ಕುತ್ತೆಸಳ್ ೫೩.೨೧ ಚಿಕ್ಕ ದಳ
ಕುಂದ ೪೩.೧೯ ಮೊಲ್ಲೆ, ಮಲ್ಲಿಗೆ
ಕುಂದಣ ೧೦೧.೨೭ ಉತ್ತಮವಾದ ಚಿನ್ನ
ಕುಂದು ೧೧.೧೫ ಕೊರತೆ
ಕುಂಬತಳ ೧೧೧.೧೪ ಕುಂಭ ಸ್ಥಲ (ಸಂ.)
ಕುಂಬಿಡು ೪೮.೬ ಮಣಿ, ನಮಸ್ಕರಿಸು
ಕುಂಬೆ ೧೬.೪ ಯಜ್ಞಭೂಮಿಯ ಆವರಣ
ಕುಂಭಸಂಭವ ೪೬.೨೩ ಅಗಸ್ತ್ಯ
ಕುಂಭೀಪಾಕ ೨೬.೧೧ ಒಂದು ಘೋರ ನರಕ
ಕುಂಭೋದ್ಭವ ೧೦.೧೨ ಅಗಸ್ತ್ಯ
ಕುರುಳ್ ೫೯.೨೯ ತಲೆಗೂದಲು
ಕುಱುವಾನಿಸ ೬೬.೧೭ ಅಲ್ಪಮನುಷ್ಯ
ಕುಱು ೩೫.೧ ಕುರು
ಕುಱುಪು ೫೦.೨೭ ಗುರುತು, ಚಿಹ್ನೆ
ಕುಱುಂಬುಲ್ಲು ೨೫.೨ ಕುರುಚಲು ಹುಲ್ಲು
ಕುಲಟಾಂಗನೆ ೧೭.೪ ಹೀನ ಸ್ತ್ರೀ
ಕುವಿ ೨೨.೧೬ ಕೂಗು
ಕುಶ ೧೫೫.೨೨ ದರ್ಭೆ
ಕುಸುಱು ೧೦೧.೨೫ ಹೂವಿನ ಕೇಸರ
ಕುಳಿಕ-೯೪.೧೬ ಕುಲಿಕ (ಸಂ.), ಗುಳಿಕ, ಕೇತು
ಕುಳಿರ್ ೨೬.೩೦ ತಂಪು
ಕುಳಿಸ ೭೨.೨೩ ಕುಲಿಶ (ಸಂ.), ವಜ್ರಾಯುಧ
ಕುಟಿಸು ೧೬೪.೩ ಛಿದ್ರಿಸು
ಕೂಟ ೧೦.೨೦ ಸಂಗ
ಕೂಟ ೪೦.೧೬ ಶಿಖರ
ಕೂಂಟು ೧೪೫.೨೧ ಕುಂಟು
ಕೂರಂಬು ೫೬.೧೪ ಹರಿತವಾದ ಬಾಣ
ಕೌರ್ ೨.೧೦ ಪ್ರೀತಿಸು
ಕೂರ್ಪರ ೮೧.೧೧ ಮೊಳಕೈ

ಕೂರ್ಪು ೧೨೦.೨೨ ಬಲ, ಶೌರ್ಯ
ಕೂರ್ಮೆ ೧೨.೨೦ ; ೧೩೫.೪ ಪ್ರೀತಿ, ಆಸಕ್ತಿ
ಕೂರ್ವಾಳ್ ೧೨.೬ ಹರಿತವಾದ ಕತ್ತಿ
ಕೂಲ ೬೪.೨ ದಡ
ಕೂಳ (ಱ) ೨೫.೨೩ ಖೂಳ (ಸಂ.)
ಕೂಱ್ ಕುದಿಗೊಳ್ ೩೮.೧೦ ತಳಮಳಿಸು
ಕೃತ್ತಿವಾಸ ೪೦.೨೯ ಚರ್ಮಾಂಬರ
ಕೃಷ್ಣಶಲಾಕೆ ೧೯.೨೭ ಕಬ್ಬಿಣದ ಸಲಿಕೆ
ಕೆಕ್ಕಳಿಸು ೯೨.೨೧ ಭಯದಿಂದ ವಿಕಾರಗೊಳ್ಳು
ಕೆಕ್ಕೆ ೨೬.೪ ಕೆನ್ನೆ
ಕೆಡೆ ೩೮.೫ ಬೀಳು
ಕೆತ್ತು ೯೦.೧೫ ಅದಿರು, ನಡುಗು
ಕೆಂದಳಿರ್ ೩೧.೨೫ ಕೆಂಪು ಚಿಗುರು
ಕೆನ್ನೀರು ೬೬.೬ ರಕ್ತ
ಕೆಂಬರಲೋಲೆ ೧೦೩.೪ ಕೆಂಪುಹರಳಿನ ಓಲೆ
ಕೆಮ್ಮನೆ ೨೫.೧೦ ಸುಮ್ಮನೆ
ಕೆಯ್ದುಗೆಯ್ ೮೫.೧೩ ಕಾಳೆಗವಾಡು
ಕೆಯ್ವೊಲ ೯.೭ ಹಿಡುವಳಿ, ಸಣ್ಣ ಹೊಲ
ಕೆಲ ೫೫.೧೦ ಸಮೀಪ
ಕೆಲಚು ೧೧೧.೧೫ ಸಹಾಯ
ಕೆಲಸಾರ್ ೭೦.೪ ಆಚೆಹೋಗು, ತೊಲಗು
ಕೆಲೆ ೩.೨೨ ಉತ್ಸಾಹದಿಂದ ಕೂಗು
ಕೆಸರ್ಮಲ್ಲಿಗೆ ೧೧.೨೧ ತಾವರೆ
ಕೆಱವು ೪೫.೧೭ ಇಳಿವಯಸ್ಸು
ಕೇಗಿ ೪೨.೧೮ ಕೇಕೆ ಹಾಕು
ಕೇಂಕಾರ ೪೦.೧ ಹಂಸಧ್ವನಿ
ಕೇಣಿ ೯೨.೨೧ ಕೇಳಿ, ವಿಹಾರ
ಕೇಣಿ ೧೪೩.೨೭ ಕ್ರೇಣಿ (ಸಂ.), ಮುನ್ನಡೆ
ಕೇತನ ೨೯.೩ ಧ್ವಜ
ಕೇರ್ ೧೪೯.೧೦ ಗೋಡೆ
ಕೇಱು ೧೧೧.೬ ಕೇರು
ಕೇಸರಿ ಮಧ್ಯೆ ೧೪೮.೪ ಸಿಂಹದಂತೆ ಬಡನಡುವಿನವಳು

ಕೌಂಗು ೮.೨೪ ಅಡಕೆಮರ
ಕೌವರೆ ೫೭.೭ ಸಂಭ್ರಮ
ಕೌಸುಂಭ ೩೯.೧೨ ಆರಕ್ತವರ್ಣ
ಕೌಳುಡೆ ೩೯.೨೭ ಮೆತ್ತೆ, ದಿಂಬು

**ಖ**

ಖಗ ೧೭.೨೩ ಪಕ್ಷಿ
ಖಂಡ ೧೪೫.೨೮ ತುಂಡು
ಖತಿ ೧೫೪.೨೬ ರೋಷ, ಕೋಪ
ಖಲ ೧೧೧.೧೬ ದುಷ್ಟ, ನೀಚ
ಖಳಿಲೆ ೯೪.೧೭ ಗ್ರೀಷ್ಮಋತು
ಖುರ ೩೦.೪ ಗೊರಸು
ಖೊಪ್ಪರಿಸು ೯೫.೧೬ ಹೊಡೆ
ಖೋಡಿ ೧೪೫.೧೨ ದೋಷಿ, ನೀಚ

**ಗ**

ಗಗ್ಗರಗೆಜ್ಜೆ ೯೪.೭ ಗಲಗಲ ಶಬ್ದಮಾಡುವ ಕಾಲಿನ ಬೆಳ್ಳಿಯ ಕಡಗ
ಗಜಬಜಿಸು ೧೫೭.೨೪ ಕೋಲಾಹಲ ಮಾಡು
ಗಜೆ ೭೪.೧೧ ಗದೆ
ಗಂಜಿಯೆಕ್ಕಸರ ೮೩.೨೫ ಗುಲಗಂಜಿಯ ಏಕಾವಳಿ
ಗಟ್ಟಿವುಗುಳ್ಚು ೨.೧೯ ಗಂಧವನ್ನು ಅರೆದು ತೆಗೆ. ವಿಲಾಸದಿಂದ ತಿರುಗು
ಗಟ್ಟಿವಳ್ತಿ ೨.೨೦ ಗಂಧದವಳು
ಗಟ್ಟಿಸು ೯೨.೨೨ ಹೊಡೆ
ಗಡ ೧.೧ ಅಲ್ಲವೆ
ಗಡಣ ೫೦.೯ ಸಮೂಹ
ಗಡಸುಗಾಱ ೧೪೮.೧೪ ಕೆಚ್ಚಿನವ
ಗಡಸುಗಾರ್ತಿ ೫.೨೦ ಗಟ್ಟಿಗಿತ್ತಿ
ಗಡಾವಣೆ ೯೨.೨೨ ಗದ್ದಲ
ಗಣ ೧೩೯.೧೨ ಸಮೂಹ, ಸೇನೆ
ಗಂಟುಗೊಳ್ ೮೬.೬ ನಿಕಟವಾಗಿ ಸೇರು
ಗಂಟೊಡೆ ೨.೨೬ ಕುಡಿಯೊಡೆ
ಗಂಡ ೩೯.೨೦ ; ೧೦೦.೧೧ ಶೂರ. ಶ್ರೇಷ್ಠ
ಗಂಡಮಂಡಲ ೭೨.೨೧ ಗಂಡಸ್ಥಲ
ಗಂಡುಗತ್ತರಿ ೭೯.೨೧ ಬಲವಾದ ಕತ್ತರಿ
ಗಂಡುಗಲಿ ೨೯.೧ ವೀರಸಾಹಸಿ
ಗಂಡುವರಿಜ ೯೮.೧೫ ರೂಪವೆತ್ತ ಶೌರ್ಯ
ಗತಕಿ ೧೫೨.೧ ಘಾತಕಿ, ಕಪಟಿ
ಗದ್ಗದ ೪೯.೭ ಅಸ್ಪಷ್ಟಧ್ವನಿ
ಗನ ೧೧೫.೩೦ ಘನ (ಸಂ.)
ಗಂದರ ೭೬.೨೯ ಗಂಧರ್ವ
ಗಂದರಗಿವಿ ೭೫.೧೯ ಈಶ್ವರ
ಗಂದಿಗ ವಸರ ೧೦೩.೬ ಗಂದಿಗರ ಸಮೂಹ
ಗನ್ನ ೧೬೩.೨೪ ಕಪಟ
ಗನ್ನಗತಕ ೯೬.೨೭ ವಂಚನೆಯ ಕಾರ್ಯ, ತಂತ್ರಕೌಶಲ
ಗಮಕ ೬೬.೨೪ ಉತ್ಸಾಹ
ಗಂಭೀರೆ ೮.೮ ಆಳವುಳ್ಳವಳು; ಗಾಂಭೀರ್ಯವುಳ್ಳವಳು
ಗಮ್ಮನೆ ೧೧೨.೧೦ ಶೀಘ್ರವಾಗಿ
ಗರಗರಿಕೆ ೫೦.೮ ಸೊಬಗು
ಗರವಟ್ಟ ೬೪.೧೮ ಗ್ರಹಪಟ (ಸಂ.), ಗ್ರಹರೇಖೆ; ಯಜ್ಞಶಾಲೆ (?)
ಗರುವಾಯ ೯೨.೨೩ ಗರುವಿಕೆ
ಗರುವೆ ೧೨೩.೧೮ ಗರಿಮಾ (ಸಂ.), ಮರ್ಯಾದಸ್ಥೆ
ಗಱಿಕೆ ೪೩.೧೭ ದೂರ್ವಾಂಕುರ
ಗಱಿವೂ ೨.೨೭ ಕೇದಗೆ
ಗಲ್ಲಣೆ ೪೭.೬ ತೊಂದರೆ, ಗಾಸಿ
ಗವಾಕ್ಷ ೫೦.೧೩ ಕಿಟಿಕಿ
ಗಸಣೆ ೯೨.೨೨ ಘರ್ಷಣ (ಸಂ.), ತಿಕ್ಕಾಟ
ಗಹನ ೪.೧೮ ಕಷ್ಟ
ಗಳ ೫೨.೫ ಕಂಠ
ಗಳತ್ ೩೪.೧೮ ಉದುರುತ್ತಿರುವ
ಗಱಿಪು ೨೩.೧೫ ಹರಟು
ಗಱಿಸಾಳಿವೆಣ್ ೬೧.೨೭ ಕಷ್ಟಪಟ್ಟು ಸಂಪಾದಿಸುವ ಹೆಣ್ಣು
ಗಟ್ಕನೆ ೬೫.೧ ಗಳಕ್ಕನೆ
ಗಾಡಿ ೨೧.೯ ಬೆಡಗು, ಸೊಬಗು

ಗಾಣ ೧೫೧.೧೬ ಗಾನ
ಗಾಂಪ ೮.೪ಹೆಡ್ಡ, ಮೂಢ
ಗಾರಿಗೆ ೫೬.೧೬ ಕರಿದ ತಿಂಡಿ
ಗಾರುಡಿಗತನ ೧೨೫.೬ ತಂತ್ರ, ಠಕ್ಕು
ಗಾಱುಗಿಡು ೧೪೩.೬ ಒಣಗು, ರಸಹೀನವಾಗು
ಗಾವರಿಸು ೫೪.೩ ಶಬ್ದಮಾಡು (ಗಾವರ=ಧ್ವನಿ, ಮೊರೆತ)
ಗಾವಿಲ ೨೪.೧೪ ಗ್ರಾಮೀಣ (ಸಂ.), ಹಳ್ಳಿಯವ, ಮೂಢ
ಗಾಸಿಗೈ ೧.೯ ತೊಂದರೆಮಾಡು
ಗಾಳುಗೂಟಿ ೧೬೩.೨೩ ಎದುರಿಸುವ ಖೂಳ
ಗಾಳು ಮೂಳ ಬಾಳರ್ ೧೫೫.೨೬ ಹಾಳು ಮೂಢ ಜೀವಿಗಳು
ಗಿಡಿ ೬೫.೧೩ ತುರುಕು
ಗೀಟಿಡು ೩.೧೦ ಘೀಂಕರಿಸು
ಗುಜ್ಜು ೫೧.೧೧ ಕಿರಿದು
ಗುಡಿಗಟ್ಟು ೪೯.೨ ; ೯೦.೨೩ ಮಂಡಲವಾಗಿ ಕಟ್ಟು ; ಸುತ್ತ ಸೇರು
ಗುಣ ೧.೧ ಗುಣ. ಸ್ವಸ್ಥತೆ
ಗುಂಡಿಗೆ ೩೦.೧೨ ಕಮಂಡಲು
ಗುಂಡುಗೊಂಡು ೭೨.೧೨ ಸಮೂಹಗೊಂಡು
ಗುಣ್ಪು ೭.೧೮ ಆಳ, ಗಭೀರತೆ
ಗುದಿ ೮೩.೨೩ ಮರಹತ್ತಲು ಉಪಯೋಗಿಸುವ ಪಾದಬಂಧನ
ಗುಬ್ಬಿಗಂಕಣ ೨೦.೭ ಪಕ್ಷಿಗಳ ಚಿತ್ರಗಳಿಂದ ಕೂಡಿದ ಕಂಕಣ
ಗುಮ್ಮ ೬೦.೮ ಗೂಬೆ
ಗುರ್ವು ೯೦.೨೬ ಭಯ
ಗುಱುಗುಮ್ಮನೆ ೬೧.೧೨ ಮೌನವಾಗಿ, ಕ್ರಿಯಾಶೂನ್ಯವಾಗಿ
ಗುಹ ೧೫೯.೨೦ ಷಣ್ಮುಖ
ಗುಳ ೧೦೩.೧೮ ಗುಡ (ಸಂ.), ಬೆಲ್ಲ
ಗುಳಿ ೯೪.೬ ಆನೆ ಕುದುರೆಗಳ ಪಕ್ಷರಕ್ಷೆ
ಗೂಳೆಯ ೯೨.೨೩ ಜನ ಗುಂಪುಗೂಡಿ ಊರು ಬಿಡುವಿಕೆ
ಗೆಂಟು ೩.೫ ದೂರ
ಗೆಡೆ ೬೫.೨೭ ಜೊತೆ
ಗೆಣೆ ೮೧.೧೧ ಕೆಳೆ, ಸ್ನೇಹ
ಗೆತ್ತು ೧೯.೨ ಭಾವಿಸಿ, ಭ್ರಮಿಸಿ. (ಧಾ.—ಗಿಱು)
ಗೆಯ್ಮೆ ೧೧.೧೩ ಕೆಲಸ
ಗೇಣ ೩.೬ ನೀಳ್ಗತ್ತಿ
ಗೊಜ್ಜಗ ೪೩.೮ ಸೇವಂತಿಗೆ
ಗೊಂಟು ೧೦೧.೨೧ ದಿಕ್ಕು
ಗೊಡ್ಡಾಟ ೧೨೬.೨೪ ವ್ಯರ್ಥವಾದ ಆಟ
ಗೊಂಡೆ ೧೦೩.೩ ಗೊಂಚಲು
ಗೊತ್ತು ೫೫.೩ ನೆಲೆ, ನಿವಾಸ
ಗೊಂದಣ ೫೪.೮ ಸಮೂಹ
ಗೊಂದಿ ೧೧೦.೮ ಓಣಿ
ಗೊಂದೆ ಬೊಂದಿ ೭೪.೧ ಪಶುಶರೀರ
ಗೊರವ ೪೦.೨೩ ಶಿವ
ಗೊಲೆ ೧೪೫.೧೮ ಬಿಲ್ಲಿನಕೊನೆ, ಕೊಪ್ಪು
ಗೋಣ್ ೩೭.೨೬ ಕುತ್ತಿಗೆ
ಗೋಣ್ಣವಿರ್ ೪೨.೨೪ ಕೇಸರ
ಗೋರಿಡು ೩೭.೩೦ ಒಟ್ಟುಗೂಡಿಸು
ಗೋಱುಗಲ್ ೫೯.೩ ಬೆಣಚುಕಲ್ಲು
ಗೋಷ್ಠಿ ೧೭.೨೮ ಸಭೆ ; ಕಥಾಲಾಪ
ಗೋಹುರ ೧೦೨.೧೩ ಗೋಪುರ (ಸಂ.)
ಗೋಟಾಯಿಲ ೫೦.೯ ಗೋಟಾಯಲ್ಲ, ಗೋಟಾಯ್ತ್ತ, ಕುದುರೆ ಸವಾರ

## ಘ

ಘಟೆ ೩.೭ ಸಮೂಹ, ಹಿಂಡು
ಘಟಿತ ೫.೩೦ ಸೇರಿದ
ಘನ ೩.೭ ಸಾಂದ್ರ. ಮೇಘ
ಘಲ್ಲಣೆ ೭೩.೪ ಧ್ವನಿ
ಘೂಕ ೧೩೨.೨೫ ಗೂಬೆ
ಘೋಷ ೧೬೬.೭ ನಾದ

## ಚ

ಚಂಚೂಪುಟ ೨೩.೧೪ (ಮುಚ್ಚಿದ) ಕೊಕ್ಕು
ಚಟಿಕೆ ೧೮.೧ ಹೆಣ್ಣುಗುಬ್ಬಿ
ಚಟುಲ ೧೨೪.೧೪ ಚಂಚಲ
ಚಂಡಭಂಡನ ೨೮.೩೦ ಘೋರಯುದ್ಧ
ಚಂದವ ೧೩೯.೯ ಚಂದ್ರಮ (ಸಂ.)
ಚಂದ್ರಸಾಲೆ ೩೩.೩ ಉಪ್ಪರಿಗೆಯ ಮೊಗಸಾಲೆ
ಚಮೂರ ೨೮.೧೩ ಹುಲಿ
ಚರಮದಿಕ್ಕಾಂತೆ ೨೨.೬ ಪಶ್ಚಿಮದಿಗಂಗನೆ
ಚರು ೪೩.೧ ಹೋಮಕ್ಕಾಗಿ ಮಾಡಿದ ಅನ್ನ
ಚಲ ೧೧೧.೨ ಛಲ (ಸಂ.)
ಚಲದಂಕ ೫೯.೨೮ ಹಠದ ಬಿರುದುಳ್ಳವನು
ಚಲ್ಲ ೯೪.೧೮ ಸಂತಸ
ಚವಲಂಬ ೧೪೫.೨ ಕಣ್ಣೆವೆ
ಚಳಚಳಿಸು ೬೯.೨೪ ಹೊಳೆಹೊಳೆ
ಚಳಿ ೧೨೧.೨೭ ಕುಗ್ಗು, ಶಕ್ತಿಗುಂದು
ಚಾಪ ೧೪೫.೨೭ ಬಾಣ
ಚಾರು ೪೩.೧ ಮನೋಹರವಾದ
ಚಾಳಿಸು ೧೨೨.೪ ದಣಿಸು, ಶ್ರಮಪಡಿಸು
ಚಾಪ್ ೫೨.೧೫ ರಾಹು
ಚಿಣ್ಣ ೧೫೧.೧೧ ಎಳೆಯವನು
ಚಿತ್ತಗ ೮೪.೧೩ ಚಿತ್ರಕ (ಸಂ.), ಚಿರತೆ
ಚಿದ್ರ ೧೧೨.೭೯ ಛಿದ್ರ (ಸಂ.), ಒಡಕು.
ಚಿವುಡು ೫೮.೨೨ ಚಿವುಟು
ಚುಕ್ಕಿ ೧೦೪.೧೧ ಶುಕ್ರ (ಸಂ.)
ಚುನ್ನ ೩೪.೨೨ ನಿಂದೆ
ಚುರ್ಚುರ್ ೩.೧ ಸುಡು, ಉರಿ
ಚೂಚುಕ ೨೧.೭ ಸ್ತನದ ಕೊನೆ
ಚೂಣಿ ೯೦.೧೯ ಚೂಳಿ, ಮುಂಭಾಗ. ಮುಂದಳ
ಚೂಳಯ ೧೦೧.೨೬ ಮುತ್ತಿನ ಬೈತಲೆ
ಚೆಂಗಾವಿ ೫೬.೧೩ ಕೆಂಪುಕಾವಿ
ಚೆಚ್ಚರ ೧೦.೨೪ ಬೇಗ, ಶೀಘ್ರವಾಗಿ
ಚೆಂದವಗಲ್ ೫೪.೧೯ ಚಂದ್ರಕಾಂತಶಿಲೆ
ಚೆಂದಳಿರ್ ೧೬.೨೫ ಕೆಂಪು ಚಿಗುರು
ಚೆಂದೆಂಗು ೮.೨೨ ಕೆಚ್ಚನೆ ತೆಂಗು
ಚೆನ್ನಪೊಂಗ ೫೭.೧೫ ಧೀರ ಸುಂದರ
ಚೆನ್ನಸುಗೆ ೩೧ ೨೫ ಚಿಗುರಿದ ಅಶೋಕ, ರಕ್ತಾಶೋಕ
ಚೆಂಬವಳ ೬.೧೫ ಕೆಂಪು ಹವಳ
ಚೆಲ್ಲಗಂಗಳ್ ೧೨೨.೨೬ ನಿಡಿದಾದ ಕಣ್ಣುಗಳು
ಚೇಲಾಂಚಲ ೩೬.೧೯ ವಸ್ತ್ರದ ಸೆರಗು
ಚೊಕ್ಕ, ಚೊಕ್ಕಳ ೫೪.೨೭ ಶುಚಿ, ಹಸನು
ಚೊಕ್ಕಳಿಕೆ ೯೧.೧೦ ಸೊಗಸು
ಚೊಚ್ಚಲ್ ೯೯.೪ ಮೊದಲು ಹುಟ್ಟಿದ್ದು
ಚೊಲ್ಲೆಯ ೪೭.೪ ತುರುಬಿನ ಕೊನೆಯ ಹೂಗೊಂಚಲು

## ಜ

ಜಕ್ಕ ೫೦.೧೪ ಯಕ್ಷ (ಸಂ.)
ಜಕ್ಕಸರ ೩೮.೧೮ ಚಕ್ರಸರ, ಚಂದ್ರಹಾರ (?)
ಜಕ್ಕಂದೊಬಿಲಿ ೩.೨೫ ಕೋಣ
ಜಕ್ಕುಳಿಸು ೧೨೩.೨೭ ಆಟವಾಡು, ಚಕ್ಕಂದವಾಡು
ಜಗಚ್ಚಕ್ಷು ೨೭.೧೨ ಸೂರ್ಯ
ಜಗುಬ್ ೧೯.೨೩ ಜಾರು, ಕಳಚು
ಜರ್ಗು ೫೫.೧೭ ಜಗ್ಗು, ಕುಸಿ
ಜಂಕಣೆ ೬೪.೨೪ ಜರ್ಬು, ಗದರಿಕೆ
ಜಂಕಿಸು ೧೫೬.೧೮ ಕೂಗು
ಜಂಗಮ ೩೦.೮ ಚರ
ಜಂಗುಳಿ ೪೭.೭ ಸಮೂಹ
ಜಂಜಡ ೧೧೯.೮ ಕ್ಲೇಶ
ಜಡ ೧.೨ ಮಂದ. ಜಡ್ಡು
ಜಡಭರಿತ ೨.೪ ಜಲದಿಂದ ತುಂಬಿದ. ಜಡತೆಯಿಂದ ತುಂಬಿದ
ಜಂಟಿ ದೇವರ್ ೬೪.೧೪ ಅಶ್ವಿನೀ ದೇವತೆಗಳು
ಜತಿ ೬೧.೨೦ ಯತಿ (ಸಂ.)

ಜತ್ತುಕ ೧೧೧.೧೨ ಕಪಟ
ಜನಕ ೧೭.೧೪ ; ೧೧೧.೭ ತಂದೆ. ಜನಕರಾಜ
ಜಂತ ೮೩.೨೫ ದಂತ
ಜಂತೆ ೫೪.೨೧ ಜಂತಿ
ಜಂತ್ರ ೮೦.೧೩ ಯಂತ್ರ
ಜನ್ನ ೧೫.೪ ಯಜ್ಞ (ಸಂ.)
ಜನ್ನದಾರ ೮೮.೩ ಯಜ್ಞಸೂತ್ರ
ಜನ್ನವಗೆ ೧೩೨.೧೭ ವೀರಭದ್ರ
ಜನ್ಯ ೧೪೪.೨೪ ಕಾಳಿಗ
ಜಂಪತಿವಕ್ಕಿ ೨೬.೨೭ ದಂಪತಿಪಕ್ಷಿ, ಚಕ್ರವಾಕ
ಜಂಬೂವೃಕ್ಷ ೬೫.೨೨ ನೇರಿಳೆಮರ
ಜರೆ ೫೮.೧೫ ಮುಪ್ಪು
ಜರ್ವು ೨೪.೧೧ ಜರ್ಬು, ಗದರು
ಜಱುಚು ೧೯.೪ ಹರಟು
ಜಲ್ಲಣೆ ೭೩.೬ ಜಂಕೃತಿ
ಜಲ್ಲರಿ ೫೪.೨೨ ಝುಲ್ಲರಿ, ಜಾಲರಿ, ತೋರಣ
ಜವಗಿಡಿಸು ೯೪.೧೬ ವೇಗವನ್ನು ಕುಂದಿಸು
ಜವದಾಡೆ ೧೫೮.೧೫ ಜವದಂಡೆ (೧೨.೧೧), ಯಮದಂಡ
ಜವನಿಕೆ ೧೩೯.೨೮ ಯವನಿಕೆ (ಸಂ.), ತೆರೆ
ಜವಹುರ ೩.೨೫ ಯಮಪುರ (ಸಂ.)
ಜವಳಿ ೧೦೮.೨೯ ಯಮಲ (ಸಂ.), ಅವಳಿ
ಜವ್ವನ ೬೯.೨೪ ಯೌವನ
ಜಸ ೬೩.೨೩ ಯಶಸ್ಸು
ಜಳಕ ೨೭.೪ ಸ್ನಾನ
ಜಳಿಕ ೧೧೨.೭ ಮಾಯಗಾರ
ಜಾಗವರಲ್ ೧೩೧.೧೧ ಪಚ್ಚೆಹರಳು
ಜಾಡಿಸು ೧೦೨.೬ ಕೊಡಹು
ಜಾಣಿಲಿ ೧೧೮.೨೫ ಜಾಣತನವಿಲ್ಲದ
ಜಾದಿ ೪೩.೮ ಜಾತಿ (ಸಂ.), ಜಾಜಿ
ಜಾದು ೭೨.೨೧ ಕೆಂಪುಬಣ್ಣ
ಜಾನಿಸು ೨೦.೨೪ ಧ್ಯಾನಿಸು
ಜಾಯಿಲ ೮೪.೧ ನಾಯಿ
ಜಾಲ ೪೨.೨೫ ಬಲೆ
ಜಾಲೆ ೯೨.೪ ಜ್ವಾಲೆ (ಸಂ.)
ಜಾವಳ ೬೭.೧೧ ಸಾಮಾನ್ಯ (ಸಂ.)
ಜಾಳಿಗೆ ೮೩.೯ ಚಾಲಕ (ಸಂ.), ಹಣದಚೀಲ
ಜಾಳು ೨೭.೮ ಜಳ್ಳು, ನಿಷ್ಪ್ರಯೋಜಕ
ಜಿಡಿ ೩.೨೯ ಜಡಿಮಳೆ
ಜಿತಮಾರ ೧೫೧.೨೩ ಶಿವ
ಜಿತವಾತಾಪಿ ೧೨.೨೨ ಅಗಸ್ತ್ಯ
ಜಿತಾತಿಕಾಯ ೨೯.೨೦ ಲಕ್ಷ್ಮಣ
ಜೀವನ ೩೧.೪ ನೀರು. ಬದುಕು
ಜೀವನ್ಮೃತೆ ೧೮.೧೫ ಬದುಕಿಯೂ ಸತ್ತವಳು
ಜೀವರಕ್ಕೆ ೯೧.೨೮ ಕವಚ
ಜುದ್ದ ೯೭.೧೩ ಯುದ್ಧ (ಸಂ.),
ಜೆಂಬುದೀವಿ ೭೪.೧೩ ಜಂಬುದ್ವೀಪ
ಜೇಂಕರಿಸು ೧೨೨.೧ ಕೊಂಡಾಡು
ಜೇವಡೆ ೧೨೮.೨೨ ಬಿಲ್ಲಿನ ಹುರಿಯನ್ನು ಶಬ್ದಮಾಡು
ಜೈವಾತೃಕ ೭.೨೩ ದೀರ್ಘಾಯುಷಿ. ಚಂದ್ರ
ಜೊನ್ನ ೯.೧೬ ಜ್ಯೋತ್ಸ್ನಾ (ಸಂ.), ಬೆಳುದಿಂಗಳು
ಜೊಂಪ ೩೦.೨೦ ಗೊಂಚಲು
ಜೋಗ ೪೦.೨೬ ಯೋಗ (ಸಂ.)
ಜೋಗವಟ್ಟಿಗೆ ೪೨.೭ ಯೋಗಪಟ್ಟಿಕಾ (ಸಂ.) ಧ್ಯಾನಕಾಲದಲ್ಲಿ ಯೋಗಿಗಳು ಬೆನ್ನು ಮೊಳಕಾಲುಗಳನ್ನು ಸೇರಿಸಿ ಕಟ್ಟುವ ಬಟ್ಟೆ
ಜೋಗವಟ್ಟೆ ೫೬.೩ ಯೋಗಮಾರ್ಗ
ಜೋಡು ೬೦.೨೦ ಜೊತೆ
ಜೋಡುಕಾರ್ತಿ ೬೫.೨೮ ಜೊತೆಗಾತಿ
ಜೋದ ೫೦.೯ ಯೋಕ್ತೃ (ಸಂ.), ಮಾವುತ
ಜೋಂಪಿಸು ೧೪೬.೧ ಮೈಮರೆ
ಜೋಲೆಗ ೭೩.೧೯ ಜೋಲಿಯನ್ನು ಹೊರುವವ
ಜೋಲ್ಮುಡಿ ೮೯.೩೦ ಸಡಿಲವಾದ ಜಡೆ
ಜೋಸೆ ೧೨೨.೨೪ ಜೋಷಾ (ಸಂ.), ಸಂತೋಷಯುಕ್ತಳಾದ ಸ್ತ್ರೀ

ಜೋಹ ೯೨.೨೩ ಯೋಗ (ಸಂ.), ವೇಷ, ಮರೆ

## ಟ

ಟಕ್ಕು ೧೬೬.೨೭ ವಂಚನೆ
ಟಾವು ೯೧.೭ ಠಾವು, ತಾವು
ಟೆಕ್ಕೆಯ ೧೦೮.೨೮ ಧ್ವಜ
ಟೆಬ್ಬರಿಸು ೧೨೧.೪ ಕುಂಠಿತವಾಗಿಸು

## ಡ

ಡಕ್ಕೆ ೨೩.೨ ಒಂದು ಬಗೆಯ ದೊಡ್ಡ ಚರ್ಮ ವಾದ್ಯ
ಡಗೆ ೧೧೨.೧ ಧಗೆ
ಡಗೆವೊಯ್ ೮೪.೭ ಅಪಾಯದಿಂದ ಭಯ ಗೊಳ್ಳು
ಡಾಮರ ೧೪.೨೯ ಗೊಂದಲ, ಕೋಲಾಹಲ. ದಗೆ
ಡೋಲಾಯಮಾನ ೩೯.೧ ತೂಗಾಡುವ
ಡೌಡೆ ೫೦.೧ ನಗಾರಿ

## ತ

ತಕ್ಕ ೨.೧೦ ಯೋಗ್ಯವಾದ
ತಕ್ಕಟಿ ೧೧೦.೬ ಹಿರಿಮೆಯಳಿ
ತಗದ ೧೦.೧೭ ಯೋಗ್ಯವಲ್ಲದ
ತಗರ್ದೇರ ೧೪೦.೩ ಅಗ್ನಿ
ತಗು ೨.೧೦ ತಕ್ಕದಾಗು
ತಗುಳ್ ೧೩೭.೨೮ ಆರಂಭಿಸು, ಮೊದಲು ಮಾಡು
ತಗುಳ್ಚು ೯೦.೨೫ ತಗುಲಿಸು, ಸೇರಿಸು
ತಗೆಬಗೆ ೧೫.೩ ಪ್ರತಿಹತವಾದ ಮನಸ್ಸು
ತಟ ೫.೩೦ ದಡ (ದ್ಭ.)
ತಟ್ಟು ೮೬.೩೦ ಎಚ್ಚರಿಸು
ತಟ್ಟು ೯೦.೨೪ ಥಟ್ಟು, ಸಮೂಹ
ತಡಿ ೭೫.೪ ತಟಿ (ಸಂ.), ತೀರ
ತಡೆವಿಟ್ಟ ೧೩೮.೧೨ ಬಿಡುಗಡೆ ಹೊಂದಿದ
ತಡಂಗುಂಡಿ ೩.೧೯ ತಡೆಯಿರುವ ಗುಂಡಿ
ತಣಿ ೩೨.೩ ಉಷ್ಣವಳಿ
ತಣಿ ೭೦.೧೦ ತೃಪ್ತಿಪಡು
ತಂಡಸ ೧೦೩.೧೯ ಚಿಮಟ
ತಣ್ಗದಿರ ೭.೧೭ ಚಂದ್ರ
ತಣ್ಗದಿರಱೆ ೫೨.೧೯ ಚಂದ್ರಶಿಲೆ
ತಣ್ಣಸು ೪೩.೨೬ ತನು, ಶೈತ್ಯ
ತತ್ತರ ೮೬.೧೧ ಗಾಬರಿ
ತತ್ತಱಿಂದಱಿ ೧೨.೧೩ ತರತರ ತರಿ, ಚೆಲ್ಲಾ ಪಿಲ್ಲಿಯಾಗುವಂತೆ ತರಿ
ತತ್ತಱಿದುಟಿ ೧೨೦.೭ ದಿಕ್ಕೆಡುವಂತೆ ತುಳಿ
ತಥಾಸ್ತು ೧೩.೧೦ ಹಾಗೆಯೆ ಆಗಲಿ
ತದುಕ್ತ ವಿಧಿ ೭೫.೧೬ ಆ ಸಂಬಂಧವಾಗಿ ಹೇಳಿರುವ ನಿಯಮ
ತದೆ ೧೫೪.೩ ಸದೆ. ಹೊಡೆತ
ತನಿಗೆಂಡ ೭೨.೨೫ ನಿಗನಿಗ ಹೊಳೆವ ಕೆಂಡ
ತನಿರಸ ೬೦.೧೬ ಸಾರವತ್ತಾದ ರಸ
ತನಿವಣ್ಣು ೫೩.೨೪ ಮಾಗಿದ (ಸಿಹಿಯಾದ) ಹಣ್ಣು
ತನು ೬೭.೧೮ ದೇಹ
ತನೂಜೆ ೬೮.೨೪ ಮಗಳು
ತಂತು ೧೧೭.೬ ಎಳೆ, ಸರಿಗೆ
ತಂದಲ್ ೫೪.೬ ಸೋನೆ ಹನಿ
ತಮಾಲ ೫೩.೧೮ ಹೊಂಗೆ
ತಂಬಾಲ್ ೧೦೧.೧ ತಂಪಾದ ಹಾಲು
ತರಣ ೧೧೨.೧೯ ತ್ರಾಣ (ಸಂ.)
ತರಣಪಣ್ಯ ೩೧.೯ ದಾಟಿಸುವ ಕೂಲಿ
ತರಹರಿಸು ೧೨೭.೨೨ ಸಮಾಧಾನದಿಂದ ಸಹಿಸು
ತರಳ ೯೧.೩ ಹುಡುಗ
ತರಿಸಮಾಗು ೧೧೪.೧ ತೇಲಿಹೋಗು
ತರುವಲಿ ೧೪೫.೧೩ ತರಳ, ಹುಡುಗ
ತರಂಗ ೪೯.೨೭ ತೆರೆ
ತಱಿಪಿಎಂಡಿ ೧೩೦.೨೮ ಪುಷ್ಪಿತೆಯಾದ ಕಾಂತೆ
ತಱಿಸಲ್ ೫೫.೨೦ ನಿಶ್ಚಯಿಸು

ತಱುಬು ೧೮೩.೨೨ ಮುಂದೆ ಹೋಗದಂತೆ ನಿಲ್ಲಿಸು
ತಲೆಗರೆ ೧೮೫.೧೨ ತಲೆಮರಸಿಕೊಳ್ಳು
ತಲೆಮಡು ೨೪.೨೮ ತಲೆಕೊಡು
ತಲ್ಲಣ, ತಲ್ಲಟ ೭೩.೬ ; ೧೨.೩೦ ಭಯ
ತವಕ ೩೩.೧ ಆತುರ
ತವಸಿ ೧೬.೧೩ ತಪಸ್ವಿ (ಸಂ.)
ತವಿಸು ೨೨.೨೦ ; ೪೬.೩ ಮುಗಿಸು. ದಣಿಸು
ತಳ್ ೪೩.೭ ತೋರು, ಕಾಣು
ತಳ್ ೬೯.೨೦ ಕೂಡು, ಸೇರು, ಹೊದ್ದು
ತಳರ್ ೧೬.೯ ಚಲಿಸು, ಹೊರಡು
ತಳರ್ನೋಟ ೩.೨೮ ಚಂಚಲದೃಷ್ಟಿ
ತಳಾಱ ೧೪೧.೨೧ ತಳವಾರ
ತಳಿ ೪೯.೧೫ ಚೆಲ್ಲು
ತಳಿರ್ ೨.೩ ಚಿಗುರು
ತಳ್ವೊಯ್ ೪೩.೩ ಪ್ರತಿಭಟಿಸು, ತಾಗು
ತಳ್ವು ೧೬.೯ ತಡಮಾಡು
ತಳ್ಳಂಕ ೪.೨ ಭಯ
ತಕ್ಕೆ ೪೯.೧ ಆಲಿಂಗನ
ತಕ್ಕೈಸು ೬೭.೧೬ ಆಲಿಂಗಿಸು
ತಗ್ಗಿಸು ೧೩೯.೧೪ ತಗ್ಗಿಸು
ತಪ್ಪಲ್ ೭೨.೨೨ ತಪ್ಪಲು, ಕಟಕ
ತಾಟು ೫೪.೧ ದಾಟು, ಮುಟ್ಟು
ತಾಣ ೧೦೫.೧೧ ಸ್ಥಾನ
ತಾಂಟು ೧೨೧.೨೨ ತಾಗು, ಬಡಿ
ತಾಂಡವ ೪೨.೧೯ ನೃತ್ಯ
ತಾಂಡವ ೪೭.೨೭ ಒಬ್ಬ ಮುನಿ
ತಾನ ೨೩.೧೦ ರಾಗಾಲಾಪ
ತಾನವಿತಾನ ೧೬೨.೨೭ ಆಲಾಪನೆ ಮತ್ತು ಕಟ್ಟಡ
ತಾಮಸರ್ ೧೧೯.೨೩ ಮೂರ್ಖರು
ತಾಮ್ರತುಂಡ ೨.೬ ಗಿಳಿ
ತಾರಕ ೨೪.೨ ದಾಟಿಸುವ
ತಾರಗೆವಟ್ಟೆ ೫೪.೨೩ ನಕ್ಷತ್ರಮಾರ್ಗ
ತಾರಮಂದ್ರವಿಭೇದ ೨೩.೧೦ ಉಚ್ಚ ಮಧ್ಯಮ ಸ್ವರಭೇದ
ತಾರೆ ೫೬.೧೦ ಬೃಹಸ್ಪತಿಯ ಹೆಂಡತಿ
ತಾಮುರ್ಟ್ಟು ೧೪೪.೩ ಇದಿರೇಟು
ತಾಱ್ ೧೨೩.೫ ಕುಂದು
ತಾಱು ೧೦೪.೧೫ ಬತ್ತು
ತಾಳ್ ೧೧೬.೨೦ ಧರಿಸು
ತಾಳಿಸು ೧೧೨.೯ ಒಗ್ಗರಿಸು
ತಿಟ್ಟ ೩೫.೫ ಸಮೂಹ
ತಿಟ್ಟವಿಡು ೧೦.೧೯ ಚಿತ್ರವಿಡು
ತಿಟ್ಟು ೩೩.೨೫ ದಿಣ್ಣೆ
ತಿಣ್ಣ ೧೩.೨೬ ; ೧೬೨.೫ ಭಾರ. ತೂಕ, ಹಿರಿಮೆ
ತಿಣ್ಪು ೯.೧೦ ತೂಕ, ಭಾರ
ತಿಬ್ಬ ೩೬.೨೬ ತೀವ್ರ (ಸಂ.)
ತಿಮಿರ್ ೬೧.೧೬ ತಿಕ್ಕು
ತಿರಿ ೧೨೩.೪ ಅಲೆದಾಡು
ತಿರಿಕುಳಿ ೬೮.೧೩ ಅಲೆತ
ತಿರುವಾಯ್ ೯೦.೧೬ ಬಿಲ್ಲಿನ ಹೆದೆಯ ಮಧ್ಯಭಾಗ
ತಿರೆ ೧.೧೪ ಸ್ಥಿರಾ (ಸಂ.), ಭೂಮಿ
ತಿಱಿ ೧೨೩.೯ ಹೂಕುಯ್ಯು
ತಿಱಿಕಲ್ಲಾಟ ೪೯.೧೯ ಕಲ್ಲುಗಳನ್ನೆಸೆದು ಹಿಡಿಯುವಾಟ
ತಿಸುಳಿ ೧೦೩.೧೫ ತ್ರಿಶೂಲಿ (ಸಂ.), ಈಶ್ವರ
ತಿಳಿ ೧೩೯.೧೦ ನಿರ್ಮಲ
ತೀಡು ೫೪.೨ ಬೀಸು
ತೀವು ೫೩.೫ ದಟ್ಟೈಸು, ವ್ಯಾಪಿಸು, ತುಂಬು
ತುಡು ೫೮.೨೭ (ಬಾಣ) ತೊಡು
ತುಡುಕು ೬೪.೨೬ ಶೀಘ್ರವಾಗಿ ಹಿಡಿ
ತುತಿಸು ೬೨.೧೪ ಸ್ತುತಿಸು
ತುಬ್ಬಾಗು ೧೧೦.೧೬ ಪತ್ತೆಯಾಗು
ತುಂಬುವೆಱೆ ೫೨.೧೬ ಪೂರ್ಣಚಂದ್ರ
ತುರಂಗ ೧೩೮.೨ ಕುದುರೆ
ತುರಿಪ ೧೧೧.೧೭ ತ್ವರೆ

ತುರು (ಱು) ಗು ೪೩.೧೩ ; ೫೩.೭ ಇಡುಕು, ದಟ್ಟೈಸು
ತುಱುಗಲ್ ೫೮.೧೬ ಸಮೂಹ
ತುಱುಚೆ ೨೭.೭ ತುರುಚಿಯ ಗಿಡ
ತುಱುಬು ೧೩೧.೮ ಸೂಡು
ತುಱುವಳ ೧೫೩.೨೧ ಗೊಲ್ಲ
ತುಱಂಗಮ ೨೯.೪ ಕುದುರೆ
ತುಟಿಲಾಳ್ ೫೧.೨೩ ಕಟ್ಟಾಳು, ವೀರ
ತುಟಿಲ್ ೪೮.೬ ಕೈಜೋಡಿಸಿ ನಮಸ್ಕರಿಸು
ತುಟಿಲ್ಗೆಯ್ ೩೭.೨೮ ನಮಸ್ಕಾರಮಾಡು, ಬೇಡು
ತೂಗು ೩೩.೧೨ ಹೋಲಿಸು
ತೂಂಕು ೨೯.೧೧ ತೂಗಿ ಎಸೆ
ತೂಪಿಱಿ ೧೨೦.೨೨ ಒತ್ತುಸಿರಿನಿಂದ ಓಡು
ತೂಱಿಲ್ಗೊಂಬು ೩೧.೨೩ ನೀಳವಾದ ಕೊಂಬೆ
ತೂಱು ೨೭.೨೩ ತೂರು, ಹಾರಿಸು
ತೂಳ್ ೯೦.೨೦ ಅಟ್ಟು, ಬೆನ್ನಟ್ಟು
ತೃಷ್ಣೆ ೫೨.೧೨ ಆಸೆ
ತೆಕ್ಕನೆ ೧೨೭.೨೫ ಅಧಿಕವಾಗಿ
ತೆಕ್ಕು ೧೩೧.೩೦ ಮೂರ್ಛೆಗೊಳ್ಳು
ತೆತ್ತರ್ ೭೭.೧೦ ಬಂಧುಗಳು ; ಮಿತ್ರರು
ತೆತ್ತಿಸು ೫೯.೩ ನಾಟಿಸು
ತೆಪ್ಪಱು ೧೩.೨೨ ಚೇತರಿಸಿಕೊಳ್ಳು
ತೆಮಳ್ದು ೬೯.೧೬ ಒಟ್ಟುಗೂಡಿಸು
ತೆಱಂಬೊಳೆ ೨೧.೭ ಚೆನ್ನಾಗಿ ಹೊಳೆ
ತೆಲ್ಲಯಿಸು ೭೩.೪ ಹೆಚ್ಚು
ತೆಳ್ಪೊಟಿಲ್ ೧೦೦.೨೯ ಕಿರಿಯ ನೆಲೆ
ತೇಕು (ತೇಂಕು) ೫೪.೩ ; ೧೦೧.೧೦ ತೇಲು
ತೇರಾಳ್ ೫೦.೫ ರಥಿಕ
ತೇರು ೧೦೮.೮ ಗುರಿಮುಟ್ಟು, ಸೇರು
ತೇರೈಸು ೭೬.೨೯ ಹಿಮ್ಮೆಟ್ಟು
ತೇಱ್ ೮೫.೧೮ ಚೇಳು
ತೇಡ್ದೋರ ೭೯.೧೯ ಕಾಲಭೈರವ
ತೊಂಗಲಾಡು ೧೩೨.೮ ತೂಗಾಡು
ತೊಂಗಲ್ ೩೦.೧೭ ಗೊಂಚಲು, ಗುಂಪು
ತೊಂಗು ೫೬.೨೬ ತೊನೆದಾಡು
ತೊಟ್ಟನೆ ೨.೧೯ ಕೂಡಲೆ, ಬೇಗ
ತೊಡವು ೫೨.೯ ಆಭರಣ
ತೊಡಂಬೆ ೨.೨೪ ಗೊಂಚಲು
ತೊಣೆ ೧೪೪.೨ ಜೊತೆ
ತೊಂಡುಗೆಡೆ ೫೮.೧೯ ಚಿಲಿಪಿಲಿಗುಟ್ಟು
ತೊತ್ತಳದುಳಿ ೧೫೨.೧೩ ನುಚ್ಚುನೂರಾಗುವಂತೆ ತುಳಿ
ತೊದಳ್ ೧೩.೩ ಹುಸಿ
ತೊನೆ ೫೭.೨೯ ಉಯ್ಯಲಾಡು
ತೊರೆ ೧೮.೧೭ ಹಾಲಿನಿಂದ ತುಂಬು
ತೊಱೆ ೧೧೧.೧ ಬಿಡು
ತೊವಲುಡೆಯ ೪೦.೨೯ ಶಿವ
ತೊವಲ್ವೊದೆಯ ೧೦೩.೧೬ ಶಿವ. ಎಳೆ ಹಸುರ ಪೊರೆಯುಳ್ಳದ್ದು
ತೊಳಚಿ ೨೭.೭ ತುಲಸಿ (ಸಂ.)
ತೊಟಿಲ್ ೧೫.೧೪ ಸಂಚರಿಸು, ಸುತ್ತು
ತೊಱ್ತು ೧೪.೨೭ ತೊತ್ತು, ಸೇವಕ
ತೋಟಿ ೯೨.೮ ಕೈಕೈ ಕಾಳಗ
ತೋಟಿಗ ೧೪೪.೨೦ ಜಗಳಗಂಟ
ತೋಡು ೧೨೭.೨೮ ಬಿರುದಿನ ಬಳೆ
ತೋಡೆ ೧೪೪.೨೨ ಬಂಗಾರದ ಬಳೆ
ತೋರ ೨.೧೮ ದೊಡ್ಡ
ತೋರದ ೭೫.೯ ಕೆಚ್ಚಿನ
ತೋಱು ೧೫೪.೧೪ ಕಾಣು, ಕಾಣಿಸು
ತೋಳ್ನೆರ ೭.೧೧ ಬಾಹುಬಲದ ಸಹಾಯ
ತ್ರಸ್ತೆ ೬೫.೧ ಭಯಪಟ್ಟವಳು
ತ್ರಿಕರಣ ೨೯.೧೪ ಮನೋವಾಕ್ಕಾಯಗಳು
ತ್ರಿಪಥಗೆ ೩೦.೧೪ ಗಂಗೆ
ತ್ರಿಪುಂಡ್ರ ೭೨.೨೭ ಹಣೆಯ ಮೇಲೆ ಅಥವಾ ಮೈಮೇಲೆ ಧರಿಸುವ ಮೂರು ಗೆರೆಗಳು
ತ್ರಿವಳಿ ೨೧.೭ ನಾಭಿಯ ಮೇಲ್ಭಾಗದ ಮೂರು ಮಡಿಕೆಗಳು

## ದ

ದಕ್ಕಡ ೧೪೨.೧೬ ಸಮರ್ಥ
ದಕ್ಕುಂತಲೆ ೯೭.೩೦ ರಕ್ಷಿಸಲ್ಪಟ್ಟ ತಲೆ
ದಕ್ಷಿಣಾನಿಲ ೫೭.೧ ತೆಂಗಾಳಿ
ದಗಲೆ ೯೧.೨೯ ಜಗಲ (ಸಂ.), ಕವಚ
ದಡದಡಿಸು ೧೨೩.೭ ಕಂಪಿಸು
ದಡ್ಡಿ ೯೪.೯ ತೆರೆ
ದಂಡೆಗರುಳ್ ೭೨.೨೦ ಕರುಳ ಮಾಲೆ
ದತ್ತ ಕನಿಷ್ಠಿಕ ೯೬.೮ ಮೊದಲನೆಯವನು
ದಂದುಗ ೩೯.೧೩ ಕ್ಲೇಶ
ದಪ್ಪಗ ೫೭.೧೯ ದರ್ಪಕ (ಸಂ.), ಮನ್ಮಥ
ದಮ್ಮಣಿ ೩೮.೨೩ ಧರ್ಮಪಾನೀಯ (ಸಂ.), ಅರವಟಿಗೆ
ದರ್ವೀಕರ ೧೪೪.೨೮ ಸರ್ಪ. ಸಟ್ಟುಗ ಹಿಡಿದವನು
ದಲ್ ೯೫.೯ ನಿಶ್ಚಯ
ದವಬಿಲ್ ೧೦೫.೩ ಸುಡುವ ಶೋಕ
ದಸಿ ೧೬೧.೫ ಮರದ ಕತ್ತಿ
ದಳ್ಳಿಸು ೨.೨೯ ವ್ಯಾಪಿಸು
ದಟಿ ೨೮.೨೯ ಪಡೆ, ಸೈನ್ಯ
ದಟಿದು(ವು)ಟಿ ೫೦.೮ ಬಲವಾದ ಸೂರೆ
ದಾಂಗುಡಿ ೪೩.೧೭ ಮುಂಬರಿವ (ಉದ್ದವಾದ) ಕುಡಿ
ದಾಟಿ ೮೮.೧೨ ಅಭ್ಯಾಸ
ದಾಡಿಮ ೫೩.೧೬ ದಾಳಿಂಬೆ
ದಾನಧಾರೆ ೯೪.೪ ಆನೆಯ ಮದೋದಕದ ಧಾರೆ
ದಾನವ ೬೪.೩೦ ರಾಕ್ಷಸ
ದಾಮ ೮೦.೪ ಮಾಲೆ
ದಾರವಂದ ೫೪.೨೨ ದ್ವಾರಬಂಧ (ಸಂ.), ಚೌಕಟ್ಟು
ದಾವು ೪೨.೧; ೯೧.೭ ದಾವ (ಸಂ.), ಅಡವಿ. ಕಾಳ್ಕಿಚ್ಚು
ದಿಗಿಭ ೧೩೧.೨೫ ದಿಗ್ಗಜ
ದಿಟ್ಟಸೋನೆ ೧೪೩.೨೬ ಬಲವಾದ ಧಾರೆ
ದಿಟ್ಟಿ ೩೯.೮ ದೃಷ್ಟಿ (ಸಂ.)
ದಿಂಡು ೧೪೪.೧೧ ರಾಶಿ
ದಿಂಡುಗೆಡೆ ೧೩೦.೧೬ ತೊಲೆಯಂತೆ ಬೀಳು
ದಿನಪತಿ ೭೨.೩ ಸೂರ್ಯ
ದಿಮ್ಮನೆ ೧೯.೧೯ ದೃಢವಾಗಿ
ದಿಮ್ಮಿತು ೮೨.೨೭ ಹಿರಿದು, ಘನ
ದಿಶಾಪಟ ಮಲ್ಲ ೧೩೯.೧೨ ವಿಷ್ಣು
ದುಕ್ಕಂಡ ೩೮.೧೭ ದ್ವಿಖಂಡ (ಸಂ.), ಜೋಡಿಯ
ದುಗುಡ ೧೩.೧೮ ದುಃಖ
ದುಗುಲ ೧೩೯.೧೧ ದುಕೂಲ (ಸಂ.), ವಸ್ತ್ರ
ದುಮ್ಮಾನ ೮.೧೮ ದುರ್ಮಾನ (ಸಂ.), ಖೇದ
ದುರ್ಘಟ ೩೪.೪ (ಹೊಗಲು) ಅಸಾಧ್ಯವಾದ
ದುರ್ಜ್ಞೇಯ ೧೧೯.೨೨ ತಿಳಿಯಲಶಕ್ಯ
ದುರ್ನಿಮಿತ್ತ ೬೬.೧೧ ಅಪಶಕುನ
ದುಱುದುಂಬಿ ೭೪.೨ ದುಷ್ಟ
ದುಸ್ತರ ೧೦೬.೨೧ ದಾಟಲಶಕ್ಯ
ದೂದಟ್ಟು ೪೫.೮ ದೂತಕಾರ್ಯಕ್ಕಾಗಿ ಕಳುಹಿಸು
ದೂದವಿ ೧೧೨.೨೮ ದೂತಿ
ದೂದು ೨೨.೧೩; ೧೪೨.೬ ದೂತಕಾರ್ಯ, ದೂತ್ಯ
ದೂವೆ ೧೦೧.೨೫ ದೂರ್ವೆ
ದೂಸಱು್ ೧೩.೧೧ ನಿಮಿತ್ತ, ಕಾರಣ
ದೂಸಿಗ ೭೮.೧೪ ಸೀರೆವ್ಯಾಪಾರಿ
ದೂಸಿಗವರದರ್ ೧೦೩.೧೫ ಜವಳಿ ವರ್ತಕರು
ದೆಖ್ಖಾಳ ೫೦.೭ ಆಡಂಬರ
ದೆಸೆವಳ ೩೯.೨ ದಿಕ್ಪಾಲಕ
ದೇಗುಲ ೨೩.೧ ದೇವಕುಲ (ಸಂ.), ದೇವಾಲಯ
ದೇವರ ೩೫.೬ ಮೈದುನ
ದೇವಾಗಾರ ೬೩.೫ ದೇವಾರ, ದೇವಸ್ಥಾನ
ದೇಸಿ ೧೩೭.೧೮ ಸೊಬಗು
ದೇಸಿಗ ೭೫.೨೮ ದೇಶಿಕ (ಸಂ.), ಧರ್ಮಗುರು

